ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ

ಸಂಖ್ಯೆ ೨೦

ಶ್ರೀ ಶಾಂಕರಪದಭಾಷ್ಯವಾಕ್ಯಭಾಷ್ಯಸಮೇತ

# ಕೇನೋಪನಿಷತ್ತು

ಉಪನಿಷತ್ತಿನ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ
ಮುಂತಾದವುಗಳೊಡನೆ

ಬರೆದವರು :
ಅಧ್ಯಾತ್ಮಗ್ರಂಥಾವಳಿಯ ಸಂಪಾದಕ
**ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ**

ಎರಡನೆಯ ಸಂಸ್ಕರಣ

**ಅಧ್ಯಾತ್ಮಗ್ರಂಥಾವಳಿ ಕ್ರಮಾಂಕ ೨**

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
೧೯೪೫

# ಹೊಸ ಸಂಸ್ಕರಣದ ಮೊದಲಮಾತು

ಈ ಗ್ರಂಥವು ಅಚ್ಚಾಗಿ ಸುಮಾರು ಹತ್ತು ವರ್ಷಗಳಾದವು. ಅಧ್ಯಾತ್ಮ ಪ್ರಕಾಶಕಾರ್ಯಾಲಯದ ಉದ್ದೇಶಕ್ಕೆ ಅನುಗುಣವಾಗಿ ಈ ಉಪನಿಷತ್ತನ್ನು ಶ್ರೀ ಜಯಚಾಮರಾಜೇಂದ್ರಗ್ರಂಥಮಾಲೆಗೆ ಸೇರಿಸುವದಕ್ಕೆ ಅನುಕೂಲಿಸುವಂತೆ ಈ ಸಲ ಗ್ರಂಥವನ್ನು ಸಂಪೂರ್ಣವಾಗಿ ಪರಿಷ್ಕರಿಸಿರುತ್ತೇನೆ.

ಈ ಸಂಸ್ಕರಣದಲ್ಲಿ ಸಂಸ್ಕೃತಮೂಲವನ್ನು ಮುಖ್ಯವಾಗಿ ಆನಂದಾಶ್ರಮದ ಪ್ರಕಟನೆಯ ಆಧಾರದಿಂದಲೇ ಬರೆದುಕೊಂಡಿರುತ್ತದೆಯಾದರೂ ಬೇರೆಯ ಕಡೆಗಳಲ್ಲಿ ಅಚ್ಚಾಗಿರುವ ಪಾಠಗಳೊಡನೆ ಹೋಲಿಸಿಕೊಂಡು ಹೆಚ್ಚು ಸಮ್ಮತವಾದ ಪಾಠವನ್ನೇ ಗ್ರಂಥಶರೀರದಲ್ಲಿಟ್ಟುಕೊಂಡಿರುತ್ತೇನೆ. ಅನುವಾದ, ಟಿಪ್ಪಣಿ, ಸಾರ–ಇವುಗಳನ್ನು ಅವಶ್ಯವೆಂದು ಕಂಡುಬಂದ ಸ್ಥಳಗಳಲ್ಲಿ ಸರಿಪಡಿಸಿಕೊಂಡು ಶಬ್ದಾನುಕ್ರಮಣಿಕೆಯನ್ನು ಹಿಗ್ಗಿಸಿ ತಕ್ಕಂತೆ ಮಾರ್ಪಡಿಸಿ ಆಯಾ ಶಬ್ದಗಳಿಗೆ ಭಾಷ್ಯಭಾಗಸಂಖ್ಯೆಗಳನ್ನು ಕೊಟ್ಟಿರುತ್ತೇನೆ. ವಾಕ್ಯಭಾಷ್ಯವನ್ನೂ ಕನ್ನಡಿಸಿ ಹೊಸದಾಗಿ ಸೇರಿಸಿರುವದಲ್ಲದೆ ಪೀಠಿಕೆಯನ್ನು ಸಂಪೂರ್ಣವಾಗಿ ಪರಿಷ್ಕರಿಸಿ ಹೊಸದಾಗಿಯೇ ಬರೆದಿರುತ್ತೇನೆ. ಮೊದಲನೆಯ ಪ್ರಕಟನೆಯು "ಅಧ್ಯಾತ್ಮ ಪ್ರಕಾಶ" ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟವಾದಕಾರಣ ಆಗಿದ್ದ ತಪ್ಪುಗಳು ಈಗ ಇರಲಾರವೆಂದೂ ತಿದ್ದಿ ಬೆಳೆಯಿಸಿದ ಈ ಹೊಸ ಆವೃತ್ತಿಯ ಪ್ರಕಟನೆಯು ಓದುಗರಿಗೆ ಹೆಚ್ಚು ಪ್ರಯೋಜನಕರವಾದೀತೆಂದೂ ನನಗೆ ಪ್ರತೀಕ್ಷೆಯಿದೆ.

ಈಶಾವಾಸ್ಯೋಪನಿಷತ್ತಿನ ಪರಿಶೋಧನೆಗೆ ಮಾಡಿರುವಂತೆಯೇ ಈ ಉಪನಿಷತ್ತಿನ ತಿದ್ದುಪಡಿಗೂ ಸಹಾಯಮಾಡಿರುವ ವೇದಾಂತಶಿರೋಮಣೀತ್ಯಾದಿ ಬಿರುದಾಂಕಿತರಾದ ಬ್ರ|| ಶ್ರೀ|| ಎಸ್. ವಿಠಲಶಾಸ್ತ್ರಿಗಳವರಿಗೂ ಶ್ರೀಯುತ ಹೊಳೇನರಸೀಪುರದ ಪ್ಲೀಡರ್ ಪಿ. ಎ಄. ನರಸಿಂಹಯ್ಯನವರಿಗೂ ನಾನು ಕೃತಜ್ಞನಾಗಿರುತ್ತೇನೆ.

ಯ. ಸುಬ್ರಹ್ಮಣ್ಯಶರ್ಮ.

## ಪೀಠಿಕೆ

ಈ ಉಪನಿಷತ್ತು ಭಾಷ್ಯಕಾರರ ಮತದಂತೆ ತಲವಕಾರಶಾಖೆಯ ಸಾಮವೇದದ ಬ್ರಾಹ್ಮಣದಲ್ಲಿ ಒಂಭತ್ತನೆಯ ಅಧ್ಯಾಯವಾಗಿರುವದರಿಂದ ಇದನ್ನು "**ತಲವಕಾರೋಪನಿಷತ್ತು**" ಎಂದೂ ಕರೆಯುತ್ತಾರೆ. ಕೇನ ಎಂಬ ಮಾತಿನಿಂದ ಪ್ರಾರಂಭವಾಗಿರುವ ಇದನ್ನು "ಕೇನೋಪನಿಷತ್ತು" ಎಂದು ಕರೆಯುವ ವೈದಿಕ ರೂಢಿಯೇ ಬಹು ಕಡೆಗಳಲ್ಲಿರುತ್ತದೆ. ಡಾಕ್ಟರ್ ಬರ್ನೆಲ್ ಎಂಬ ಪಾಶ್ಚಾತ್ಯ ಪುರಾತತ್ತ್ವಶೋಧಕರು ಕಂಡುಹಿಡಿದಿರುವ ಒಂದಾನೊಂದು ಕೈಪ್ರತಿಯಲ್ಲಿ ಇದು ಬ್ರಾಹ್ಮಣದ ಒಂಭತ್ತನೆಯ ಅಧ್ಯಾಯವಾಗಿರದೆ ನಾಲ್ಕನೆಯ ಅಧ್ಯಾಯವಾಗಿದೆಯಂತೆ. ಈ ಹೆಚ್ಚು ಕಡಿಮೆಗೆ ಏನು ಕಾರಣವೋ ತಿಳಿಯದು.

## ಉಪನಿಷತ್ತಿನ ಭಾಷ್ಯಗಳು

ಈ ಉಪನಿಷತ್ತಿಗೆ ಶ್ರೀ ಶಂಕರಾಚಾರ್ಯಕೃತವೆಂದು ಪ್ರಸಿದ್ಧವಾಗಿರುವ ಎರಡು ಭಾಷ್ಯಗಳಿರುತ್ತವೆ. ಈ ಎರಡು ಭಾಷ್ಯಗಳೂ ಒಬ್ಬರೇ ಆಚಾರ್ಯರು ಬರೆದವುಗಳೆ ? ಒಬ್ಬರೇ ಎರಡು ಭಾಷ್ಯಗಳನ್ನು ಏತಕ್ಕೆ ಬರೆದರು ?— ಎಂಬ ಪ್ರಶ್ನೆಗಳಿಗೆ ಚಿತ್ತಕ್ಕೆ ತೃಪ್ತಿಕರವಾಗಿರುವ ಉತ್ತರವನ್ನು ಕಂಡುಕೊಳ್ಳುವದು ಕಷ್ಟವಾಗಿರುತ್ತದೆ. ಈ ಭಾಷ್ಯಗಳೆರಡಕ್ಕೂ ವ್ಯಾಖ್ಯಾನವನ್ನು ಬರೆದಿರುವವರು ಇವುಗಳಲ್ಲಿ ಒಂದಕ್ಕೆ **ಪದಭಾಷ್ಯ**ವೆಂದೂ ಇನ್ನೊಂದಕ್ಕೆ **ವಾಕ್ಯಭಾಷ್ಯ**ವೆಂದೂ ಹೆಸರಿಟ್ಟಿರುತ್ತಾರೆ. ಅವರು ಎರಡನೆಯ ವ್ಯಾಖ್ಯಾನಾರಂಭದಲ್ಲಿ ಬರೆದಿರುವದೇನೆಂದರೆ : "ಕೇನೇಷಿತಮ್ ಇತ್ಯಾದಿಕಾಂ ಸಾಮವೇದಶಾಖಾಭೇದಬ್ರಾಹ್ಮಣೋಪನಿಷದಂ ಪದಶೋ ವ್ಯಾಖ್ಯಾಯಾಪಿ ನ ತುತೋಷ ಭಗವಾನ್ ಭಾಷ್ಯಕಾರಃ । ಶಾರೀರಕೇ ನ್ಯಾಯೈರನಿರ್ಣೀತಾರ್ಥತ್ವಾತ್ ಇತಿ ನ್ಯಾಯಪ್ರಧಾನಶ್ರುತ್ಯರ್ಥಸಙ್ಗ್ರಾಹಕೈರ್ವಾಕ್ಯೈರ್ವ್ಯಾಚಿಖ್ಯಾಸುಃ . . . . " ಈ ವಾಕ್ಯದ ಅಭಿಪ್ರಾಯವಿದು : "ಕೇನೇಷಿತಮ್ ಮುಂತಾದ ಸಾಮವೇದದ ಒಂದಾನೊಂದು ಶಾಖೆಯ ಬ್ರಾಹ್ಮಣದ ಈ ಉಪನಿಷತ್ತಿಗೆ ಪದಶಃ ವ್ಯಾಖ್ಯಾನ ಮಾಡಿದಮೇಲೂ ಭಗವಾನ್ ಭಾಷ್ಯಕಾರರು ಸಂತುಷ್ಟರಾಗಲಿಲ್ಲ ; ಏಕೆಂದರೆ (ಈ ಉಪನಿಷತ್ತಿಗೆ ಪದಭಾಷ್ಯದಲ್ಲಿ) ಶಾರೀರಕನ್ಯಾಯಗಳಿಂದ ಅರ್ಥನಿರ್ಣಯವನ್ನು ಮಾಡಿರುವದಿಲ್ಲ. ಆದ್ದರಿಂದ ಈಗ ಶ್ರುತ್ಯರ್ಥವನ್ನು ಸಂಗ್ರಹವಾಗಿ ತಿಳಿ

ಸುವ ನ್ಯಾಯಪ್ರಧಾನವಾದ ವಾಕ್ಯಗಳಿಂದ ಉಪನಿಷತ್ತನ್ನು ವ್ಯಾಖ್ಯಾನಮಾಡಬೇಕೆಂಬ ಇಚ್ಛೆಯಿಂದ ಈ ವಾಕ್ಯಭಾಷ್ಯವನ್ನು ಪ್ರಾರಂಭಿಸಿರುತ್ತಾರೆ." ಈ ಕಾರಣ ನಿರ್ದೇಶವು ಎಷ್ಟರಮಟ್ಟಿಗೆ ಸರಿ ಎಂಬುದನ್ನು ನಿರ್ಣಯಿಸುವ ಮುಂಚೆ ಕೆಲವು ವಿಷಯಗಳನ್ನು ನಾವು ಲಕ್ಷ್ಯದಲ್ಲಿಡಬೇಕಾಗುತ್ತದೆ. ಮೊದಲನೆಯದಾಗಿ ಈ ವ್ಯಾಖ್ಯಾನಕಾರರು ಆನಂದಗಿರಿಗಳೆಂಬ ಹೆಸರಿನಿಂದ ಪ್ರಸಿದ್ಧರಾಗಿರುವವರೇ ಎಂದು ಆನಂದಾಶ್ರಮಮುದ್ರಿತಪುಸ್ತಕದಲ್ಲಿದೆ. ಆದರೆ "ಕೆಲವು ಕೈಪ್ರತಿಗಳಲ್ಲಿ ಈ ವ್ಯಾಖ್ಯಾನಕಾರರ ಹೆಸರನ್ನು ಬೇರೆಯಾಗಿ ತಿಳಿಸಿರುವದರಿಂದ ಇವರು ಮಿಕ್ಕ ಭಾಷ್ಯಗಳಿಗೆ ವ್ಯಾಖ್ಯಾನವನ್ನು ಬರೆದಿರುವ ಆನಂದಗಿರಿಗಳಲ್ಲವೆಂದು ಕಾಣುತ್ತದೆ" ಎಂತ ರಾ॥ ಪ್ರೊಫೆಸರ್ ಹಿರಿಯಣ್ಣನವರು ಅಭಿಪ್ರಾಯಪಟ್ಟಿರುತ್ತಾರೆ. ಒಂದು ವೇಳೆ ಈ ವ್ಯಾಖ್ಯಾನಕಾರರು ಆನಂದಗಿರಿಗಳೇ ಆಗಿದ್ದರೂ ಇವರಿಗೆ ಈ ಕಾರಣನಿರ್ದೇಶವು ಯಾವ ಆಧಾರದಿಂದ ದೊರೆತ ಸಂಪ್ರದಾಯೋಪದೇಶವು ?–ಎಂದು ಕೇಳಬೇಕಾಗುತ್ತದೆ. ಏಕೆಂದರೆ ಆನಂದಗಿರಿಗಳೇನೂ ಶ್ರೀ ಶಂಕರಾಚಾರ್ಯರ ಕಾಲದವರಲ್ಲ.

ಈ ಸಂದೇಹವನ್ನು ನಿವಾರಣೆಮಾಡಿಕೊಳ್ಳಬೇಕೆಂಬ ಜಿಜ್ಞಾಸುಗಳ ಕುತೂಹಲನಿವೃತ್ತಿಗಾಗಿ ನಾವು ಪದವಾಕ್ಯದ ಜೊತೆಗೆ ವಾಕ್ಯಭಾಷ್ಯವನ್ನೂ ಕನ್ನಡಿಸಿ ಜೋಡಿಸಿರುತ್ತೇವೆ. ಇವೆರಡು ಭಾಷ್ಯಾನುವಾದಗಳನ್ನೂ ವಿಮರ್ಶೆಮಾಡಿದರೆ ಕಂಡುಬರುವದೇನೆಂದರೆ. (೧) ಆಚಾರ್ಯರು ತಾವು ಕೇನೋಪನಿಷತ್ತಿಗೆ ಎರಡು ಭಾಷ್ಯಗಳನ್ನು ಮಾಡಿರುವದಾಗಿ ಮತ್ತೆಲ್ಲಿಯೂ ಹೇಳಿಕೊಂಡಿರುವದಿಲ್ಲ, ವಾಕ್ಯಭಾಷ್ಯಕ್ಕೆ ಅಸಾಧಾರಣವಾಗಿರುವ ವಾದಸರಣಿಯನ್ನು ಅವರು ಮತ್ತೆಲ್ಲಿಯೂ ಅನುಸರಿಸಿರುವಂತೆಯೂ ಕಾಣುವದಿಲ್ಲ. (೨) ಈ ಎರಡು ಭಾಷ್ಯಗಳಲ್ಲಿ ಪದಭಾಷ್ಯವಾದ ಮೇಲೆ ವಾಕ್ಯಭಾಷ್ಯವನ್ನು ಆಚಾರ್ಯರು ಬರೆದರೆಂಬ ಅಭಿಪ್ರಾಯವು ವ್ಯಾಖ್ಯಾನದಲ್ಲಿ ಅಡಕವಾಗಿರುವದಷ್ಟೆ. ಇದಕ್ಕೆ ಪುಷ್ಟಿಕೊಡುವಂತೆ ವಾಕ್ಯಭಾಷ್ಯದಲ್ಲಿ ಪದಭಾಷ್ಯಕ್ಕೆ ಸಂಬಂಧಪಟ್ಟ ಪರಾಮರ್ಶಕವಾಕ್ಯಗಳು ಯಾವವೂ ಕಾಣುವದಿಲ್ಲ, ತಾವು ಎರಡು ಭಾಷ್ಯಗಳನ್ನು ಬರೆದಿರುವದಾಗಿ ಹೇಳಿಕೊಂಡಿರುವದಂತೂ ಇಲ್ಲವೇ ಇಲ್ಲ. (೩) ಮೊದಲನೆಯ ಭಾಷ್ಯದಲ್ಲಿರುವಂತೆ ಎರಡನೆಯ ಭಾಷ್ಯದಲ್ಲಿಯೂ ಪದಗಳ ಅರ್ಥವು ಕಂಡು ಬರುತ್ತದೆ. ಆದ್ದರಿಂದ 'ವಾಕ್ಯಭಾಷ್ಯ' ವೆಂಬ ಅಸಾಧಾರಣನಾಮವು ಆ ಭಾಷ್ಯಕ್ಕೆ ಬರುವದಕ್ಕೆ ಕಾರಣವು ಕಾಣುವದಿಲ್ಲ. (೪) ಈ ಎರಡು ಭಾಷ್ಯಗಳಲ್ಲಿ ಕೆಲವು ಪಾಠಭೇದಗಳೂ ಇರುತ್ತವೆ. ಉದಾಹರಣೆಗೆ ಎರಡನೆಯ ಖಂಡದ ಮೊದಲನೆಯ ಮಂತ್ರದಲ್ಲಿ "ನಾಹಂ ಮನ್ಯೇ" ಎಂದು ಒಂದರ ಪಾಠ, "ನಾಹ ಮನ್ಯೇ" ಎಂದು ಇನ್ನೊಂದರ ಪಾಠ. (೫) ಇವೆರಡು ಭಾಷ್ಯಗಳಲ್ಲಿ ಕೊಟ್ಟಿರುವ ಕೆಲವು ಪದಗಳ

ಅರ್ಥವಿವರವು ಬೇರೆಬೇರೆಯಾಗಿರುತ್ತದೆ. ಉದಾಹರಣೆಗೆ ಇಷಿತಮ್, ಪ್ರೇಷಿತಮ್, ವಾಚೋ ಹ ವಾಚಮ್, ಯದಸ್ಯ ದೇವೇಷು, ಪ್ರತಿಬೋಧವಿದಿತಮ್, ಇನ್ದ್ರಃ— ಇವುಗಳ ವಿವರವನ್ನು ನೋಡಿರಿ. (೬) ಕೆಲವು ಸಂದರ್ಭಗಳಲ್ಲಿ ಈ ಎರಡು ಭಾಷ್ಯಗಳಲ್ಲಿರುವ ವಿವರಣೆಗಳು ಪರಸ್ಪರವಿರುದ್ಧವಾಗಿರುತ್ತವೆ. ಉದಾಹರಣೆಗೆ "ಪ್ರತಿಬೋಧವಿದಿತಂ ಮತಮ್" "ಬ್ರಾಹ್ಮೀಂ ವಾವ ಉಪನಿಷದಮಬ್ರೂಮ" ಇವುಗಳ ವಿವರವನ್ನು ನೋಡಿರಿ.

'ವಾಕ್ಯಭಾಷ್ಯ" ವೆಂಬ ಹೆಸರು ಹೇಗೆ ಅನ್ವರ್ಥವಾಗಿದೆ ಎಂಬ ವಿಷಯ ದಲ್ಲಿ ವ್ಯಾಖ್ಯಾನಕಾರರ ಮತವನ್ನು ಆಗಲೆ ಕೊಟ್ಟಿರುತ್ತೇವೆ. ಪ್ರತಿಯೊಂದು ಮಂತ್ರಕ್ಕೂ ಅವತರಣಿಕೆಯಾಗಿ ಕೊಟ್ಟಿರುವ ಕೆಲವು "ಸಂಗ್ರಾಹಕ" ವಾಕ್ಯಗಳು ಪ್ರಸ್ಥಾನತ್ರಯಭಾಷ್ಯದಲ್ಲಿ ಬಹಳ ಅಪರೂಪವಾಗಿ ಕಾಣುವ ಅಥವಾ ಅತ್ಯಂತವಾಗಿ ಎಲ್ಲಿಯೂ ಕಾಣದೆಯೇ ಇರುವ ಶೈಲಿಯಲ್ಲಿರುತ್ತದೆ. ಉದಾಹರಣೆಗೆ "ಶ್ರೋತ್ರಸ್ಯ ಶ್ರೋತ್ರಮಿತ್ಯಾದಿಪ್ರತಿವಚನಂ ನಿರ್ವಿಶೇಷಸ್ಯ ನಿಮಿತ್ತತ್ವಾರ್ಥಮ್," "ಯದಿ ಮನ್ಯಸೇ ಸುವೇದೇತಿ ಶಿಷ್ಯವಿಚಾಲನಾ ಗೃಹೀತಸ್ಥಿರತಾಯೈ" ಮುಂತಾದ ವಾಕ್ಯಗಳನ್ನು ನೋಡಬಹುದು. ಸಂಗ್ರಹವಾಕ್ಯದಲ್ಲಿ ಹೇಳಿರುವದನ್ನು ಮುಂದೆ ವಿವರಿಸುವದು ಭಾಷ್ಯಗಳಲ್ಲೆಲ್ಲ ಕಾಣಬರುವದಾದರೂ ಇಲ್ಲಿರುವ ಕೆಲವು ಸಂಗ್ರಹವಾಕ್ಯಗಳು ಯಾವ ಅಭಿಪ್ರಾಯವನ್ನು ತಿಳಿಸುವದಕ್ಕೆ ಬಂದಿವೆ ಎಂಬುದು ವಿವರಣವಾಕ್ಯದ ಸಹಾಯವಿಲ್ಲದೆ ಊಹಿಸುವದೂ ಕಷ್ಟವಾಗಿರುವಷ್ಟು ಅತಿಸಂಕ್ಷಿಪ್ತವಾಗಿರುತ್ತವೆ. "ಕರ್ಮಾನಾರಮ್ಭ ಇತಿ ಚೇತ್ ನ" (ಭಾ.ಭಾ. ೯೨)* "ಅಪ್ರತಿಷೇಧಾಚ್ಚ" (೧೪೯) "ನ ಅನಭ್ಯುಪಗಮಾತ್" (೧೪೩)–ಮುಂತಾದವುಗಳು ಈ ಗುಂಪಿಗೆ ಸೇರಿದ ವಾಕ್ಯಗಳು.

ಪದಭಾಷ್ಯವನ್ನು ಬರೆದವರೇ ಪದಭಾಷ್ಯವನ್ನು ಬರೆದ ಬಳಿಕ ವಾಕ್ಯಭಾಷ್ಯವನ್ನು ಬರೆದರೆಂಬುದಕ್ಕೆ ಇರುವ ಇನ್ನೊಂದು ಅಡಚಣೆ ಏನೆಂದರೆ ಪದಭಾಷ್ಯದಲ್ಲಿ ಅಸ್ವಾರಸ್ಯವನ್ನು ತೋರಿಸಿರುವ ಪಕ್ಷವನ್ನೇ ವಾಕ್ಯಭಾಷ್ಯದಲ್ಲಿ ಒಪ್ಪಿರುವದು. ಉದಾಹರಣೆಗೆ "ಪ್ರತಿಬೋಧವಿದಿತಮ್" ಎಂಬ ಮಾತಿಗೆ ಒಂದೇ ಸಲಕ್ಕೆ ಆಗಿಬಿಡುವ ಅರಿವು ಎಂಬ ವ್ಯಾಖ್ಯಾನವನ್ನು ಕೊಡುವದು ಸರಿಯಲ್ಲವೆಂದು ಪದಭಾಷ್ಯದಲ್ಲಿ (೫೭) ಹೇಳಿದ್ದರೂ ವಾಕ್ಯಭಾಷ್ಯದಲ್ಲಿ (೧೨೯) ಅದೇ ವ್ಯಾಖ್ಯಾನವನ್ನು ಒಪ್ಪಿರುವದನ್ನು ನೋಡಬಹುದು. "ಅಬ್ರೂಮ" ಎಂಬುದಕ್ಕೆ ಭೂತಕಾಲದ ಅರ್ಥವನ್ನು ಪದ

* ಪೀಠಿಕೆಯಲ್ಲಿ ಕಂಸದಲ್ಲಿ ಕೊಟ್ಟಿರುವವುಗಳೆಲ್ಲ ಭಾಷ್ಯಭಾಗದ ಸಂಖ್ಯೆಗಳು.

ಭಾಷ್ಯದಲ್ಲಿ (೮೧) ಕೊಟ್ಟಿದ್ದರೂ ಆ ಅರ್ಥವು ಹೊಂದುವದಿಲ್ಲವೆಂದು ವಾಕ್ಯ ಭಾಷ್ಯದಲ್ಲಿ (೧೫೬) ಹೇಳಿರುವದನ್ನೂ ಲಕ್ಷ್ಯಕ್ಕೆ ತಂದುಕೊಳ್ಳಬಹುದಾಗಿದೆ.

ಇದಲ್ಲದೆ ವಾಕ್ಯಭಾಷ್ಯದಲ್ಲಿ ಕಾಣುವ ಪ್ರಯೋಗಗಳು ಕೆಲವು ವ್ಯಾಕರಣ ಬದ್ಧವಾಗಿಲ್ಲದಂತೆ ಕಾಣುತ್ತಿವೆ, ಕೆಲವು ಕಡೆ ವಾಕ್ಯಗಳು ಸರಿಯಾಗಿ ಅನ್ವಯವಾಗು ವದಿಲ್ಲ, ಮತ್ತೆ ಕೆಲವು ಕಡೆ ಬರೆದವರ ತಪ್ಪಿನಿಂದ ವಾಕ್ಯಗಳ ಮಾತುಗಳು ಸ್ವಲ್ಪ ತಪ್ಪಾಗಿರುವಂತೆಯೂ ಕಾಣುತ್ತವೆ.

ವಾಕ್ಯಭಾಷ್ಯವು ಪದಭಾಷ್ಯಕಾರರದೇ ಎಂದು ನಂಬುವದಕ್ಕೂ ಅದು ಶ್ರೀ ಶಂಕರಾಚಾರ್ಯರದೇ ಎಂದು ನಂಬುವದಕ್ಕೂ ಹೀಗೆ ಕೆಲವು ಅಡ್ಡಿಗಳಿರು ತ್ತಿದ್ದರೂ ಈ ಎರಡು ಭಾಷ್ಯಗಳನ್ನೂ ಶಂಕರಾಚಾರ್ಯರ ಭಾಷ್ಯಗಳೆಂದೇ ಹಿಂದೆ ಕೆಲವರು ಒಪ್ಪಿದ್ದರೆಂಬುದಕ್ಕೆ ಒಂದು ಪ್ರಬಲವಾದ ಸಾಧನವಿರುತ್ತದೆ. ಆನಂದಾಶ್ರಮದಲ್ಲಿ ಪ್ರಕಟಿತವಾಗಿರುವ **"ನಾರಾಯಣವಿರಚಿತಕೇನೋಪನಿಷದ್ದೀಪಿಕಾ"** ಎಂಬ ವ್ಯಾಖ್ಯಾನದಲ್ಲಿ ಗ್ರಂಥಕಾರನು ಈ ಉಪಸಂಹಾರ ಶ್ಲೋಕವನ್ನು ಬರೆದಿರುತ್ತಾನೆ: ನಾರಾಯಣೇನ ರಚಿತಾ ಶಂಕರೋಕ್ತ್ಯುಪಜೀವಿನಾ। ಅಸ್ಪಷ್ಟಪದವಾಕ್ಯಾನಾಂ ಕೇನೇಷಿತಪ್ರದೀಪಿಕಾ (?) ॥ (ಶಂಕರಾಚಾರ್ಯರ ವಚನ ವನ್ನು ಆಶ್ರಯಿಸಿ ನಾರಾಯಣನು 'ಕೇನೇಷಿತ್' ಉಪನಿಷತ್ತಿಗೆ ಅಸ್ಪಷ್ಟವಾಗಿರುವ ಪದವಾಕ್ಯಗಳರ್ಥವಾದ ಈ ದೀಪಿಕೆಯನ್ನು ಮಾಡಿರುತ್ತಾನೆ). ಈ ವ್ಯಾಖ್ಯಾನದಲ್ಲಿ ಪದಭಾಷ್ಯದ ವಾಕ್ಯಗಳನ್ನೂ ವಾಕ್ಯಭಾಷ್ಯದ ವಾಕ್ಯಗಳನ್ನೂ ಬಳಸಿರುವುದು ಕಂಡು ಬರುತ್ತದೆ. ಈ ನಾರಾಯಣನೆಂಬ ಪಂಡಿತನು ಕನಿಷ್ಠಪಕ್ಷಕ್ಕೆ ಶ್ರೀ ಶಂಕರಾನಂದರ ಕಾಲದವನಾಗಿಯಾದರೂ ಇರಬೇಕೆಂದು ತೋರುತ್ತದೆ. ವಾಕ್ಯಭಾಷ್ಯದ ವಿಷಯದಲ್ಲಿ ನಾವು ಇಲ್ಲಿ ಕೊಟ್ಟಿರುವ ತಿಳಿವಳಿಕೆಯು ಈ ವಿಷಯದಲ್ಲಿ ಹೆಚ್ಚು ಪರಿಶೋಧನೆ ಮಾಡಬೇಕೆನ್ನುವವರಿಗೆ ಸ್ವಲ್ಪ ಮಟ್ಟಿಗಾದರೂ ಸಹಾಯಕವಾಗಿರುವದೆಂದು ನಂಬು ತ್ತೇವೆ. ಈ ಭಾಷ್ಯದಲ್ಲಿ ಸ್ವತಂತ್ರವಾದ ಹಲವು ಪ್ರೌಢವಿಚಾರಗಳು ಕಂಡು ಬರುವದರಿಂದ ಇದರ ಅನುವಾದವು ಸಪ್ರಯೋಜನವೆಂದೇ ನಾವು ಎಣಿಸಿರುತ್ತೇವೆ.

## ಭಾಷ್ಯದ ವ್ಯಾಖ್ಯಾನ

ಈ ಉಪನಿಷತ್ತಿನ ವ್ಯಾಖ್ಯಾನಕಾರನು ಸುಪ್ರಸಿದ್ಧನಾದ ಆನಂದಗಿರಿಯಾಗಿರ ಲಾರನೆಂದು ಕೆಲವರ ಅಭಿಪ್ರಾಯವಿರುವದನ್ನು ಆಗಲೆ ತಿಳಿಸಿರುತ್ತೇವೆ. ಈ ವ್ಯಾಖ್ಯಾ ನದಲ್ಲಿ ಕಂಡು ಬರುವ ಕೆಲವು ಅಭಿಪ್ರಾಯಗಳು ಭಾಷ್ಯಸಮ್ಮತವಲ್ಲವೆಂದು ಕಂಡು ಬಂದ ಸ್ಥಲಗಳಲ್ಲಿ ಆ ವಿಷಯಕ್ಕೆ ಅಲ್ಲಲ್ಲಿ ಟಿಪ್ಪಣಿಯನ್ನು ಕೊಟ್ಟಿರುತ್ತೇವೆ. ಪದ

ಭಾಷ್ಯದ ವಿಷಯಕ್ಕೆ ಈ ವ್ಯಾಖ್ಯಾನದಲ್ಲಿ ಕೊಟ್ಟಿರುವ ಇಂಥ ಅಭಿಪ್ರಾಯಗಳಲ್ಲಿ ಮುಖ್ಯವಾದವನ್ನು ಇಲ್ಲಿ ವಾಚಕರ ಲಕ್ಷ್ಯಕ್ಕೆ ತರುವದು ಸಪ್ರಯೋಜನವೆಂದು ಭಾವಿಸಿರುತ್ತೇವೆ. (೧) ೧–೨ ರಲ್ಲಿ "ಅತಿಮುಚ್ಯ" ಎಂಬುದಕ್ಕೆ ಭಾಷ್ಯದಲ್ಲಿ ಎರಡು ಅರ್ಥವನ್ನು ಕೊಟ್ಟಿರುತ್ತದೆ. ಇಲ್ಲಿ ಮೊದಲನೆಯದು ಜೀವನ್ಮುಕ್ತಿಯನ್ನೂ ಎರಡನೆಯದು ವಿದೇಹಮುಕ್ತಿಯನ್ನೂ ಸೂಚಿಸುವದೆಂದು ವ್ಯಾಖ್ಯಾನದಲ್ಲಿದೆ. ಇದೂ ಹೊಂದುತ್ತದೆಯಾದರೂ ಮುಂದೆ (ವಾಕ್ಯಭಾಷ್ಯ) ೨–೪ ರಲ್ಲಿ ಆಚಾರ್ಯನಿಗೆ "ಅವಿದ್ಯಾಲೇಶ" ವಿರುವದೆಂದು ವ್ಯಾಖ್ಯಾನಕಾರನು ಬರೆದಿರುವದರಿಂದ ಜೀವನ್ಮುಕ್ತಿಯು ಗೌಣಮುಕ್ತಿಯೆಂಬ ಇವರ ಅಭಿಪ್ರಾಯವು ಭಾಷ್ಯಕ್ಕೆ ವಿರುದ್ಧವಾಗಿರುತ್ತದೆ. (೨) "ಪ್ರತಿಬೋಧವೆಂದರೆ ಯಾವ ನಿಮಿತ್ತವೂ ಇಲ್ಲದ ಬೋಧವು, ಗಾಢನಿದ್ರೆಯಲ್ಲಿರುವಾತನಿಗಿರುವಂಥ ಅರಿವು–ಎಂದು ಕೆಲವರು ಕಲ್ಪಿಸುತ್ತಾರೆ, ಒಂದೇ ಸಲಕ್ಕೆ ಆಗುವ ಅರಿವು ಎಂದು ಕೆಲವರು ಕಲ್ಪಿಸಿರುತ್ತಾರೆ" ಎಂಬ ಭಾಷ್ಯವಾಕ್ಯವು ಅಸಂಪ್ರಜ್ಞಾತಸಮಾಧಿಯನ್ನು ಸೂಚಿಸುವ ಮತ್ತು ಸದ್ಯೋಮುಕ್ತಿವಾದವನ್ನು ಸೂಚಿಸುವ ಪೂರ್ವಪಕ್ಷವನ್ನು ಖಂಡಿಸಿದೆಯೆಂದೂ ಈ ಪೂರ್ವಪಕ್ಷಗಳೆರಡೂ " ಅಪರಾಯತ್ತಬೋಧೋ ಹಿ ನಿಧಿಧ್ಯಾಸನಮುಚ್ಯತೇ " " ಸಕೃತ್ಪ್ರವೃತ್ತ್ಯಾ ಮೃದ್ನಾತಿ " ಎಂಬ ವಾರ್ತಿಕಗಳಲ್ಲಿರುತ್ತದೆಯೆಂದೂ ಟೀಕೆಯಲ್ಲಿ ಬರೆದಿರುತ್ತದೆ. ಆದರೆ ವಾಕ್ಯಭಾಷ್ಯದಲ್ಲಿ ಈ ಅಭಿಪ್ರಾಯವನ್ನು ವಿವರಿಸುವಾಗ ಈ ವಿಚಾರವನ್ನೇ ಕೈಬಿಟ್ಟಿರುತ್ತದೆ. ವಾರ್ತಿಕದಲ್ಲಿ ನೋಡಿದರೆ ಅಸಂಪ್ರಜ್ಞಾತ ಸಮಾಧಿಯ ಅಥವಾ ಸದ್ಯೋಮುಕ್ತಿವಾದದ ಸುಳಿವೇ ಇರುವದಿಲ್ಲ. ಆದ್ದರಿಂದ ಭಾಷ್ಯವಾಕ್ಯದಲ್ಲಿ ಸೂಚಿಸಿರುವ ಈ ಪೂರ್ವಪಕ್ಷಗಳೆರಡೂ ವಾರ್ತಿಕಕಾರರಿಗೆ ಸಮ್ಮತವೆಂದೂ ಭಾಷ್ಯಕಾರರಿಗೆ ಇವು ಸಮ್ಮತವಲ್ಲವೆಂದೂ ಹೇಳಿರುವದು ಸಮಂಜಸವಾಗಿ ಕಾಣುವದಿಲ್ಲ. (೩) ಮೂರನೆಯ ಖಂಡದ ಸಂಬಂಧವನ್ನು ತಿಳಿಸುವಾಗ ಅಲ್ಲಿರುವ ಯಕ್ಷನ ಕಥೆಯನ್ನು (ಅ) ಈಶ್ವರಾಸ್ತಿತ್ವಸಾಧಕವಾಗಿಯೂ (ಆ) ಬ್ರಹ್ಮವಿದ್ಯೆಯನ್ನು ಹೊಗಳುವ ಅರ್ಥವಾದವಾಗಿಯೂ (ಇ) ಬ್ರಹ್ಮವನ್ನು ತಿಳಿದುಕೊಳ್ಳುವದು ಬಲು ಕಷ್ಟ ಎಂಬುದನ್ನು ತಿಳಿಸುವ ವಾಕ್ಯವಾಗಿಯೂ (ಈ) ನಾಲ್ಕನೆಯ ಖಂಡದಲ್ಲಿ ವಿಧಿಸಿರುವ ಉಪಾಸನೆಯನ್ನು ಹೊಗಳುವ ಅರ್ಥವಾದವಾಗಿಯೂ (ಉ) ಕರ್ತೃತ್ವಭೋಕ್ತೃತ್ವಗಳು ಮಿಥ್ಯಾಭಿಮಾನಕೃತವೆಂದು ತಿಳಿಸುವ ಅರ್ಥವಾದವಾಗಿಯೂ ಭಾಷ್ಯದಲ್ಲಿ ವಿವರಿಸಿರುತ್ತದೆ. ಈ ಐದು ಅರ್ಥಗಳಲ್ಲಿ ನಾಲ್ಕನೆಯ ಅರ್ಥದಲ್ಲಿಯೇ ಭಾಷ್ಯಕ್ಕೆ ತಾತ್ಪರ್ಯವೆಂದೂ ಮಿಕ್ಕ ಸಂಬಂಧಗಳು ಸಂಭಾವನಾಮಾತ್ರ-ಎಂದರೆ ಅವೂ ಹೊಂದುತ್ತವೆ ಎಂದು ತಿಳಿಸುವದಕ್ಕೇ ಹೊರತು ಬೇರೆಯಲ್ಲ-ಎಂದೂ

ಟೀಕಾಕಾರನು ಬರೆದಿರುತ್ತಾನೆ. ಆದರೆ ವಾಕ್ಯಭಾಷ್ಯದಲ್ಲಿ ಸಗುಣೋಪಾಸನೆಯ ವಿಚಾರವು ಬಂದಿರುವಾಗ "ಅಭಿಪ್ರಾಯಾನ್ತರಮ್ ಆಖ್ಯಾಯಿಕಾಯಾಃ ಸಙ್ಗೃಹ್ಣಾತಿ" (ಈ ಕಥೆಗೆ ಮತ್ತೊಂದು ಅಭಿಪ್ರಾಯವನ್ನೂ ಸಂಗ್ರಹವಾಗಿ ಹೇಳುತ್ತಾರೆ) ಎಂದಿಷ್ಟೇ ಬರೆದು ಕೈ ಬಿಟ್ಟಿರುತ್ತಾನೆ. ಆದ್ದರಿಂದ ಮುಖ್ಯವಾಗಿ ಉಪಾಸನೆಯನ್ನೇ ಹೇಳುವದಕ್ಕಾಗಿ ಯಕ್ಷೋಪಾಖ್ಯಾನವು ಬಂದಿರುತ್ತದೆ ಎಂಬುದು ತರ್ಕದ ಹೊಡೆತಕ್ಕೆ ನಿಲ್ಲುವ ಅಭಿಪ್ರಾಯವಲ್ಲವೆಂದು ಆತನೇ ಎಣಿಸಿದ್ದನೆಂದು ಹೇಳಬೇಕಾಗಿದೆ. ಇದು ನಿಜವಾದದ್ದು. ಏಕೆಂದರೆ ಪದಭಾಷ್ಯದಲ್ಲಿ ಕೊಟ್ಟಿರುವ ನಾಲ್ಕು ಪಕ್ಷಗಳೂ ಸಂದರ್ಭಕ್ಕೆ ಹೊಂದುತ್ತವೆ. ಇದೂ ಅಲ್ಲದೆ ಉಪನಿಷತ್ತಿಗೆ ಮುಖ್ಯ ಪ್ರತಿಪಾದ್ಯವಾದ ಬ್ರಹ್ಮಾಭಿನ್ನಪ್ರತ್ಯಗಾತ್ಮಜ್ಞಾನವನ್ನು ಮುಟ್ಟದೆ ಬೇರೊಂದು ವಿಷಯವನ್ನು ತಿಳಿಸುವದಕ್ಕೆ ಉಪನಿಷತ್ತಿನ ಎರಡು ಖಂಡಗಳು ಬಂದಿರುತ್ತವೆ ಎಂಬುದು ಎಂದಿಗೂ ಯುಕ್ತವಾಗಲಾರದು. (೪) ಉಪನಿಷತ್ತಿನ ಮೊದಲನೆಯ ಎರಡು ಖಂಡಗಳಲ್ಲಿ ಉತ್ತಮಾಧಿಕಾರಿಗಳಿಗಾಗಿ ಬ್ರಹ್ಮಜ್ಞಾನವನ್ನು ಹೇಳಿದೆಯೆಂತಲೂ ಮಿಕ್ಕ ಎರಡು ಖಂಡಗಳಲ್ಲಿ ಮಂದಾಧಿಕಾರಿಗಳಿಗಾಗಿ ಸಗುಣಬ್ರಹ್ಮೋಪಾಸನೆಯನ್ನು ತಿಳಿಸಿದೆಯೆಂತಲೂ ಟೀಕಾಕಾರನು ವಿಂಗಡಿಸಿರುವದು ಇದೇ ಕಾರಣದಿಂದ ತತ್ತ್ವಸಮರ್ಪಕವಾಗಿರುವದಿಲ್ಲ. ಮುಖ್ಯ ವಿಷಯವಾದ ಬ್ರಹ್ಮಜ್ಞಾನವನ್ನೇ ಅರ್ಥವಾದದಿಂದ ಪುಷ್ಟಿಗೊಳಿಸಿ ಜ್ಞಾನಕ್ಕೆ ಬೇಕಾಗುವ ಸಾಧನವನ್ನು ತಿಳಿಸುವದಕ್ಕೇ ಮೂರನೆಯ ನಾಲ್ಕನೆಯ ಖಂಡಗಳು ಬಂದಿರುತ್ತವೆ, ನಿರುಪಾಧಿಕಬ್ರಹ್ಮವನ್ನು ನೇರಾಗಿ ಅರಿತುಕೊಳ್ಳಲು ಅಸಮರ್ಥರಾದವರಿಗೆ ಸೋಪಾಧಿಕವಾದ ಉಪಾಸನೆಯನ್ನು ತಿಳಿಸಿದೆ— ಎಂಬುದೇ ಭಾಷ್ಯಕಾರರಿಗೆ ಒಪ್ಪಾಗಿರುವ ಅಭಿಪ್ರಾಯವೆಂಬುದು "ಉಕ್ತಾ ತ ಉಪನಿಷತ್" ಎಂಬ (೪-೭) ವಾಕ್ಯದ ಚರ್ಚೆಯಿಂದ ಸ್ಪಷ್ಟವಾಗುತ್ತದೆ.

ಮೇಲಿನ ಅಭಿಪ್ರಾಯಗಳನ್ನು ಭಾಷ್ಯಕಾರರ ಸಿದ್ಧಾಂತವೇನೆಂಬುದನ್ನು ನಿರ್ಣಯಿಸಬಲ್ಲ ವಿದ್ವಾಂಸರು ಸಮಾಲೋಚನೆಮಾಡಬೇಕೆಂದು ನಾವು ಪ್ರಾರ್ಥಿಸುತ್ತೇವೆ. "ಆನಂದಗಿರಿ" ಎಂಬ ಹೆಸರಿನಿಂದ ಅನೇಕ ಟೀಕಾಕಾರರು ಶಾಂಕರಭಾಷ್ಯಗಳಿಗೆ ವ್ಯಾಖ್ಯಾನವನ್ನು ಬರೆದಿರುವಂತೆ ಕಾಣುತ್ತದೆ, ಅಥವಾ ವ್ಯಾಖ್ಯಾನಕಾರರು ಯಾರೆಂಬುದನ್ನು ವಿಚಾರಮಾಡುವ ಗೋಜಿಗೆ ಹೋಗದೆ ಹಸ್ತ ಪ್ರತಿಗಳಲ್ಲಿ ಬರೆಯುವವರು ಶ್ರದ್ಧೆಯಿಂದ ಆನಂದಗಿರಿಗಳ ಹೆಸರನ್ನು ಹಾಕಿರಲೂ ಬಹುದಾಗಿದೆ. ಆದ್ದರಿಂದ ಜಿಜ್ಞಾಸುಗಳಾದವರು ಕೇವಲ ವ್ಯಾಖ್ಯಾನಶರಣರಾಗಿ ಭಾಷ್ಯಕಾರರ ಮೂಲಾಭಿಪ್ರಾಯವನ್ನು ರೂಪಾಂತರಗೊಳಿಸಿಕೊಂಡು ತಿಳಿದುಕೊಳ್ಳದೆ ಇರಲೆಂಬ ಸದಿಚ್ಛೆಯಿಂದ ಈ ಪೀಠಿಕೆಯಲ್ಲಿ ವ್ಯಾಖ್ಯಾನಕಾರನ ಅಭಿಪ್ರಾಯಗಳನ್ನು ವಿಮರ್ಶೆಮಾಡಿದೆಯೇ ಹೊರತು ಬರಿಯ ಖಂಡನಾಭಿರುಚಿಯಿಂದಲ್ಲವೆಂದು ನಾವು ಬಿನ್ನವಿಸಿಕೊಂಡು ಈ ಪೀಠಿಕೆಯನ್ನು ಸಮಾಪ್ತಿಗೊಳಿಸುವೆವು.

**ಯ. ಸುಬ್ರಹ್ಮಣ್ಯಶರ್ಮ.**

# ಸಂಕ್ಷೇಪಾಕ್ಷರಗಳ ವಿವರಣೆ

**ವಿಶೇಷ ಸೂಚನೆ**—ಉಪನಿಷತ್ತುಗಳ ಹೆಸರನ್ನು ಆಯಾ ಹೆಸರಿನ ಮೊದಲನೆಯ ಅಕ್ಷರದಿಂದ ಸೂಚಿಸಿದೆ. ಭಾ. ಎಂಬಕ್ಷರವು ಆಯಾ ಗ್ರಂಥದ ಭಾಷ್ಯವನ್ನು ಸೂಚಿಸುವದು. ಭಾಷ್ಯದಲ್ಲಿ (೧-೪) ಹೀಗೆ ತೋರಿಸಿರುವ ಸಂಖ್ಯೆಗಳು ಈ ಉಪನಿಷತ್ತಿನ ಖಂಡ, ಮಂತ್ರ-ಇವುಗಳನ್ನು ಸೂಚಿಸುವವು.

| ಸಂಕೇತ | ವಿವರಣೆ |
|---|---|
| (ಗೀ॥) | ಗೀತಾಪ್ರೆಸ್ಸಿನಲ್ಲಿ ಅಚ್ಚಾಗಿರುವ ಪುಸ್ತಕದ ಪಾಠ. |
| (ಆ॥) | ಪೂನಾದ ಆನಂದಾಶ್ರಮದಲ್ಲಿ ಪ್ರಕಾಶವಾಗಿರುವ ಪುಸ್ತಕದಲ್ಲಿರುವ ಪಾಠ. |
| ಜೈ. ಸೂ. | ಜೈಮಿನಿಯ ಪೂರ್ವಮೀಮಾಂಸಾಸೂತ್ರಗಳು. |
| ಟೀ. | ಕೇನೋಪನಿಷತ್ತಿನ ಪದವಾಕ್ಯಭಾಷ್ಯಗಳ ಟೀಕೆ. "ಆನಂದಗಿರಿ" ಗಳೆಂಬ ಹೆಸರಿನವರದೆಂದು ಆನಂದಾಶ್ರಮದ ಪುಸ್ತಕದಲ್ಲಿ ಇರುತ್ತದೆ. |
| ತೈ. ನಾ. | ತೈತ್ತಿರೀಯಾರಣ್ಯಕದ ಭಾಗವಾದ ನಾರಾಯಣಪನ್ನ. "ಅಂಭಸಿ." |
| ತೈ. ಬ್ರಾ. | ತೈತ್ತಿರೀಯಬ್ರಾಹ್ಮಣ. |
| ಪಾ. | ಪಾಣಿನಿಯವರ ವ್ಯಾಕರಣಸೂತ್ರ. |
| ಮನು | ಮನುಸ್ಮೃತಿ. |
| (ಮೈ॥) | ಮೈಸೂರಲ್ಲಿ ವಿದ್ಯಾತರಂಗಿಣೀಮುದ್ರಾಕ್ಷರಶಾಲೆಯಲ್ಲಿ ತೆಲುಗಕ್ಷರದಲ್ಲಿ ಅಚ್ಚಾಗಿ ಪ್ರಕಟವಾಗಿರುವ ಉಪನಿಷತ್ಪುಸ್ತಕದ ಪಾಠ. |
| ಮೋ. ಧ. | ಮೋಕ್ಷಧರ್ಮ. |
| ವನ. | ವನಪರ್ವ, ಮಹಾಭಾರತದ ಭಾಗ. |
| (ವಾ॥) | ವಾಣೀವಿಲಾಸಮುದ್ರಣಾಲಯದ ಪುಸ್ತಕದಲ್ಲಿರುವ ಪಾಠ. |
| ಸೂ. ಭಾ. | ಬ್ರಹ್ಮಸೂತ್ರದ ಶಾಂಕರಭಾಷ್ಯ. |
| (ಹಿ॥) | ಶ್ರೀಯುತ ಎಂ. ಹಿರಿಯಣ್ಣ, ಎಂ.ಎ., ರವರು ತಮ್ಮ ಇಂಗ್ಲಿಷು ಭಾಷಾಂತರದಲ್ಲಿ ಉದಾಹರಿಸಿರುವ ಪಾಠ. |

# ವಿಷಯಾನುಕ್ರಮಣಿಕೆ



## ಭಾಷ್ಯಕಾರರ ಅವತರಣಿಕೆ



## ಒಂದನೆಯ ಖಂಡ



## ಎರಡನೆಯ ಖಂಡ



## ಮೂರನೆಯ ಖಂಡ



## ನಾಲ್ಕನೆಯ ಖಂಡ

ಓಂ

ಶಾಂಕರ ಭಾಷ್ಯಸಮೇತ

# ಕೇನೋಪನಿಷತ್ತು

---

## ಭಾಷ್ಯಕಾರರ ಅವತರಣಿಕೆ

### ಹಿಂದಿನ ಗ್ರಂಥಕ್ಕೂ ಈ ಉಪನಿಷತ್ತಿಗೂ ಇರುವ ಸಂಬಂಧ

(ಭಾಷ್ಯ)

೧. "ಕೇನೇಷಿತಮ್" ಇತ್ಯಾದ್ಯಾ ಉಪನಿಷತ್ ಪರಬ್ರಹ್ಮವಿಷಯಾ ವಕ್ತವ್ಯೇತಿ ನವಮಸ್ಯಾಧ್ಯಾಯಸ್ಯ ಆರಮ್ಭಃ। ಪ್ರಾಗೇತಸ್ಮಾತ್ ಕರ್ಮಾಣಿ ಅಶೇಷತಃ ಪರಿಸಮಾಪಿತಾನಿ। ಸಮಸ್ತಕರ್ಮಾಶ್ರಯಭೂತಸ್ಯ ಚ ಪ್ರಾಣಸ್ಯ ಉಪಾಸನಾನ್ಯುಕ್ತಾನಿ ಕರ್ಮಾಙ್ಗಸಾಮವಿಷಯಾಣಿ ಚ। ಅನನ್ತರಂ ಚ ಗಾಯತ್ರಸಾಮವಿಷಯದರ್ಶನಂ ವಂಶಾನ್ತಮ್ ಉಕ್ತಮ್॥

(ಭಾಷ್ಯಾರ್ಥ)

"ಕೇನೇಷಿತಮ್" ಎಂಬ (ಮಾತುಗಳಿಂದ) ಪ್ರಾರಂಭವಾಗಿರುವ ಉಪನಿಷತ್ತು ಪರಬ್ರಹ್ಮವಿಷಯವಾದದ್ದು, (ಅದನ್ನು) ಹೇಳಬೇಕೆಂದು ಈ **ಒಂಬತ್ತನೆಯ ಅಧ್ಯಾಯ**ವನ್ನು [1] ಪ್ರಾರಂಭಿಸಿರುತ್ತದೆ. ಇದಕ್ಕಿಂತ ಮುಂಚೆ ಕರ್ಮಗಳೆಲ್ಲವನ್ನೂ (ತಿಳಿಸಿ) ಮುಗಿಸಿದ್ದಾಗಿದೆ; ಸಮಸ್ತಕರ್ಮಗಳಿಗೂ ಆಶ್ರಯನಾದ **ಪ್ರಾಣನ** [2] ಉಪಾಸನೆಗಳನ್ನೂ ಕರ್ಮಕ್ಕೆ ಅಂಗವಾದ ಸಾಮದ ವಿಷಯವಾದ (ಉಪಾಸನೆಗಳನ್ನೂ) ಹೇಳಿದ್ದಾಗಿದೆ [3] ಆ ಬಳಿಕ ಗಾಯತ್ರಸಾಮದ ವಿಷಯವಾದ ಉಪಾಸನೆಯನ್ನು ಹೇಳಿ (ಶಿಷ್ಯಾಚಾರ್ಯರ) ವಂಶವನ್ನೂ [4] (ತಿಳಿಸಿದ್ದಾಗಿದೆ).

---

1. ತಲವಕಾರಬ್ರಾಹ್ಮಣದ ಒಂಬತ್ತನೆಯ ಅಧ್ಯಾಯವನ್ನು.

2. ಸೂತ್ರಾತ್ಮನೆಂದೂ ಹಿರಣ್ಯಗರ್ಭನೆಂದೂ ಕರೆಯಲ್ಪಡುವ ಕ್ರಿಯಾಶಕ್ತಿ ಜ್ಞಾನಶಕ್ತಿಗಳ ಸಮಷ್ಟಿಯ ಉಪಾಧಿಯುಳ್ಳ ಬ್ರಹ್ಮ, ಇದನ್ನೇ ಅಪರಬ್ರಹ್ಮವೆಂದು ಕರೆಯುತ್ತಾರೆ. "ಪ್ರಾಣನನ್ನು ಶುದ್ಧತ್ವವೇ ಮುಂತಾದ ಗುಣಗಳಿಂದ ಕೂಡಿದವನೆಂದು ಉಪಾಸನೆಮಾಡಬೇಕೆಂದು ಹಿಂದೆ ಹೇಳಿದೆ. (ಟೀ.)

3. "ಕರ್ಮಕ್ಕೆ ಅಂಗವಾಗಿ ಉಪಯೋಗಿಸುವ ಸಾಮದಲ್ಲಿ ಐದು ಭಕ್ತಿಗಳಿರುವವು, ಏಳು ಭಕ್ತಿಗಳೂ ಇರುವವು. ಅದನ್ನು ಪೃಥಿವ್ಯಾದಿದೃಷ್ಟಿಯಿಂದ ಉಪಾಸನೆಮಾಡಬೇಕೆಂದು ಹಿಂದೆ ಹೇಳಿರುತ್ತವೆ" (ಟೀ.) ಛಾಂದೋಗ್ಯೋಪನಿಷತ್ತಿನ ೨-೧ ರಿಂದ ೮ನೆಯ ಖಂಡದವರೆಗೆ ನೋಡಿರಿ.

4. ಗುರುಶಿಷ್ಯಪರಂಪರೆಯನ್ನು ನೆನಪಿನಲ್ಲಿಟ್ಟುಕೊಳ್ಳುವದೂ ಉಪಾಸನೆಯು

(ಭಾಷ್ಯ)

೨. ಸರ್ವಮೇತದ್ಯಥೋಕ್ತಂ ಕರ್ಮ ಚ ಜ್ಞಾನಂ ಚ ಸಮ್ಯಗನುಷ್ಠಿತಂ ನಿಷ್ಕಾಮಸ್ಯ ಮುಮುಕ್ಷೋಃ ಸತ್ತ್ವಶುದ್ಧ್ಯರ್ಥಂ ಭವತಿ। ಸಕಾಮಸ್ಯ ತು ಜ್ಞಾನರಹಿತಸ್ಯ ಕೇವಲಾನಿ ಶ್ರೌತಾನಿ ಸ್ಮಾರ್ತಾನಿ ಚ ಕರ್ಮಾಣಿ **ದಕ್ಷಿಣಮಾರ್ಗ**ಪ್ರತಿಪತ್ತಯೇ ಪುನರಾವೃತ್ತಯೇ ಚ ಭವನ್ತಿ। ಸ್ವಾಭಾವಿಕ್ಯಾ ತ್ವಶಾಸ್ತ್ರೀಯಯಾ ಪ್ರವೃತ್ತ್ಯಾ ಪಶ್ವಾದಿಸ್ಥಾವರಾನ್ತಾ ಅಧೋಗತಿಃ ಸ್ಯಾತ್। "ಅಥೈತಯೋಃ ಪಥೋರ್ನ ಕತರೇಣಚನ ತಾನೀಮಾನಿ ಕ್ಷುದ್ರಾಣ್ಯಸಕೃದಾವರ್ತೀನಿ ಭೂತಾನಿ ಭವನ್ತಿ ಜಾಯಸ್ವ ಮ್ರಿಯಸ್ವೇತ್ಯೇತತ್ತೃತೀಯಂ ಸ್ಥಾನಮ್ "(ಛಾ ೫-೧೦-೮) ಇತಿ ಶ್ರುತೇಃ "ಪ್ರಜಾ ಹ ತಿಸ್ರೋ ಅತ್ಯಾಯಮಾಯಃ" (ಐ. ಆ. ೨-೧-೧-, ಋ. ಮಂ. ೮-೧೦೧-೧೪) ಇತಿ ಮನ್ತ್ರವರ್ಣಾತ್॥

(ಭಾಷ್ಯಾರ್ಥ)

ಇದುವರೆಗೆ ಹೇಳಿದ ಕರ್ಮ, ಜ್ಞಾನ[1]–ಇದೆಲ್ಲವೂ (ಇದನ್ನು) ಚೆನ್ನಾಗಿ ಅನುಷ್ಠಾನಮಾಡುವದಾದರೆ ನಿಷ್ಕಾಮನಾದ ಮುಮುಕ್ಷುವಿಗೆ ಸತ್ತ್ವಶುದ್ಧಿ ಎಂಬ ಪ್ರಯೋಜನವನ್ನುಂಟುಮಾಡುವದಾಗುವದು; ಜ್ಞಾನವಿಲ್ಲದ ಕಾಮಸಹಿತನಾಗಿರುವವನಿಗಾದರೋ ಬರಿಯ ಶ್ರೌತ (ಕರ್ಮಗಳೂ) ಸ್ಮಾರ್ತಕರ್ಮಗಳೂ **ದಕ್ಷಿಣಮಾರ್ಗ**ವನ್ನು[2] ಪಡೆಯುವದಕ್ಕೂ (ಸಂಸಾರಕ್ಕೆ) ಹಿಂದಿರುಗಿ ಬರುವದಕ್ಕೂ ಕಾರಣವಾಗುವವು. ಶಾಸ್ತ್ರವಿರುದ್ಧವಾದ ಸ್ವಾಭಾವಿಕಪ್ರವೃತ್ತಿ[3]ಯಿಂದಲೋ (ಎಂದರೆ) ಪಶುಜನ್ಮದಿಂದ ಸ್ಥಾವರಪ್ರಾಣಿಗಳ ಜನ್ಮದವರೆಗಿನ ಅಧೋಗತಿಯುಂಟಾಗುವದು. "ಇನ್ನು (ಉಳಿದ ಜೀವರು) ಈ ಎರಡು ಮಾರ್ಗಗಳಿಂದಲೂ ಹೋಗುವದಿಲ್ಲ; ಆ ಈ (ಪ್ರಾಣಿಗಳು) ಅನೇಕ ವೇಳೆ (ಸಂಸಾರಕ್ಕೆ) ಮರಳಿ ಬರುವ ಕ್ಷುದ್ರಜಂತುಗಳಾಗುವವು,[4] ಮತ್ತೆ ಮತ್ತೆ ಹುಟ್ಟುವದು, ಸಾಯುವದು ಎಂಬಿದು ಮೂರನೆಯ ಸ್ಥಾನವು" (ಛಾ. ೫-೧೦-೮) ಎಂಬ ಶ್ರುತಿ ಇದಕ್ಕೆ ಪ್ರಮಾಣವು "ಮೂರು ಬಗೆಯ ಜೀವಿಗಳು (ಜ್ಞಾನಕರ್ಮ

---

ಫಲಕಾರಿಯಾಗುವದಕ್ಕೆ ಅವಶ್ಯವೆಂಬ ಅಭಿಪ್ರಾಯದಿಂದ ಅದನ್ನು ಶ್ರುತಿ ಹೇಳಿರುತ್ತದೆ. "ವಂಶಾನ್ತಂ ಕಾರ್ಯಮ್" ಎಂಬಲ್ಲಿ ಕಾರ್ಯಮ್ ಎಂಬ ಮಾತು ಟೀಕೆಯನ್ನು ನೋಡಿ ಯಾರೋ ಬರೆದವರು ತಪ್ಪಾಗಿ ಸೇರಿಸಿರಬೇಕೆಂದು ತೋರುವದು. (ಹಿ॥ ನೋಡಿರಿ).

1. ಇಲ್ಲಿ ಜ್ಞಾನವೆಂದರೆ ಉಪಾಸನೆ, ಮುಂದೆ ಹೇಳುವ ಆತ್ಮಜ್ಞಾನವಲ್ಲ.
2. ಛಾ. ೫-೧೦, ಬೃ. ೬-೨, ಪ್ರ ೧-೯-೧೦ ಇದನ್ನು ನೋಡಿರಿ.
3. ಅವಿಚಾರಸ್ವಭಾವದಿಂದ ಎಂದರೆ ಅಜ್ಞಾನದಿಂದ ವ್ಯವಹರಿಸುವದು.
4. ಕಾಡುನೊಣ, ಸೊಳ್ಳೆ, ಹುಳು_ಮುಂತಾದ ಜಂತುಗಳು.

ಮಾರ್ಗಗಳೆರಡನ್ನೂ ಬಿಟ್ಟು) ಅತಿಕ್ರಮಿಸುವ ದಾರಿಯನ್ನು ಹೊಂದಿಧವು" (ಐ. ಆ. ೨-೧-೧, ಋ. ಮಂ. ೮-೧೦೧-೧೪) ಎಂಬ ಮಂತ್ರವರ್ಣವೂ [1] ಇರುತ್ತದೆ.

## ಬ್ರಹ್ಮಜ್ಞಾನಕ್ಕೆ ಅಧಿಕಾರಿ

(ಭಾಷ್ಯ)

೩ ವಿಶುದ್ಧಸತ್ತ್ವಸ್ಯ ತು ನಿಷ್ಕಾಮಸ್ಯೈವ ಬಾಹ್ಯಾದನಿತ್ಯಾತ್ ಸಾಧ್ಯಸಾಧನ ಸಂಬನ್ಧಾತ್ ಇಹಕೃತಾತ್ ಪೂರ್ವಕೃತಾದ್ವಾ ಸಂಸ್ಕಾರವಿಶೇಷೋದ್ಭವಾತ್ ವಿರಕ್ತಸ್ಯ ಪ್ರತ್ಯಗಾತ್ಮವಿಷಯಾ ಜಿಜ್ಞಾಸಾ ಪ್ರವರ್ತತೇ। ತದೇತದ್ವಸ್ತು ಪ್ರಶ್ನಪ್ರತಿ ವಚನಲಕ್ಷಣಯಾ ಶ್ರುತ್ಯಾ ಪ್ರದರ್ಶ್ಯತೇ "ಕೇನೇಷಿತಮ್" ಇತ್ಯಾದ್ಯಯಾ। **ಕಾಠಕೇ** ಚೋಕ್ತಮ್—"ಪರಾಞ್ಚಿ ಖಾನಿ ವ್ಯತೃಣತ್ ಸ್ವಯಮ್ಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾನ್ತರಾತ್ಮನ್। ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತ ಚಕ್ಷುರಮೃತತ್ವಮಿಚ್ಛನ್। (ಕ ೨-೧-೧) ಇತ್ಯಾದಿ। "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ। ತದ್ವಿ ಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮ ನಿಷ್ಠಮ್॥ (ಮುಂ ೧-೨-೧೨) ಇತ್ಯಾದ್ಯಾ**ಥರ್ವಣೇ** ಚ। ಏವಂ ಹಿ ವಿರಕ್ತಸ್ಯ ಪ್ರತ್ಯಗಾತ್ಮವಿಷಯಂ ವಿಜ್ಞಾನಂ ಶ್ರೋತುಂ ಮನ್ತುಂ ವಿಜ್ಞಾತುಂ ಚ ಸಾಮರ್ಥ್ಯ ಮುಪಪದ್ಯತೇ ನಾನ್ಯಥಾ॥

(ಭಾಷ್ಯಾರ್ಥ)

ಆದರೆ (ಯಾವನು) ಸತ್ತ್ವಶುದ್ಧಿಯನ್ನು[2] (ಪಡೆದುಕೊಂಡಿ)ರುವನೋ, (ಅದರಿಂದ) ನಿಷ್ಕಾಮನಾಗಿರುವನೋ, ಈ (ಜನ್ಮ)ದಲ್ಲಿ ಮಾಡಿರುವ ಅಥವಾ ಪೂರ್ವ ಜನ್ಮದಲ್ಲಿ ಮಾಡಿದ (ಕರ್ಮೋಪಾಸನೆಗಳಿಂದ)[3] ಒಂದಾನೊಂದು ಸಂಸ್ಕಾರವು ಉಂಟಾಗಿ ಹೊರಗಿನ ಅನಿತ್ಯವಾದ ಸಾಧ್ಯಸಾಧನಗಳು[4] ಸಂಬಂಧವಿಷಯಕ್ಕೆ ವಿರಕ್ತ ನಾಗಿರುವನೋ (ಅವನಿ)ಗೇ ಪ್ರತ್ಯಗಾತ್ಮವಿಷಯದ ಜ್ಞಾನವನ್ನು ಹೊಂದಬೇಕೆಂಬ) ಇಚ್ಛೆಯು ಉಂಟಾಗುತ್ತದೆ. ಅಂಥ ಈ (ಪ್ರತ್ಯಗಾತ್ಮರೂಪ)ವಸ್ತುವನ್ನು ಪ್ರಶ್ನೋತ್ತರ

1 ಇದು ಐತರೇಯಾರಣ್ಯಕದಲ್ಲಿ ಋಗ್ವೇದದಿಂದ ಉದ್ಧೃತವಾಗಿರುವ ಮಂತ್ರವು. ಮಂತ್ರವರ್ಣ ಎಂಬ ಮಾತು ಇದನ್ನು ಸೂಚಿಸುವಂತೆ ತೋರುತ್ತದೆ.

2. ಹಿಂದೆ ಹೇಳಿರುವಂತೆ ಕರ್ಮೋಪಾಸನೆಗಳಿಂದುಂಟಾಗುವ ಅಂತಃಕರಣಶುದ್ಧಿ.

3. ಹಿಂದಿನ ಜನ್ಮದ ಸಾಧನಗಳಿಂದಲೂ ಈಗ ಜ್ಞಾನವಾಗಬಹುದು. ಸೂ. ಭಾ. ೩-೪-೫೧, ೪-೨-೧೮.

4. ಪುತ್ರ ಕರ್ಮ, ಉಪಾಸನೆ—ಇವು ಸಾಧನಗಳು; ಮನುಷ್ಯಲೋಕ, ಪಿತೃಲೋಕ, ದೇವಲೋಕ—ಇವು ಸಾಧ್ಯಗಳು. ಈ ಸಾಧನಗಳಿಂದ ಈ ಸಾಧ್ಯಗಳನ್ನು ಪಡೆಯುವದರಲ್ಲಿ ಆಸಕ್ತಿ ಹೋಗಿ ಎಂದರ್ಥ ಬೃ. ೧-೫-೧೬.

ರೂಪವಾಗಿರುವ "ಕೇನೇಷಿತಮ್" ಎಂದು ಮೊದಲಾಗಿರುವ (ಈ) ಶ್ರುತಿಯಲ್ಲಿ ತೋರಿಸಿಕೊಟ್ಟಿರುತ್ತದೆ. **ಕಾಠಕ**ದಲ್ಲಿಯೂ (ಹೀಗೆಂದು ಮುಂತಾಗಿ) ಹೇಳಿರುತ್ತದೆ: "ಪರಮೇಶ್ವರನು ಇಂದ್ರಿಯಗಳನ್ನು ಹೊರಮುಖವಾಗಿ ಕೊರೆದಿರುವನು; ಆದ್ದರಿಂದ (ಜೀವನು) ಹೊರಗಡೆಗೇ ನೋಡುವನು, ಒಳಗಿನ ಆತ್ಮನನ್ನು (ನೋಡುತ್ತಲಿಲ್ಲ). ಯಾವನೋ ಒಬ್ಬ ಧೀರನು ಅಮರಣನಾಗಬೇಕೆಂಬ ಇಚ್ಛೆಯಿಂದ ಚಕ್ಷು(ರಾದಿಗಳನ್ನು) ಹಿಂತಿರುಗಿಸಿಕೊಂಡು ಪ್ರತ್ಯಗಾತ್ಮನನ್ನು ಕಾಣುತ್ತಾನೆ" (ಕ. ೨-೧-೧) "ಬ್ರಾಹ್ಮಣನಾದವನು ಕರ್ಮದಿಂದುಂಟಾಗುವ ಲೋಕಗಳನ್ನು ಪರೀಕ್ಷೆಮಾಡಿ, ಕೃತಕವಲ್ಲದ್ದು ಮಾಡತಕ್ಕ (ಸಾಧನದಿಂದ) ಉಂಟಾಗಲಾರದು ಎಂದು (ನಿಶ್ಚಯಿಸಿ), ವೈರಾಗ್ಯವನ್ನು ತಳೆಯುತಕ್ಕದ್ದು. ಅದನ್ನು ಅರಿತುಕೊಳ್ಳುವದಕ್ಕಾಗಿ ಸಮಿತ್ಪಾಣಿಯಾಗಿ ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವಿನ ಬಳಿಗೇ ಹೋಗಬೇಕು" (ಮುಂ. ೧-೨-೧೨) ಎಂದು ಮುಂತಾಗಿ **ಅಥರ್ವಣ** (ದ ಮುಂಡಕೋಪನಿಷತ್ತಿನಲ್ಲಿಯೂ ಹೇಳಿರುತ್ತದೆ). ಹೀಗೆ ವಿರಕ್ತನಾದನವನಿಗೇ[1] ಪ್ರತ್ಯಗಾತ್ಮನ ವಿಷಯದ ಜ್ಞಾನವನ್ನು ಕುರಿತು[2] ಶ್ರವಣಮಾಡುವದಕ್ಕೂ ಮನನಮಾಡುವದಕ್ಕೂ ಅರಿತುಕೊಳ್ಳುವದಕ್ಕೂ ಸಾಮರ್ಥ್ಯವು ಉಂಟಾಗುವದೇ ಹೊರತು ಬೇರೆಯ ಮಾರ್ಗದಿಂದ ಉಂಟಾಗಲಾರದು.

## ಬ್ರಹ್ಮಜ್ಞಾನದ ಪ್ರಯೋಜನ

(ಭಾಷ್ಯ)

೪. ಏತಸ್ಮಾಚ್ಚ ಪ್ರತ್ಯಗಾತ್ಮಬ್ರಹ್ಮವಿಜ್ಞಾನಾತ್ ಸಂಸಾರಬೀಜಮಜ್ಞಾನಂ ಕಾಮಕರ್ಮಪ್ರವೃತ್ತಿಕಾರಣಮಶೇಷತೋ ನಿವರ್ತತೇ । "ತತ್ರ ಕೋ ಮೋಹ. ಕಃ ಶೋಕ ಏಕತ್ವಮನುಪಶ್ಯತಃ ॥" (ಈ. ೭) ಇತಿ ಮನ್ತ್ರವರ್ಣಾತ್ । "ತರತಿ ಶೋಕಮಾತ್ಮವಿತ್" (ಛಾ. ೭-೧-೩), "ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ

---

1. ಇಲ್ಲಿಯವರೆಗೆ ಸಾಧನಚತುಷ್ಟಯಸಂಪತ್ತಿಯುಳ್ಳವನಿಗೇ ಜ್ಞಾನಕ್ಕೆ ಅಧಿಕಾರವೆಂದು ಹೇಳಿದ್ದರೂ ಮುಖ್ಯವಾಗಿ ಸಾಧ್ಯಸಾಧನಗಳನ್ನು ತೊರೆದ ವಿರಕ್ತನಿಗೇ ಅಧಿಕಾರವೆಂಬುದನ್ನು ಸ್ಪಷ್ಟಪಡಿಸಿರುತ್ತದೆ.

2. "ಹೀಗೆ ವಿರಕ್ತನಾದವನಿಗೆ ಪ್ರತ್ಯಗಾತ್ಮವಿಷಯವಾದ ವಿಜ್ಞಾನವೂ ಶ್ರವಣಮಾಡುವದಕ್ಕೂ ಮನನಮಾಡುವದಕ್ಕೂ ಅರಿತುಕೊಳ್ಳುವದಕ್ಕೂ ಸಾಮರ್ಥ್ಯವೂ ಉಂಟಾಗುವವು'' ಎಂದೂ ಮೂಲವಾಕ್ಯವನ್ನು ಕನ್ನಡಿಸಬಹುದು. ಜ್ಞಾನವೂ ಜ್ಞಾನಸಾಧನವಾದ ಶ್ರವಣಾದಿಗಳೂ ದಕ್ಕುವದು ಇಂಥ ಅಧಿಕಾರಿಗೇ ಎಂಬುದು ಇಲ್ಲಿ ಅಭಿಪ್ರಾಯ. ಬೃ. ೩-೪-೫ ನೋಡಿರಿ.

ಸರ್ವಸಂಶಯಾಃ । ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥"
(ಮುಂ.೨-೨-೮) ಇತ್ಯಾದಿಶ್ರುತಿಭ್ಯಶ್ಚ ॥

(ಭಾಷ್ಯಾರ್ಥ)

ಈ **ಪ್ರತ್ಯಗಾತ್ಮಬ್ರಹ್ಮದ**[1] ವಿಜ್ಞಾನದಿಂದ ಸಂಸಾರಕ್ಕೆ ಬೀಜವಾಗಿ[2] ಕಾಮ ಕರ್ಮಗಳು ಮುಂಬರಿಯುವದಕ್ಕೆ ಕಾರಣವಾದ **ಅಜ್ಞಾನವು**[3] ಸ್ವಲ್ಪವೂ ಉಳಿಯ ದಂತೆ ತೊಲಗುವದು. "ಆಗ ಏಕತ್ವವನ್ನು ಕಂಡುಕೊಂಡ (ಜ್ಞಾನಿಗೆ) ಯಾವ ಮೋಹವು? ಯಾವ ಶೋಕವು?" (ಈ. ೭) ಎಂಬ **ಮಂತ್ರವರ್ಣವೂ,** "ಆತ್ಮ ನನ್ನರಿತುಕೊಂಡಾತನು ಶೋಕವನ್ನು ದಾಟುವನು" (ಛಾ. ೭-೧-೩), "ಆ ಕಾರ್ಯ ಕಾರಣರೂಪ (ಆತ್ಮನನ್ನು) ಕಂಡುಕೊಂಡರೆ ಹೃದಯದ ಗಂಟು ಬಿಚ್ಚಿಕೊಳ್ಳುವದು, ಸಂಶಯಗಳೆಲ್ಲ ಕತ್ತರಿಸಿಹೋಗುವವು, ಈತನ ಕರ್ಮಗಳು ನಾಶವಾಗುವವು" (ಮುಂ. ೨-೨-೮) ಮುಂತಾದ **ಶ್ರುತಿ**ಗಳೂ ಇದಕ್ಕೆ[4] ಪ್ರಮಾಣವು.

## ಸಮುಚ್ಚಯವಾದದ ಖಂಡನೆ

(ಭಾಷ್ಯ)

೫. ಕರ್ಮಸಹಿತಾದಪಿ ಜ್ಞಾನಾದೇತತ್ ಸಿಧ್ಯತೀತಿ ಚೇತ್ । ನ । **ವಾಜಸನೇಯಕೇ** ತಸ್ಯಾನ್ಯಕಾರಣತ್ವವಚನಾತ್ । "ಜಾಯಾ ಮೇ ಸ್ಯಾತ್" (ಬೃ. ೧-೪-೧೭) ಇತಿ ಪ್ರಸ್ತುತ್ಯ "ಪುತ್ರೇಣಾಯಂ ಲೋಕೋ ಜಯ್ಯೋ ನಾನ್ಯೇನ ಕರ್ಮಣಾ । ಕರ್ಮಣಾ ಪಿತೃಲೋಕೋ ವಿದ್ಯಯಾ ದೇವಲೋಕಃ" (ಬೃ. ೧-೫-೧೬) ಇತ್ಯಾತ್ಮನೋಽನ್ಯಸ್ಯ ಲೋಕತ್ರಯಸ್ಯ ಕಾರಣತ್ವಮುಕ್ತಂ **ವಾಜಸನೇಯಕೇ**।ತತ್ರೈವ ಚ ಪಾರಿವ್ರಾಜ್ಯವಿಧಾನೇ ಹೇತುರುಕ್ತಃ "ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಯಂ ಲೋಕಃ" (ಬೃ. ೪-೪-೨೨) ಇತಿ । ತತ್ರಾಯಂ ಹೇತ್ವರ್ಥಃ– ಪ್ರಜಾಕರ್ಮತತ್ಸಂಯುಕ್ತವಿದ್ಯಾಭಿರ್ಮನುಷ್ಯಪಿತೃದೇವಲೋಕತ್ರಯಸಾಧನೈರನಾತ್ಮಲೋಕಪ್ರತಿಪತ್ತಿಕಾರಣೈಃ ಕಿಂ ಕರಿಷ್ಯಾಮಃ? ನ ಚಾಸ್ಮಾಕಂ ಲೋಕತ್ರಯ

---

1. ನಮ್ಮ ಒಳಗಿರುವ ಆತ್ಮನ ರೂಪವಾದ ಬ್ರಹ್ಮದ. "ಪ್ರತ್ಯಗಾತ್ಮಬ್ರಹ್ಮ" ಎಂಬ ಮಾತು ಪ್ರಸ್ಥಾನತ್ರಯಭಾಷ್ಯದಲ್ಲಿ ಮತ್ತೆಲ್ಲಿಯೂ ಕಾಣಬರುವದಿಲ್ಲ.

2. ಕಾರಣವಾಗಿ. ಬೀಜವು ಮರಕ್ಕೆ ಕಾರಣವಾಗಿರುವಂತೆ ಉಪಾದಾನಕಾರಣವಾಗಿ ಎಂದೇನೂ ಅರ್ಥವಲ್ಲ.

3. ಆತ್ಮಾನಾತ್ಮಗಳನ್ನು ಅನ್ಯೋನ್ಯವಾಗಿ ತಿಳಿಯುವ ಅಧ್ಯಾಸವು. ಬ್ರಹ್ಮಸೂತ್ರದ ಅಧ್ಯಾಸಭಾಷ್ಯವನ್ನು ನೋಡಿರಿ. ಕ. ಭಾ. ೧-೧-೨೦.

4. ಆತ್ಮಜ್ಞಾನವು ಬಂದೊಡನೆ ಅಜ್ಞಾನವು ಸ್ವಲ್ಪವೂ ಉಳಿಯದಂತೆ ಹೋಗುವ ದೆಂಬುದಕ್ಕೆ. ಈ. ಭಾ. ಉಪಸಂಹಾರ; ಕ. ಭಾ. ೧-೩-೪; ಬೃ. ಭಾ. ೧-೪-೧೦.

ಮನಿತ್ಯಂ ಸಾಧನಸಾಧ್ಯಮಿಷ್ಟಮ್ । ಯೇಷಾಮಸ್ಮಾಕಂ ಸ್ವಾಭಾವಿಕೋಽಜೋಽಜರೋಽಮೃತೋಽಭಯೋ ನ ವರ್ಧತೇ ಕರ್ಮಣಾ ನೋ ಕನೀಯಾನ್ ನಿತ್ಯಶ್ಚ ಲೋಕ ಇಷ್ಟಃ। ಸ ಚ ನಿತ್ಯತ್ವಾನ್ನಾವಿದ್ಯಾನಿವೃತ್ತಿವ್ಯತಿರೇಕೇಣಾನ್ಯಸಾಧನನಿಷ್ಪಾದ್ಯಃ। ತಸ್ಮಾತ್ ಪ್ರತ್ಯಗಾತ್ಮಬ್ರಹ್ಮವಿಜ್ಞಾನಪೂರ್ವಕಃ ಸರ್ವೈಷಣಾಸಂನ್ಯಾಸ ಏವ ಕರ್ತವ್ಯ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :—ಕರ್ಮದಿಂದೊಡಗೂಡಿದ ಜ್ಞಾನದಿಂದಲೂ[1] ಈ (ಫಲವು) ಉಂಟಾಗಬಹುದಲ್ಲ ।

(ಪರಿಹಾರ) :—ಹಾಗಲ್ಲ ; ಏಕೆಂದರೆ ಅದು ಬೇರೊಂದು (ಫಲಕ್ಕೆ) ಸಾಧನವಾಗಿರುವದೆಂದು **ವಾಜಸನೇಯಕ**ದಲ್ಲಿ[2] ಹೇಳಿರುತ್ತದೆ. "ನನಗೆ ಹೆಂಡತಿ ಆಗಲಿ!" (ಬೃ. ೧-೪-೧೭) ಎಂದು ಪ್ರಾರಂಭಿಸಿ "ಈ ಲೋಕವು ಪುತ್ರನಿಂದ ಗೆಲ್ಲಬಹುದಾದದ್ದೇ ಹೊರತು ಬೇರೆಯು ಕರ್ಮದಿಂದ (ಗೆಲ್ಲಬಹುದಾದ್ದ)ಲ್ಲ, ಪಿತೃಲೋಕವು ಕರ್ಮದಿಂದ (ಗೆಲ್ಲಬಹುದಾದದ್ದು), ದೇವಲೋಕವು ವಿದ್ಯೆಯಿಂದ" (ಬೃ ೧-೫-೧೬) ಎಂದು ಆತ್ಮನಿಗಿಂತಲೂ ಬೇರೆಯಾದ **ಲೋಕತ್ರಯಕ್ಕೆ** (ಪುತ್ರ, ಕರ್ಮ, ಉಪಾಸನೆಗಳು) ಕಾರಣವಾಗಿರುವವೆಂದು ವಾಜಸನೇಯಕದಲ್ಲಿ ಹೇಳಿರುತ್ತದೆ. ಅದೇ (ಶ್ರುತಿ) ಯಲ್ಲಿ **ಪಾರಿವ್ರಾಜ್ಯ**(ಸಂನ್ಯಾಸ)ವನ್ನು[3] ವಿಧಿಸಿರುವದಕ್ಕೆ (ಈ) ಕಾರಣವನ್ನು ಹೇಳಿರುತ್ತದೆ. "ಯಾವ ನಮಗೆ ಈತನೇ ಆತ್ಮನೋ, ಈತನೇ ಲೋಕವೋ (ಆ ನಾವು) ಪ್ರಜೆಯಿಂದ ಏನು ಮಾಡೋಣ ?" (ಬೃ. ೪-೪-೨೨) ಅಲ್ಲಿ ಹೇಳಿರುವ ಹೇತುವಿಗೆ ಅರ್ಥವಿದು : "ಪ್ರಜೆ, ಕರ್ಮ, ಆ (ಕರ್ಮ)ದಿಂದೊಡಗೂಡಿದ ವಿದ್ಯೆ[4] ಇವುಗಳು (ಕ್ರಮವಾಗಿ) ಮನುಷ್ಯಲೋಕ, ಪಿತೃಲೋಕ, ದೇವಲೋಕ—ಎಂಬ

---

1. ಉಪಾಸನೆಯಿಂದಲೂ. ಜ್ಞಾನಕರ್ಮಸಮುಚ್ಚಯವಾದಿಗಳಿಗೆಲ್ಲ ಜ್ಞಾನವೆಂದರೆ ಉಪಾಸನೆಯೇ. ಈ ೯ನೆಯ ಮಂತ್ರಕ್ಕೆ ಅವತರಣಿಕೆ, ತೈತ್ತಿರೀಯ-ಶಿಕ್ಷಾವಲ್ಲಿಯ ಉಪಸಂಹಾರ ಭಾಷ್ಯ, ಐತರೇಯಾವತರಣಿಕೆ, ಛಾ ಭಾ. ೨-೨೩-೧, ಬೃ. ಭಾ. ೧-೫-೧೮, ಬೃ. ೩-೩ ಕ್ಕೆ ಅವತರಣಿಕೆ, ಗೀತಾಭಾಷ್ಯದ ಉಪಕ್ರಮೋಪಸಂಹಾರಗಳು ಮುಂತಾದ ಕಡೆಗಳಲ್ಲಿ ಆಚಾರ್ಯರು ಸಮುಚ್ಚಯವಾದವನ್ನು ಖಂಡಿಸಿರುತ್ತಾರೆ.

2. ವಾಜಸನೇಯನೆಂದರೆ ವಾಜಸನಿಯ ಮಗನಾದ ಯಾಜ್ಞವಲ್ಕ್ಯ; ಆತನು ಕಣ್ವಮಧ್ಯಂದಿನಾದಿಮಹರ್ಷಿಗಳಿಗೆ ಹೇಳಿಕೊಟ್ಟದ್ದಾದ್ದರಿಂದ ಶುಕ್ಲಯಜುರ್ವೇದಕ್ಕೆ ವಾಜಸನೇಯಕವೆಂದು ಹೆಸರಾಯಿತೆಂದು ಹೇಳುತ್ತಾರೆ.

3. ಜ್ಞಾನಾಂಗವಾದ ಸಂನ್ಯಾಸ.

4. ಶ್ರುತಿಯಲ್ಲಿರುವ ಮಾತು ಉಪಲಕ್ಷಣವು ; ಆದರಿಂದ ಕರ್ಮ, ಉಪಾಸನೆ-ಇವನ್ನೂ ಗ್ರಹಿಸಬೇಕೆಂದು ಭಾವ.

ಲೋಕತ್ರಯಕ್ಕೇ ಸಾಧನವಾಗಿರುವದರಿಂದ, ಅನಾತ್ಮವಾದ ಲೋಕಗಳನ್ನು ಪಡೆಯುವದಕ್ಕೆ ಬೇಕಾಗಿರುವ (ಅವುಗಳಿಂದ) ನಾವು ಮಾಡತಕ್ಕದ್ದೇನು ? ನಮಗೆ ಅನಿತ್ಯವಾದ, ಸಾಧನಗಳಿಂದ ಪಡೆಯತಕ್ಕದ್ದಾಗಿರುವ, ಲೋಕತ್ರಯವಂತೂ ಬೇಕಾಗಿರುವದಿಲ್ಲ; ಆ ನಮಗೆ ಸ್ವಾಭಾವಿಕವಾಗಿಯೂ[1] ಜನ್ಮರಹಿತವಾಗಿಯೂ ಮುಪ್ಪಿಲ್ಲದ್ದಾಗಿಯೂ ಮರಣವಿಲ್ಲದ್ದಾಗಿಯೂ ಭಯರಹಿತವಾಗಿಯೂ[2] ಕರ್ಮದಿಂದ ಹೆಚ್ಚದೆ ಕುಂದದೆ[3] ಇರುವದಾಗಿಯೂ ಇರುವ ನಿತ್ಯವಾದ (ಆತ್ಮ)ಲೋಕವೇ ಬೇಕಾಗಿರುತ್ತದೆ. ಅದು ನಿತ್ಯವಾಗಿರುವದರಿಂದ ಅವಿದ್ಯೆಯು ಹೋಗುವದೊಂದನ್ನು ಬಿಟ್ಟು[4] ಮತ್ತೆ ಯಾವ ಸಾಧನದಿಂದಲೂ ಉಂಟಾಗುವಹಾಗಿಲ್ಲ. ಆದ್ದರಿಂದ ಪ್ರತ್ಯಗಾತ್ಮಬ್ರಹ್ಮವನ್ನರಿತುಕೊಂಡು[5] ಸಕಲ ಏಷಣೆಗಳ ಸಂನ್ಯಾಸವನ್ನೇ ನಾವು ಮಾಡಬೇಕು."

(ಭಾಷ್ಯ)

೬. ಕರ್ಮಸಹಭಾವಿತ್ವವಿರೋಧಾಚ್ಚ ಪ್ರತ್ಯಗಾತ್ಮಬ್ರಹ್ಮವಿಜ್ಞಾನಸ್ಯ । ನ ಹ್ಯುಪಾತ್ತಕಾರಕಫಲಭೇದವಿಜ್ಞಾನೇನ ಕರ್ಮಣಾ ಪ್ರತ್ಯಸ್ತಮಿತಸರ್ವಭೇದದರ್ಶನಸ್ಯ ಪ್ರತ್ಯಗಾತ್ಮಬ್ರಹ್ಮವಿಷಯಸ್ಯ ಸಹಭಾವಿತ್ವಮುಪಪದ್ಯತೇ। ವಸ್ತುಪ್ರಾಧಾನ್ಯೇ ಸತಿ ಅಪುರುಷತನ್ತ್ರತ್ವಾತ್ ಬ್ರಹ್ಮವಿಜ್ಞಾನಸ್ಯ ॥

(ಭಾಷ್ಯಾರ್ಥ)

ಕರ್ಮದೊಡನೆ ಪ್ರತ್ಯಗಾತ್ಮಬ್ರಹ್ಮವಿಜ್ಞಾನವು ಇರುವದೆಂಬುದು ವಿರುದ್ಧವಾಗಿರುವದರಿಂದಲೂ (ಸಿದ್ಧಾಂತವೇ ಸರಿ).[6] ಹೇಗೆಂದರೆ ಕಾರಕಗಳು, ಫಲ–ಇವು ಬೇರೆ ಬೇರೆ ಎಂಬ ಅರಿವನ್ನು ಸ್ವೀಕರಿಸಿರುವ ಕರ್ಮದೊಂದಿಗೆ ಯಾವ ಭೇದಜ್ಞಾನವೂ ಇಲ್ಲದ ಪ್ರತ್ಯಗಾತ್ಮಬ್ರಹ್ಮವಿಷಯಕವಾದ ಜ್ಞಾನವು ಇರುವದೆಂಬುದು ಹೊಂದುವ

---

1. ಮತ್ತೊಂದರಿಂದಾಗದೆ ಸ್ವಭಾವದಿಂದಲೇ ಹಾಗಿರುವ.

2. ಬೃ. ೪-೪-೨೫ರ ಸೂಚನೆ. ಅಲ್ಲಿ "ಅಮರೋಽಮೃತೋ" ಎಂದಿದೆ. ಇಲ್ಲಿ 'ಅಮರೋ' ಎಂಬ ಮಾತಿನಲ್ಲಿಯೇ ಎರಡು ಅರ್ಥಗಳನ್ನೂ ಆಚಾರ್ಯರು ಸೇರಿಸಿರಬಹುದು. ಅಮರ-ನಾಶವಿಲ್ಲದ್ದು, ಅಮೃತ-ಸಾಯುವ ಸ್ವಭಾವವಿಲ್ಲದ್ದು, ವಿಕಾರಗಳಿಂದಲೂ ಅವುಗಳಿಂದಾಗುವ ಕಾರಣಗಳಿಂದಲೂ ರಹಿತವಾದದ್ದು ಎಂದರ್ಥ.

3. ಬೃ. ೪-೪-೨೩

4. ಅವಿದ್ಯೆಯಿಂದ ಅಪ್ರಾಪ್ತವಾಗಿರುವವರಿಂದ ವಿದ್ಯೆಯಿಂದ ಎಂದರೆ ಬರಿಯ ಜ್ಞಾನದಿಂದಲೇ ಸಿಕ್ಕತಕ್ಕದ್ದು.

5 ಈಗ ನಮಗೆ ಲೋಕತ್ರಯವೂ ಬೇಕಿಲ್ಲವೆಂಬ ವಿರಕ್ತಿಯುಂಟಾಗಿದೆ ; ಜ್ಞಾನದಿಂದ ಎಲ್ಲವೂ ಮಿಥ್ಯೆಯೆಂಬುದನ್ನರಿತುಕೊಂಡು ಬಯಕೆಯ ಬೇರನ್ನೇ ಕಡಿದುಹಾಕಬೇಕು ಎಂದಭಿಪ್ರಾಯ.

6. ಸಮುಚ್ಚಯವಾದವು ಸರಿಯಲ್ಲ.

ಹಾಗೆಯೇ ಇಲ್ಲ. ಏಕೆಂದರೆ, ಬ್ರಹ್ಮಜ್ಞಾನಕ್ಕೆ ವಸ್ತುವೇ ಮುಖ್ಯವಾಗಿರುವದರಿಂದ ಅದು ಪುರುಷತಂತ್ರವಾಗಿರುವದಿಲ್ಲ. [1]

(ಭಾಷ್ಯ)

೭. ತಸ್ಮಾತ್ ದೃಷ್ಟಾದೃಷ್ಟೇಭ್ಯೋ ಬಾಹ್ಯಸಾಧನಸಾಧ್ಯೇಭ್ಯೋ ವಿರಕ್ತಸ್ಯ ಪ್ರತ್ಯಗಾತ್ಮವಿಷಯಾ ಬ್ರಹ್ಮಜಿಜ್ಞಾಸೇಯಮ್ "ಕೇನೇಷಿತಮ್" ಇತ್ಯಾದಿ ಶ್ರುತ್ಯಾ ಪ್ರದರ್ಶ್ಯತೇ ॥

(ಭಾಷ್ಯಾರ್ಥ)

ಆದ್ದರಿಂದ ಹೊರಗಿನ ಸಾಧನಗಳಿಂದ ಪಡೆದುಕೊಳ್ಳಬೇಕಾಗಿರುವ (ಈ ಲೋಕದ) ಮತ್ತು ಕಾಣದ (ಪರಲೋಕದ ಫಲ)ಗಳಲ್ಲಿ ವಿರಕ್ತನಾದವನಿಗಾಗಿ ಪ್ರತ್ಯಗಾತ್ಮನ ವಿಷಯವಾದ ಈ ಬ್ರಹ್ಮಜಿಜ್ಞಾಸೆಯನ್ನು 'ಕೇನೇಷಿತಮ್' ಎಂದು ಮೊದಲಾಗಿರುವ ಶ್ರುತಿಯಲ್ಲಿ ವಿವರಿಸಿರುತ್ತದೆ.

## ಸದ್ಗುರುವಿನ ಉಪದೇಶದಿಂದಲೇ ಜ್ಞಾನವನ್ನು ಪಡೆಯಬೇಕು

(ಭಾಷ್ಯ)

೮. ಶಿಷ್ಯಾಚಾರ್ಯಪ್ರಶ್ನಪ್ರತಿವಚನರೂಪೇಣ ಕಥನಂ ತು ಸೂಕ್ಷ್ಮವಸ್ತುವಿಷಯತ್ವಾತ್ ಸುಖಪ್ರತಿಪತ್ತಿಕಾರಣಂ ಭವತಿ। ಕೇವಲತರ್ಕಾಗಮ್ಯತ್ವಂ ಚ ದರ್ಶಿತಂ ಭವತಿ। "ನೈಷಾ ತರ್ಕೇಣ ಮತಿರಾಪನೇಯಾ" (ಕ. ೧-೨-೯) ಇತಿ ಶ್ರುತೇಶ್ಚ। ಆಚಾರ್ಯವಾನ್ ಪುರುಷೋ ವೇದ" (ಛಾ. ೬-೧೪-೨), "ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪದಿತಿ" (ಛಾ. ೪-೯-೩), "ತದ್ವಿದ್ಧಿ ಪ್ರಣಿಪಾತೇನ" (ಗೀ. ೪-೩೪)–ಇತ್ಯಾದಿಸ್ಮೃತಿನಿಯಮಾಚ್ಚ ॥

(ಭಾಷ್ಯಾರ್ಥ)

ಶಿಷ್ಯನು ಕೇಳಿದಂತೆಯೂ ಆಚಾರ್ಯನು ಉತ್ತರಕೊಟ್ಟಂತೆಯೂ ಹೇಳಿರುವದು (ಇದು) ಸೂಕ್ಷ್ಮವಸ್ತುವಿನ ವಿಷಯ(ದ ವಿಚಾರ)ವಾಗಿರುವದರಿಂದ ಸುಲಭವಾಗಿ ತಿಳಿದುಕೊಳ್ಳುವದಕ್ಕೆ ಅನುಕೂಲವಾಗಿರುವದು, (ಇದು) ಕೇವಲ ತರ್ಕ

---

1. ಕರ್ಮವನ್ನು ಮಾಡುವವನಿಗೆ ನಾನು ಕರ್ತನು, ಇದು ಕರ್ಮದಿಂದ ಪಡೆಯುವ ಫಲವು–ಎಂಬ ಭೇದಜ್ಞಾನವಿರುತ್ತದೆ, ಆದ್ದರಿಂದ ಅವನಿಗೆ ಕರ್ತವ್ಯವಿರುತ್ತದೆ. ಆತ್ಮಜ್ಞಾನಿಗೆ ಕರ್ತ್ರಾದಿಭೇದವು ಸುಳ್ಳೆಂಬ ಅರಿವಾಗಿರುತ್ತದೆಯಾದ್ದರಿಂದ ಕರ್ತವ್ಯವಿರುವದಿಲ್ಲ. ಕರ್ಮವು ಪುರುಷತಂತ್ರವಾದ್ದರಿಂದ ಅದಕ್ಕೆ ಕರ್ತೃ ಮುಖ್ಯ, ಅದು ಪುರುಷತಂತ್ರ; ಜ್ಞಾನಕ್ಕೆ ತಾನು ತಿಳಿಸುವ ವಸ್ತು ಮುಖ್ಯ, ಪುರುಷನ ಇಚ್ಛೆಗೆ ಅಧೀನವಾಗಿ ಜ್ಞಾನವಾಗುವದಿಲ್ಲ. ಹೀಗೆ ವಿರುದ್ಧಗಳಾದ ಜ್ಞಾನಕರ್ಮಗಳು ಒಟ್ಟಿಗೆ ಇರಲಾರವು–ಎಂದು ಭಾವ. ಇಲ್ಲಿ ಪೂರ್ವಪಕ್ಷಿಯು ಹೇಳುವ ಜ್ಞಾನಕ್ಕಿಂತ ಬೇರೆಯಾದ ಆತ್ಮಜ್ಞಾನವಿದೆ ಎಂದು ತಿಳಿಸಿದೆ.

ದಿಂದ ಅರಿತುಕೊಳ್ಳುವದಕ್ಕೆ ಆಗುವದಿಲ್ಲವೆಂಬುದನ್ನೂ ಹೇಳಿದಂತೆ ಆಗುತ್ತದೆ. "ಈ ತಿಳಿವಳಿಕೆಯು ತರ್ಕದಿಂದ ಪಡೆಯತಕ್ಕದ್ದಲ್ಲ" (ಕ. ೧-೨-೯) ಎಂಬ ಶ್ರುತಿ ಇದಕ್ಕೆ ಪ್ರಮಾಣವು. "ಆಚಾರ್ಯನನ್ನುಳ್ಳ (ಪುರುಷನೇ) ಇದನ್ನು ತಿಳಿದುಕೊಳ್ಳುತ್ತಾನೆ" (ಛಾ. ೬-೧೪-೨). "ಆಚಾರ್ಯನಿಂದ ತಿಳಿದುಕೊಂಡ ವಿದ್ಯೆಯೇ ಉತ್ತಮತ್ವವನ್ನು ಹೊಂದುವದೆಂದು (ಕೇಳಿದೇನೆ)" (ಛಾ. ೪-೯-೩). "ಆ (ಜ್ಞಾನವನ್ನು ಗುರುಗಳಿಗೆ) ನಮಸ್ಕಾರಮಾಡುವದರಿಂದಲೂ (ತತ್ತ್ವವನ್ನು ಕುರಿತು ಅವರನ್ನು ಕೇಳುವದರಿಂದಲೂ, ಅವರ ಸೇವೆಯಿಂದಲೂ) ತಿಳಿದುಕೊ"[1] (ಗೀ ೪-೩೪) ಎಂಬಿವೇ ಮುಂತಾದ ಶ್ರುತಿಸ್ಮೃತಿಗಳಲ್ಲಿ (ಗುರುವಿನಿಂದಲೇ ಜ್ಞಾನವನ್ನು ಪಡೆದುಕೊಳ್ಳಬೇಕೆಂಬ ನಿಯಮವನ್ನು ಹಾಕಿರುವದರಿಂದಲೂ (ಹೀಗೆಂದು ಸಿದ್ಧವಾಗುತ್ತದೆ).

---

1 "ಆ ಜ್ಞಾನಿಗಳು ಹೇಳಿದ್ದನ್ನು ಅರಿತುಕೊಂಡರೆ ಈ ರೀತಿಯಲ್ಲಿ ಮೋಹವಾಗುವದಿಲ್ಲ"–ಎಂದು ಈ ವಾಕ್ಯದ ಮುಂದೆ ಇರುವದರಿಂದ ಗುರುಗಳ ಉಪದೇಶದಿಂದಲೇ ಅಜ್ಞಾನದ ನಾಶವಾಗುವದೆಂದೂ ಬರಿಯ ತರ್ಕದಿಂದ ಆಗದೆಂದೂ ಹೇಳಿದಂತೆ ಆಗುತ್ತದೆ.

# ಒಂದನೆಯ ಖಂಡ

(ಭಾಷ್ಯ)

೯. ಕಶ್ಚಿದ್ಗುರುಂ ಬ್ರಹ್ಮನಿಷ್ಠಂ ವಿಧಿವದುಪೇತ್ಯ ಪ್ರತ್ಯಗಾತ್ಮವಿಷಯಾದನ್ಯತ್ರ ಶರಣಮ್ ಅಪಶ್ಯನ್ ಅಭಯಂ ನಿತ್ಯಂ ಶಿವಮಚಲಮಿಚ್ಛನ್ ಪಪ್ರಚ್ಛ–ಇತಿ ಕಲ್ಪ್ಯತೇ—

(ಭಾಷ್ಯಾರ್ಥ)

ಯಾವನೋ ಒಬ್ಬನು ಪ್ರತ್ಯಗಾತ್ಮನೆಂಬ ವಿಷಯವನ್ನು ಬಿಟ್ಟು ಮತ್ತೆಲ್ಲಿಯೂ ಶರಣವನ್ನು ಕಾಣದೆ (ಶಾಸ್ತ್ರದಲ್ಲಿ) ವಿಧಿಸಿರುವಂತೆ ಬ್ರಹ್ಮನಿಷ್ಠನಾದ[1] ಗುರುವಿನ ಬಳಿಗೆ ಬಂದು ಭಯರಹಿತವಾಗಿಯೂ, ನಿತ್ಯವಾಗಿಯೂ, ಮಂಗಲಕರವಾಗಿಯೂ, ಚಲನೆಯಿಲ್ಲದ್ದಾಗಿಯೂ ಇರುವದನ್ನು ಇಚ್ಛಿಸುವವನಾಗಿ (ಹೀಗೆಂದು) ಕೇಳಿದನು–ಎಂದು ಕಲ್ಪಿಸಬೇಕು.

## ಶಿಷ್ಯನ ಪ್ರಶ್ನೆ

**ಕೇನೇಷಿತಂ ಪತತಿ ಪ್ರೇಷಿತಂ ಮನಃ**
**ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ ।**
**ಕೇನೇಷಿತಾಂ ವಾಚಮಿಮಾಂ ವದನ್ತಿ**
**ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥ ೧ ॥**

೧. ಯಾರ ಇಷ್ಟದಂತೆ ಕಳುಹಲ್ಪಟ್ಟು ಮನಸ್ಸು ಎರಗುವದು? ಮೊದಲನೆಯ ಪ್ರಾಣವು ಯಾರಿಂದ ಯುಕ್ತವಾಗಿ ಹೊರಡುತ್ತದೆ? ಯಾರ ಇಚ್ಛೆಯಿಂದ ಈ ವಾಕ್ಯವನ್ನು ಆಡುತ್ತಾರೆ? ಮತ್ತು ಚಕ್ಷುಸ್ಸನ್ನೂ ಶ್ರೋತ್ರವನ್ನೂ ಯಾವ ದೇವನು ಕಟ್ಟುಮಾಡುತ್ತಿರುವನು?

## 'ಇಷಿತಮ್' ಎಂಬ ಮಾತಿನ ಅರ್ಥ

(ಭಾಷ್ಯ)

೧೦. ಕೇನ ಇಷಿತಮ್ ಕೇನ ಕರ್ತ್ರಾ ಇಷಿತಮ್ ಇಷ್ಟಮ್ ಅಭಿಪ್ರೇತಂ ಸತ್, ಮನಃ ಪತತಿ ಗಚ್ಛತಿ ಸ್ವವಿಷಯಂ ಪ್ರತಿ-ಇತಿ ಸಮ್ಬಧ್ಯತೇ । ಇಷೇರಾಭೀಕ್ಷ್ಣ್ಯಾರ್ಥಸ್ಯ ಗತ್ಯರ್ಥಸ್ಯ ಚೇಹಾಸಮ್ಭವಾತ್, ಇಚ್ಛಾರ್ಥಸ್ಯೈವೈತದ್ರೂಪಮಿತಿ ಗಮ್ಯತೇ । 'ಇಷಿತಮ್' ಇತಿ ಇಟ್ಪ್ರಯೋಗಸ್ತು ಛಾನ್ದಸಃ ॥

---

1 ಮು. ೧-೨-೧೨ ರ ಸೂಚನೆ. ಅನಾತ್ಮವನ್ನು ತೊರೆದು ಬ್ರಹ್ಮದಲ್ಲಿಯೇ ನೆಲೆ ನಿಂತಿರುವ ಶ್ರೋತ್ರಿಯನಾದ ಗುರುವಿನ ಬಳಿಗೇ ಆತ್ಮಜ್ಞಾನಕ್ಕೆ ಹೋಗಬೇಕು ಎಂದು ಆ ಶ್ರುತಿಯಲ್ಲಿದೆ.

(ಭಾಷ್ಯಾರ್ಥ)

ಯಾವನಿಂದ ಇಷಿತವಾಗಿ ಎಂದರೆ ಯಾವ ಕರ್ತೃವಿನ ಇಷ್ಟವನ್ನನುಸರಿಸಿ, ಅಭಿಪ್ರಾಯ (ವನ್ನನುಸರಿಸಿ), ಮನಸ್ಸು ಎರಗುವುದು ? (ಇಲ್ಲಿ) ತನ್ನ ವಿಷಯದ ಕಡೆಗೆ (ಎರಗುವದು ?) ಎಂದು ಸೇರಿಸಿಕೊಳ್ಳಬೇಕು. ಇಷ್ ಧಾತುವಿಗೆ ಅತಿಶಯ ವೆಂಬರ್ಥವೂ ಹೋಗು ಎಂಬರ್ಥವೂ[1] (ಇವೆಯಾದರೂ ಇಲ್ಲಿ ಅವು) ಹೊಂದುವದಿಲ್ಲ ವಾದ್ದರಿಂದ ಇಚ್ಛೆಯನ್ನು ಹೇಳುವ ಇಷ್ ಧಾತುವಿನದೇ ಈ ರೂಪವೆಂದು ನಿರ್ಧರಿ ಸಬೇಕಾಗಿದೆ. (ಇಷ್ಟಮ್ ಎಂಬುದಕ್ಕೆ ಬದಲಾಗಿ) ಇಷಿತಮ್[2] ಎಂದು (ಮೂಲದಲ್ಲಿ) ಇಕಾರಸಹಿತವಾಗಿ (ಮಾಡಿರುವ) ಪ್ರಯೋಗವೋ ಎಂದರೆ (ಅದು) ವೈದಿಕವು,

## " ಪ್ರೇಷಿತಮ್ " ಎಂಬುದರ ಅರ್ಥ

(ಭಾಷ್ಯ)

೧೧. ತಸ್ಯೈವ ಪ್ರಪೂರ್ವಸ್ಯ ನಿಯೋಗಾರ್ಥೇ ' ಪ್ರೇಷಿತಮ್ ' ಇತ್ಯೇತತ್ । ತತ್ರ ' ಪ್ರೇಷಿತಮ್ ' ಇತ್ಯೇವೋಕ್ತೇ ಪ್ರೇಷಯಿತೃಪ್ರೇಷಣವಿಶೇಷವಿಷಯಾ ಕಾಙ್ಕ್ಷಾ ಸ್ಯಾತ್ " ಕೇನ ಪ್ರೇಷಯಿತೃವಿಶೇಷೇಣ, ಕೀದೃಶಂ ವಾ ಪ್ರೇಷಣಮ್ ?" ಇತಿ । " ಇಷಿತಮ್ " ಇತಿ ತು ವಿಶೇಷಣೇ ಸತಿ ತದುಭಯಂ ನಿವರ್ತತೇ । " ಕಸ್ಯೇ ಚ್ಛಾಮಾತ್ರೇಣ ಪ್ರೇಷಿತಮ್ ? " ಇತ್ಯರ್ಥವಿಶೇಷನಿರ್ಧಾರಣಾತ್ ॥

(ಭಾಷ್ಯಾರ್ಥ)

ಅದೇ (ಧಾತುವಿಗೆ) ಪ್ರ (ಎಂಬ ಉಪಸರ್ಗವನ್ನು)[3] ಮೊದಲು ಸೇರಿಸಿದರೆ ಕಟ್ಟುಮಾಡು ಎಂಬರ್ಥದಲ್ಲಿ " ಪ್ರೇಷಿತಮ್ " ಎಂಬ ರೂಪವಾಗುವದು. ಇಲ್ಲಿ " ಪ್ರೇಷಿತಮ್ " ಎಂದು ಮಾತ್ರ ಹೇಳಿದ್ದರೆ ಪ್ರೇಷಣಮಾಡುವಾತನು, ಪ್ರೇಷಣ ಇವುಗಳ ವಿಶೇಷವಿಷಯವಾದ ಪ್ರಶ್ನೆಯನ್ನು ಹಾಕಿದಂತೆ ಆಗುತ್ತಿತ್ತು ; ಎಂದರೆ

---

1. ಇಷ ಆಭೀಕ್ಷ್ಣ್ಯೇ ಎಂಬ ಕ್ರ್ಯಾದಿಧಾತು, ಇಷ ಗತೌ ಎಂಬ ದಿವಾದಿಯೂ ಇಲ್ಲಿ ಅರ್ಥಕ್ಕೆ ಹೊಂದುವದಿಲ್ಲ. ಇಷು ಇಚ್ಛಾಯಾಮ್ ಎಂಬ ತುದಾದಿಧಾತುವನ್ನೇ ಇಲ್ಲಿ ತೆಗೆದು ಕೊಳ್ಳಬೇಕು.

2. ಮೊದಲನೆಯ ಎರಡು ಧಾತುಗಳಿಗೆ ' ಇಷಿತಮ್ ' ಎಂಬ ರೂಪವು ವ್ಯಾಕರಣದಂತೆ ಬರುತ್ತದೆ; ಇಷು ಧಾತುವಿಗೆ ವಿಕಲ್ಪವಾಗಿ ' ಇಟ್ ' ಉಂಟು (ಪಾ. ೭-೨-೪೮); ಆದರೆ ವಿಕಲ್ಪವಾಗಿ ಇಟ್ ಬರುವ ಧಾತುವಿಗೆ ಕೃದಂತವಾದಾಗ ' ಇಟ್ ' ಬರುವದಿಲ್ಲವಾದ್ದರಿಂದ " ಇಷ್ಟಮ್ " ಎಂದೇ ರೂಪವಾಗಬೇಕು, " ಇಷಿತಮ್ " ಎಂಬ ರೂಪವಾಗುವದಿಲ್ಲ. ಆದ್ದರಿಂದ ಇದು ವೈದಿಕರೂಪವು ಎಂದು ಭಾಷ್ಯಕಾರರು ಬರೆದಿರುತ್ತಾರೆ. ಮುಂದೆ " ಪ್ರೇಷಿತಮ್ " ಎಂಬಲ್ಲಿ ಪ್ರೇರಣಾರ್ಥವಿರುವದರಿಂದ ಅಲ್ಲಿ ಈ ಆಕ್ಷೇಪವು ಹುಟ್ಟುವದಿಲ್ಲ.

3. ಧಾತುವಿಗೆ ಉಪಸರ್ಗದಿಂದ ಬೇರೆ ಅರ್ಥವು ಬರುತ್ತದೆ. ಉದಾ: ವಿಹಾರ, ಆಹಾರ,

" ಯಾವನು ಪ್ರೇರಣಮಾಡಿದ್ದರಿಂದ, ಅಥವಾ-" ಎಂಥ ಪ್ರೇರಣೆ ? " ಎಂಬುದು (ಪ್ರಶ್ನೆಯು) ಅಭಿಪ್ರಾಯವಾಗುತಿತ್ತು.[1] ' ಇಷಿತಮ್ ' ಎಂದು ಇದಕ್ಕೆ ವಿಶೇಷಣ ವನ್ನು ಹಾಕಿರುವದರಿಂದಲಾದರೋ ಆ ಎರಡು (ಅಭಿಪ್ರಾಯಗಳೂ) ವಾಕ್ಯಕ್ಕೆ ಉಂಟಾಗದಂತೆ ಆಯಿತು. (ಈಗ) " ಯಾವನ ಇಚ್ಛಾಮಾತ್ರದಿಂದ[2] ಪ್ರೇರಿಸಲ್ಪಟ್ಟು ? " ಎಂದು ಪ್ರಶ್ನೆಗೆ ವಿಶೇಷಾರ್ಥವೆಂದು ನಿಶ್ಚಯವಾಯಿತು.

(ಭಾಷ್ಯ)

೧೨. ಯದ್ಯೇಷೋಽರ್ಥೋಽಭಿಪ್ರೇತಃ ಸ್ಯಾತ್ " ಕೇನೇಷಿತಮ್ '' ಇತ್ಯೇತಾವತೈವ ಸಿದ್ಧತ್ವಾತ್ " ಪ್ರೇಷಿತಮ್ " ಇತಿ ನ ವಕ್ತವ್ಯಮ್ । ಅಪಿ ಚ ಶಬ್ದಾಧಿಕ್ಯಾದರ್ಥಾಧಿಕ್ಯಂ ಯುಕ್ತಮಿತಿ " ಇಚ್ಛಯಾ, ಕರ್ಮಣಾ, ವಾಚಾ ವಾ ಕೇನ ಪ್ರೇಷಿತಮ್?" ಇತ್ಯರ್ಥವಿಶೇಷೋಽವಗನ್ತುಂ ಯುಕ್ತಃ । ನ । ಪ್ರಶ್ನಸಾಮರ್ಥ್ಯಾತ್ । ದೇಹಾದಿಸಙ್ಘಾತಾದನಿತ್ಯಾತ್ ಕರ್ಮಕಾರ್ಯಾದ್ವಿರಕ್ತಃ, ಅತೋಽನ್ಯತ್ಕೂಟಸ್ಥಂ ನಿತ್ಯಂ ವಸ್ತು ಬುಭುತ್ಸಮಾನಃ ಪೃಚ್ಛತೀತಿ ಸಾಮರ್ಥ್ಯಾದುಪಪದ್ಯತೇ । ಇತರಥಾ ಇಚ್ಛಾವಾಕ್ಕರ್ಮಭಿರ್ದೇಹಾದಿಸಙ್ಘಾತಸ್ಯ ಪ್ರೇರಯಿತೃತ್ವಂ ಪ್ರಸಿದ್ಧಮಿತಿ ಪ್ರಶ್ನೋಽನರ್ಥಕ ಏವ ಸ್ಯಾತ್ । ಏವಮಪಿ ಪ್ರೇಷಿತಶಬ್ದಸ್ಯಾರ್ಥೋ ನ ಪ್ರದರ್ಶಿತ ಏವ । ನ । ಸಂಶಯವತೋಽಯಂ ಪ್ರಶ್ನ ಇತಿ ಪ್ರೇಷಿತಶಬ್ದಸ್ಯ ಅರ್ಥವಿಶೇಷ ಉಪಪದ್ಯತೇ । ಕಿಂ ಯಥಾಪ್ರಸಿದ್ಧಮೇವ ಕಾರ್ಯಕರಣಸಙ್ಘಾತಸ್ಯ ಪ್ರೇಷಯಿತೃತ್ವಮ್ ಕಿಂ ವಾ ಸಙ್ಘಾತವ್ಯತಿರಿಕ್ತಸ್ಯ ಸ್ವತನ್ತ್ರಸ್ಯ ಇಚ್ಛಾಮಾತ್ರೇಣೈವ ಮನಆದಿಪ್ರೇಷಯಿತೃತ್ವಮ್ ?–ಇತ್ಯಸ್ಯಾರ್ಥಸ್ಯ ಪ್ರದರ್ಶನಾರ್ಥಂ " ಕೇನೇಷಿತಮ್ ಪತತಿ ಪ್ರೇಷಿತಂ ಮನಃ '' ಇತಿ ವಿಶೇಷಣದ್ವಯಮುಪಪದ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ) :—ಈ ಅರ್ಥವೇ (ಶ್ರುತಿಯ) ಅಭಿಪ್ರಾಯವಾಗಿದ್ದರೆ " ಕೇನ ಇಷಿತಮ್ " (ಯಾರ ಇಷ್ಟದಂತೆ) ಎಂಬುದರಿಂದಲೇ (ಅಭಿಪ್ರಾಯವು) ಹೊರಡುವದರಿಂದ " ಪ್ರೇಷಿತಮ್ " ಎಂದು ಹೇಳಬೇಕಾಗಿರಲಿಲ್ಲವಲ್ಲ ! ಇದೂ ಅಲ್ಲದೆ, ಮಾತುಗಳು ಹೆಚ್ಚಾದಷ್ಟೂ ಅರ್ಥವೂ ಹೆಚ್ಚಾಗತಕ್ಕದ್ದು ಯುಕ್ತವಾದ್ದರಿಂದ ಇಚ್ಛೆಯಿಂದಲೋ

---

1. ಕೇನ ಪ್ರೇಷಿತಮ್ ಎಂದರೆ ಕೇನ ಪುರುಷೇಣ ಪ್ರೇಷಿತಮ್ ಎಂದು ಅಭಿಪ್ರಾಯವಾಗಬಹುದು. ಆಗ ಪ್ರೇರಕನು ಯಾರು ಎಂದು ಪ್ರಶ್ನೆ ; ಕೇನ ಪ್ರಕಾರೇಣ ಪ್ರೇಷಿತಮ್ ಎಂದೂ ಆಗಬಹುದು. ಆಗ ಯಾವ ಪ್ರಕಾರದ ಪ್ರೇರಣೆ ಎಂದು ಪ್ರಶ್ನೆ.

2. ಪ್ರೇರಕನ ಸನ್ನಿಧಿಮಾತ್ರದಿಂದ, ಅವನಲ್ಲಿ ಯಾವ ವ್ಯಾಪಾರವೂ ಇಲ್ಲದೆ.

ಕರ್ಮದಿಂದಲೋ, ವಾಕ್ಕಿನಿಂದಲೋ, ಯಾವದರಿಂದ[1] ಪ್ರೇರಿತವಾಗಿ (ಮನಸ್ಸು ವಿಷಯದಲ್ಲಿ ಎರಗುವದು ?) ಎಂಬ ಅರ್ಥವಿಶೇಷವು (ಈ ಪ್ರಶ್ನೆಗೆ ಇರುವದೆಂದು ನಿರ್ಣಯಿಸುವದು ಯುಕ್ತ(ವಲ್ಲವೆ ?)

(ಪರಿಹಾರ) :—ಅಲ್ಲ. ಏಕೆಂದರೆ (ಇಲ್ಲಿ) ಪ್ರಶ್ನೆಯ ಸಾಮರ್ಥ್ಯದಿಂದ (ನಮ್ಮ ಅಭಿಪ್ರಾಯವೇ ಸರಿಯೆಂದಾಗುತ್ತದೆ). ಕರ್ಮದ ಕಾರ್ಯವೂ ಅನಿತ್ಯವೂ ಆಗಿರುವ ದೇಹವೇ ಮುಂತಾದುವುಗಳ ಸಂಘಾತದಲ್ಲಿ[2] ವಿರಕ್ತನಾಗಿ ಇದಕ್ಕಿಂತ ಬೇರೆಯಾದ ಕೂಟಸ್ಥವಾದ[3] ನಿತ್ಯವಸ್ತು(ವಿದೆಯೇ) ತಿಳಿಯಬೇಕೆಂಬ ಇಚ್ಛೆಯಿಂದ ಕೇಳುತ್ತಾನೆಂದು (ಪ್ರಶ್ನೆಯ) ಸಾಮರ್ಥ್ಯದಿಂದ[4] ಯುಕ್ತವಾಗಿರುತ್ತದೆ. ಹಾಗಿಲ್ಲದಿದ್ದರೆ ಇಚ್ಛೆ, ವಾಕ್ಕು, ಕರ್ಮ - ಇವುಗಳಿಂದ ದೇಹಾದಿಸಂಘಾತವು (ಮನಸ್ಸನ್ನು) ಪ್ರೇರಿಸುತ್ತದೆ ಎಂಬುದು (ಎಲ್ಲರಿಗೂ) ತಿಳಿದೇ ಇರುವದರಿಂದ (ಈ) ಪ್ರಶ್ನೆಯೇ ನಿರರ್ಥಕವಾಗಿ ಬಿಡುತ್ತಿತ್ತು.

(ಆಕ್ಷೇಪ) :—ಈ ಪಕ್ಷದಲ್ಲಿಯೂ "ಪ್ರೇಷಿತಮ್" ಎಂಬ ಮಾತಿತ ಅರ್ಥವನ್ನೇನೂ ತೋರಿಸಿದಂತೆಯೇ ಆಗುವದಿಲ್ಲವಲ್ಲ !

(ಪರಿಹಾರ) .—ಹಾಗಲ್ಲ. ಇದು ಸಂಶಯವುಳ್ಳಾತನ ಪ್ರಶ್ನೆಯಾದ್ದರಿಂದ 'ಪ್ರೇಷಿತಮ್" ಎಂಬ ಮಾತಿಗೂ ಒಂದಾನೊಂದು ಅರ್ಥವುಂಟು. ಕಾರ್ಯಕರಣಸಂಘಾತವು ಪ್ರೇರಕವೆಂದು ಪ್ರಸಿದ್ಧವಾಗಿದೆಯಷ್ಟೆ ; ಹೀಗೆಯೇ (ಇದಕ್ಕೆ) ಪ್ರೇರಕತ್ವವಿದೆಯೇ ಅಥವಾ (ಈ) ಸಂಘಾತಕ್ಕಿಂತ ಬೇರೆಯಾಗಿರುವ ಸ್ವತಂತ್ರವಾದ (ಯಾವದಾದರೊಂದು ತತ್ತ್ವಕ್ಕೆ) ಇಚ್ಛಾಮಾತ್ರದಿಂದಲೇ ಮನಆದಿಗಳನ್ನು ಪ್ರೇರಿಸುವ ಕರ್ತೃತ್ವವಿದೆಯೆ ಎಂಬ ಅರ್ಥವನ್ನು ತಿಳಿಸುವದಕ್ಕಾಗಿ "ಯಾವದರ ಇಷ್ಟದಂತೆ ಪ್ರೇರಿತವಾಗಿ ಮನಸ್ಸು (ವಿಷಯದಲ್ಲಿ) ಎರಗುವದು ?" ಎಂದು (ಇಷಿತ ಪ್ರೇಷಿತ ಎಂಬ) ಎರಡು ವಿಶೇಷಣಗಳನ್ನು (ಹಾಕಿರುವದು) ಯುಕ್ತವಾಗಿರುತ್ತದೆ.

---

1. ಕೇನೇಷಿತಮ್, ಕೇನ ಪ್ರೇಷಿತಮ್-ಕತಮೇನ ಇಷ್ಟಂ ಕತಮೇನ ಪ್ರೇರಿತಮ್ ? ಯಾವದರ ಇಚ್ಛೆಯಂತೆ, ಯಾವದರ ಪ್ರೇರಣೆಗೆ ಒಳಪಟ್ಟು ? ಎಂದು ಪೂರ್ವಪಕ್ಷಿಯ ಅರ್ಥ.

2. ಒಟ್ಟುಗೂಡಿ ಕೆಲಸಮಾಡುವ ಗುಂಪಿನಲ್ಲಿ.

3. ನಿರ್ವಿಕಾರಿಯಾದ.

4. ವಾಕ್ಯದಲ್ಲಿ ಈ ಅಭಿಪ್ರಾಯದ ಶಬ್ದವಿಲ್ಲದಿದ್ದರೂ ಪ್ರಶ್ನೆಯ ಸಾರ್ಥಕ್ಯಕ್ಕಾಗಿ ಹೀಗೆಯೇ ಕಲ್ಪಿಸಬೇಕು.

5. ಇಚ್ಛಾದಿಗಳೇ ಮನುಷ್ಯನನ್ನು ತೊಡಗಿಸುತ್ತವೆ. ಆದ್ದರಿಂದ ಅವುಗಳೇ ಮನಸ್ಸಿಗೆ ಪ್ರೇರಕ ಎಂಬುದು ಎಲ್ಲರಿಗೂ ಗೊತ್ತಿರುವದು; ಆದನ್ನೇ ಶಾಸ್ತ್ರವು ಹೇಳಿದರೆ ಬರಿಯ ಅನುವಾದವಾಗುವದು.

## ಮನಸ್ಸಿನ ವಿಷಯದ ಪ್ರಶ್ನೆಯ ಅಭಿಪ್ರಾಯ

(ಭಾಷ್ಯ)

೧೩. ನನು ಸ್ವತನ್ತ್ರಂ ಮನಃ ಸ್ವವಿಷಯೇ ಸ್ವಯಂ ಪತತೀತಿ ಪ್ರಸಿದ್ಧಮ್ । ತತ್ರ ಕಥಂ ಪ್ರಶ್ನ ಉಪಪದ್ಯತ ಇತಿ ? ಉಚ್ಯತೇ । ಯದಿ ಸ್ವತನ್ತ್ರಂ ಮನಃ ಪ್ರವೃತ್ತಿನಿವೃತ್ತಿವಿಷಯೇ ಸ್ಯಾತ್, ತರ್ಹಿ ಸರ್ವಸ್ಯಾನಿಷ್ಟಚಿನ್ತನಂ ನ ಸ್ಯಾತ್ । ಅನರ್ಥಂ ಚ ಜಾನನ್ ಸಙ್ಕಲ್ಪಯತಿ । ಅಭ್ಯಗ್ರದುಃಖೇಚ ಕಾರ್ಯೇ ವಾರ್ಯಮಾಣಮಪಿ ಪ್ರವರ್ತತ ಏವ ಮನಃ । ತಸ್ಮಾದ್ಯುಕ್ತ ಏವ "ಕೇನೇಷಿತಮ್" ಇತ್ಯಾದಿಪ್ರಶ್ನಃ ॥

(ಭಾಷ್ಯಾರ್ಥ)

(ಆಕ್ಷೇಪ) —ಮನಸ್ಸು ಸ್ವತಂತ್ರವೆಂದೂ ತನ್ನ ವಿಷಯದಲ್ಲಿ ತಾನೇ ಎರಗುತ್ತಿರುವದೆಂದೂ ಪ್ರಸಿದ್ಧವಾಗಿರುತ್ತದೆ. ಹೀಗಿರುವಲ್ಲಿ ಪ್ರಶ್ನೆಯು ಹೇಗೆ ಹೊಂದುತ್ತದೆ?

(ಪರಿಹಾರ) —ಹೇಳುತ್ತೇವೆ (ಕೇಳಿ). ಮುಂಬರಿಯುವ ಮತ್ತು ಹಿಂಜಗ್ಗುವ ವಿಷಯದಲ್ಲಿ ಮನಸ್ಸು ಸ್ವತಂತ್ರವಾಗಿದ್ದಿದ್ದರೆ ಆಗ ಯಾರಿಗೂ ಅನಿಷ್ಟವಾದ ಯೋಚನೆಯುಂಟಾಗಬಾರದಾಗಿತ್ತು (ಇದು) ಅನರ್ಥವೆಂದು ತಿಳಿದರೂ ಮನಸ್ಸು ಸಂಕಲ್ಪಿಸುತ್ತದೆ ಮತ್ತು ಕೂಡಲೆ[1] ದುಃಖವನ್ನು ಕೊಡುವ ಕೆಲಸದಲ್ಲಿ ಬೇಡವೆಂದರೂ ತೊಡಗುತ್ತದೆ. ಆದ್ದರಿಂದ ಯಾರ ಇಚ್ಛಾಮಾತ್ರದಿಂದ ಎಂದು ಮುಂತಾಗಿ ಕೇಳಿರುವ ಪ್ರಶ್ನೆಯು ಯುಕ್ತವೇ ಆಗಿದೆ.

## ಪ್ರಾಣೇಂದ್ರಿಯಗಳನ್ನು ಕುರಿತ ಪ್ರಶ್ನೆ

೧೪. ಕೇನ ಪ್ರಾಣಃ ಯುಕ್ತಃ ನಿಯುಕ್ತಃ ಪ್ರೇರಿತಃ ಸನ್ ಪ್ರೈತಿ ಗಚ್ಛತಿ ಸ್ವವ್ಯಾಪಾರಂ ಪ್ರತಿ । "ಪ್ರಥಮಃ" ಇತಿ ಪ್ರಾಣವಿಶೇಷಣಂ ಸ್ಯಾತ್, ತತ್ಪೂರ್ವತ್ವಾತ್ ಸರ್ವೇನ್ದ್ರಿಯಪ್ರವೃತ್ತೀನಾಮ್ । ಕೇನ ಇಷಿತಾಂ ವಾಚಮ್ ಇಮಾಂ ಶಬ್ದಲಕ್ಷಣಂ ವದನ್ತಿ ಲೌಕಿಕಾಃ । ತಥಾ ಚಕ್ಷುಃ ಶ್ರೋತ್ರಂ ಚ ಸ್ವೇ ಸ್ವೇ ವಿಷಯೇ ಕಉ ದೇವಃ ದ್ಯೋತನವಾನ್ ಯುನಕ್ತಿ ನಿಯುಙ್ಕ್ತೇ ಪ್ರೇರಯತಿ ॥

(ಭಾಷ್ಯಾರ್ಥ)

ಯಾರಿಂದ ಯುಕ್ತವಾಗಿ ಎಂದರೆ ಕಟ್ಟುವಡೆದು ಎಂದರೆ ಪ್ರೇರಿತವಾಗಿ, ಪ್ರಾಣವು ತನ್ನ ಕೆಲಸದಲ್ಲಿ ಸಾಗುತ್ತದೆ ಎಂದರೆ ಹೋಗುತ್ತದೆ? ಪ್ರಥಮ ಎಂಬುದು ಪ್ರಾಣಕ್ಕೆ ವಿಶೇಷಣವಾಗಬಹುದು, ಏಕೆಂದರೆ ಸಕಲ ಇಂದ್ರಿಯಗಳ ಪ್ರವೃತ್ತಿಗಳೂ ಆ (ಪ್ರಾಣದ) ಸಹಾಯದಿಂದಲೇ (ನಡೆಯುತ್ತವೆ)[2] ಯಾರ ಇಚ್ಛೆಯಂತೆ ಈ ಶಬ್ದ

---

1. "ಅತ್ಯುಗ್ರದುಃಖೇ" ಎಂಬ (ಆ॥) ಪಾಠಕ್ಕೆ ಒಹಳ ಉಗ್ರವಾದ ದುಃಖವನ್ನು ಕೊಡುವ ಎಂದರ್ಥ.

2. ಪ್ರ. ೨-೪; ಛಾ. ೫-೧-೧೨ ರಿಂದ ೧೫.

ರೂಪವಾದ[1] ವಾಕ್ಕನ್ನು ಜನರು ಆಡುತ್ತಿರುವರು ? ಇದರಂತೆ ಚಕ್ಷುರಿಂದ್ರಿಯವನ್ನೂ ಶ್ರೋತ್ರೇಂದ್ರಿಯವನ್ನೂ ತನ್ನ ತನ್ನ ವಿಷಯದಲ್ಲಿ ಯಾವ ದೇವನು (ಯಾವ) ಪ್ರಕಾಶವುಳ್ಳವನು "ಯುನಕ್ತಿ" ಎಂದರೆ ಕಟ್ಟುಮಾಡುತ್ತಿರುವನು, ಪ್ರೇರಿಸುತ್ತಿರುವನು ?

## ಗುರುವಿನ ಉತ್ತರ

(ಭಾಷ್ಯ)

೧೫. ಏವಂ ಪೃಷ್ಟವತೇ ಯೋಗ್ಯಾಯ ಆಹ ಗುರುಃ ಶೃಣು ಯತ್ ತ್ವಂ ಪೃಚ್ಛಸಿ, ಮನಆದಿಕರಣಜಾತಸ್ಯ ಕೋ ದೇವ· ಸ್ವವಿಷಯಂ ಪ್ರತಿ ಪ್ರೇರಯಿತಾ ಕಥಂ ವಾ ಪ್ರೇರಯಿತೀತಿ ||

(ಭಾಷ್ಯಾರ್ಥ)

ಹೀಗೆಂದು ಕೇಳಿದ ಯೋಗ್ಯನಾದ (ಶಿಷ್ಯನಿಗೆ) ಗುರು ಹೇಳುತ್ತಾನೆ. "ಮನಸ್ಸು ಮುಂತಾದ ಕರಣಸಮೂಹವನ್ನು ಯಾವ ದೇವನು ತನ್ನ ವಿಷಯದ ಕಡೆಗೆ ಪ್ರೇರಿಸಿ (ಕಳುಹಿಸುತ್ತಾನೆ?) ಮತ್ತು ಹೇಗೆ ಪ್ರೇರೇಪಿಸುತ್ತಾನೆ ಎಂದು ನೀನು ಕೇಳಿದೆಯಷ್ಟೆ. (ಅದನ್ನು ಹೇಳುವೆನು) ಕೇಳು.

**ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್**
**ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ।**
**ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ**
**ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವನ್ತಿ ॥ ೨ ॥**

೨. (ಅದು) ಶ್ರೋತ್ರಕ್ಕೆ ಶ್ರೋತ್ರವು, ಮನಸ್ಸಿಗೆ ಮನಸ್ಸು, ವಾಕ್ಕಿಗೆ ವಾಕ್ಕು ಮತ್ತು ಅದೇ ಪ್ರಾಣಕ್ಕೆ ಪ್ರಾಣವು, ಚಕ್ಷುವಿಗೆ ಚಕ್ಷುವು. ಹೀಗಿರುವದರಿಂದ ಧೀರರು (ತಪ್ಪು ತಿಳಿವಳಿಕೆಯನ್ನು) ಬಿಟ್ಟು ಈ ಲೋಕದಿಂದ ಹೊರಟು ಹೋಗಿ ಅಮೃತರಾಗುವರು.

## ಆತ್ಮನು ಶ್ರೋತ್ರವೇ ಮುಂತಾದವುಗಳನ್ನೂ ಅರಿಯುವ ಚೈತನ್ಯವು

(ಭಾಷ್ಯ)

೧೬. ಶ್ರೋತ್ರಸ್ಯ ಶ್ರೋತ್ರಮ್ । ಶೃಣೋತ್ಯನೇನೇತಿ ಶ್ರೋತ್ರಮ್ । ಶಬ್ದಸ್ಯ

---

1. ಇಲ್ಲಿ ವದನ್ತಿ-ಮಾತಾಡುತ್ತಿರುವರು-ಎಂಬ ಕ್ರಿಯಾಪದಕ್ಕೆ ಅನುಗುಣವಾಗಿ ವ್ಯಕ್ತವಾಗಿರುವ ಶಬ್ದರೂಪವನ್ನೇ ಗ್ರಹಿಸಬೇಕು. ಕರಣಗಳ ವ್ಯಾಪಾರವು ಯಾರಿಂದ ನಡೆಯುವದು ? ಎಂಬುದೇ ಪ್ರಶ್ನೆಯ ತಿರುಳಾಗಿರುವದರಿಂದ ವಾಗಿಂದ್ರಿಯದ ವ್ಯಾಪಾರವಾದ ಮಾತಾಡುವಿಕೆ ಎಂಬುದು ಯಾರ ಇಚ್ಛೆಯಂತೆ ನಡೆಯುತ್ತಿರುವದು ?—ಎಂದೇ ವಾಕ್ಯಾರ್ಥ.

ಶ್ರವಣಂ ಪ್ರತಿ ಕರಣಂ ಶಬ್ದಾಭಿವ್ಯಞ್ಜಕಂ ಶ್ರೋತ್ರಮಿನ್ದ್ರಿಯಮ್। ತಸ್ಯ ಶ್ರೋತ್ರಂ ಸ ಯಸ್ತ್ವಯಾ ಪೃಷ್ಟಃ “ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ” (೧) ಇತಿ। ಅಸೌ ಏವಂವಿಶಿಷ್ಟಃ ಶ್ರೋತ್ರಾದೀನಿ ನಿಯುಙ್ಕ್ತೇ–ಇತಿ ವಕ್ತವ್ಯೇ ನನ್ವೇತದನನು ರೂಪಂ ಪ್ರತಿವಚನಂ ‘ ಶ್ರೋತ್ರಸ್ಯ ಶ್ರೋತ್ರಮ್ ’ ಇತಿ। ನೈಷ ದೋಷಃ। ತಸ್ಯ ಅನ್ಯಥಾ ವಿಶೇಷಾನವಗಮಾತ್। ಯದಿ ಹಿ ಶ್ರೋತ್ರಾದಿವ್ಯಾಪಾರವ್ಯತಿರಿಕ್ತೇನ ಸ್ವ ವ್ಯಾಪಾರೇಣ ವಿಶಿಷ್ಟಃ ಶ್ರೋತ್ರಾದಿನಿಯೋಕ್ತಾ ಅವಗಮ್ಯೇತ ದಾತ್ರಾದಿಪ್ರಯೋ ಕ್ತೃವತ್ ತದಾ ಇದಮ್ ಅನನುರೂಪಂ ಪ್ರತಿವಚನಂ ಸ್ಯಾತ್। ನ ತ್ವಿಹ ಶ್ರೋತ್ರಾ ದೀನಾಂ ಪ್ರಯೋಕ್ತಾ ಸ್ವವ್ಯಾಪಾರವಿಶಿಷ್ಟೋ ಲವಿತ್ರಾದಿವದ್ ಅಧಿಗಮ್ಯತೇ। ಶ್ರೋತ್ರಾದೀನಾಮೇವ ತು ಸಂಹತಾನಾಂ ವ್ಯಾಪಾರೇಣ ಆಲೋಚನಸಙ್ಕಲ್ಪಾ ಧ್ಯವಸಾಯಲಕ್ಷಣೇನ ಫಲಾವಸಾನಲಿಙ್ಗೇನ ಅವಗಮ್ಯತೇ–ಅಸ್ತಿ ಹಿ ಶ್ರೋತ್ರಾದಿ ಭಿರಸಂಹತೋ ಯತ್ಪ್ರಯೋಜನಪ್ರಯುಕ್ತಃ ಶ್ರೋತ್ರಾದಿಕಲಾಪಃ। ಗೃಹಾದಿವದಿತಿ ಸಂಹತಾನಾಂ ಪರಾರ್ಥತ್ವಾದವಗಮ್ಯತೇ ಶ್ರೋತ್ರಾದೀನಾಂ ಪ್ರಯೋಕ್ತಾ। ತಸ್ಮಾತ್ ಅನುರೂಪಮೇವೇದಂ ಪ್ರತಿವಚನಂ “ ಶ್ರೋತ್ರಸ್ಯ ಶ್ರೋತ್ರಮ್ ” ಇತ್ಯಾದಿ ॥

(ಭಾಷ್ಯಾರ್ಥ)

“ ಶ್ರೋತ್ರಕ್ಕೆ ಶ್ರೋತ್ರವು.” ಯಾವದರಿಂದ ಕೇಳುತ್ತಾರೋ ಅದು ಶ್ರೋತ್ರವು. ಶಬ್ದವನ್ನು ಕೇಳುವದಕ್ಕೆ ಕಾರಣವಾಗಿ ಶಬ್ದವನ್ನು ತೋರಿಸಿಕೊಡುವ ಇಂದ್ರಿಯವು ಶ್ರೋತ್ರವು. “ ಚಕ್ಷುವನ್ನೂ ಶ್ರೋತ್ರವನ್ನೂ ಯಾವ ದೇವನು ಕಟ್ಟುಮಾಡುತ್ತಿರು ವನು ? ” (೧) ಎಂದು ನೀನು ಕೇಳಿದೆಯಷ್ಟೆ, ಆತನು ಅದಕ್ಕೆ ಶ್ರೋತ್ರವು.

(ಆಕ್ಷೇಪ) —“ ಇಂಥ ಗುಣಗಳಿಂದ ಕೂಡಿದ ಇಂಥವನು ಶ್ರೋತ್ರಾದಿ ಗಳನ್ನು ಕಟ್ಟುಮಾಡುತ್ತಿರುವನು ” ಎಂದು ಹೇಳುವದನ್ನು ಬಿಟ್ಟು “ ಶ್ರೋತ್ರಕ್ಕೂ ಶ್ರೋತ್ರವು ”ಎಂದು (ಹೇಳಿದ) ಈ (ಉತ್ತರವು) ಅನುಗುಣವಾಗಲಿಲ್ಲ ವೆನ್ನ ಬೇಕಲ್ಲವೆ ?

(ಪರಿಹಾರ) :—ಇದು ತಪ್ಪಲ್ಲ. ಏಕೆಂದರೆ ಆತನಿಗೆ ಬೇರೆ ರೀತಿಯಾದ (ಯಾವದೊಂದು) ವಿಶೇಷರೂಪವೂ ತಿಳಿಯಬರುವಂತಿಲ್ಲ. ಶ್ರೋತ್ರೇಂದ್ರಿಯವೇ ಮುಂತಾದವುಗಳ ವ್ಯಾಪಾರವಲ್ಲದೆ ತನ್ನ ಒಂದು ವ್ಯಾಪಾರದಿಂದೊಡಗೂಡಿದ ಶ್ರೋತ್ರಾದಿಗಳನ್ನು ಕಟ್ಟುಮಾಡುವಾತನು ಕುಡುಗೋಲು ಮುಂತಾದವುಗಳನ್ನು ಪ್ರಯೋಗಿಸುವವನಂತೆ[1] (ಬೇರೆಯಾಗಿ) ತಿಳಿಯಬರುವಹಾಗಿದ್ದಿದ್ದರೆ ಆಗ ಈ ಉತ್ತ

---

1. ಕುಡುಗೋಲಿನಿಂದ ಪೈರನ್ನು ಕೊಯ್ಯುತ್ತಿರುವವನೇ ರಾಮನು ಎಂಬಲ್ಲಿ ಕುಡು ಗೋಲನ್ನುಪಯೋಗಿಸುವ ವ್ಯಾಪಾರವಿಶೇಷವು ರಾಮನಲ್ಲಿರುವದು ಕಂಡುಬರುತ್ತದೆ; ಆದರೆ ಶ್ರೋತ್ರಾದಿಗಳನ್ನು ಪ್ರೇರಿಸುವವನು ‘ ಆತ್ಮನು ’ ಎಂಬಲ್ಲಿ ಹಾಗಿಲ್ಲ, ಏಕೆಂದರೆ ಆತ್ಮನಲ್ಲಿ ಸ್ವತಃ ಯಾವ ವ್ಯಾಪಾರವೂ ಇರುವದಿಲ್ಲ. ಸೂ. ಭಾ. ೨-೩-೪೦.

ರವು ಅನುಗುಣವಾಗಿಲ್ಲವೆಂದಾಗುತ್ತಿತ್ತು. ಆದರೆ ಶ್ರೋತ್ರಾದಿಗಳನ್ನು ಪ್ರೇರಿಸುವ (ಆತ್ಮನು) ಪೈರುಕೊಯ್ಯುವವನೇ ಮುಂತಾದವರಂತೆ ತನ್ನ ವ್ಯಾಪಾರದಿಂದೊಡಗೂಡಿದವನಾಗಿ (ಬೇರೆಯಾಗಿ) ಕಂಡುಬರುತ್ತಿರಲಿಲ್ಲ. ಮತ್ತೇನೆಂದರೆ ಶ್ರೋತ್ರಾದಿಗಳೇ ಒಟ್ಟು ಸೇರಿಕೊಂಡು (ತೋರಿಸುತ್ತಿರುವ) ಆಲೋಚನೆ, ಸಂಕಲ್ಪ, ಅಧ್ಯವಸಾಯ[1] ಎಂಬ ವ್ಯಾಪಾರಗಳು ಫಲದಲ್ಲಿ ಕೊನೆಗಾಣುವವೆಂಬ ಲಿಂಗದಿಂದ[2] '(ಈ) ಶ್ರೋತ್ರಾದಿಗಳೊಡನೆ ಸೇರಿಕೊಳ್ಳದೆ ಇರುವವನೊಬ್ಬಾತನು ಇರುತ್ತಾನೆ; ಆತನ ಪ್ರಯೋಜನಕ್ಕಾಗಿಯೇ ಶ್ರೋತ್ರಾದಿಗಳ ಗುಂಪು ಮನೆಯೇ ಮುಂತಾದವುಗಳಂತೆ ವ್ಯಾಪಾರಮಾಡುತ್ತಿದೆ '' ಎಂದು, ಒಟ್ಟುಗೂಡಿರುವ ವಸ್ತುಗಳು ಮತ್ತೊಂದಕ್ಕಾಗಿರುವದರಿಂದ,[3] ಶ್ರೋತ್ರಾದಿಗಳನ್ನು ಪ್ರೇರಿಸುವಾತನು ತಿಳಿದುಬರುತ್ತಿದಾನೆ. ಆದ್ದರಿಂದ "ಶ್ರೋತ್ರಕ್ಕೆ ಶ್ರೋತ್ರವು" ಎಂದು ಮುಂತಾಗಿ (ಕೊಟ್ಟಿರುವ) ಉತ್ತರವು ಅನುಗುಣವಾಗಿಯೇ ಇರುತ್ತದೆ.

(ಭಾಷ್ಯ)

೧೭. ಕಃ ಪುನರತ್ರ ಪದಾರ್ಥಃ ಶ್ರೋತ್ರಸ್ಯ ಶ್ರೋತ್ರಮಿತ್ಯಾದೇಃ ? ನ ಹ್ಯತ್ರ ಶ್ರೋತ್ರಸ್ಯ ಶ್ರೋತ್ರಾನ್ತರೇಣಾರ್ಥಃ, ಯಥಾ ಪ್ರಕಾಶಸ್ಯ ಪ್ರಕಾಶಾನ್ತರೇಣ । ನೈಷ ದೋಷಃ | ಅಯಮತ್ರ ಪದಾರ್ಥಃ—ಶ್ರೋತ್ರಂ ತಾವತ್ ಸ್ವವಿಷಯವ್ಯಞ್ಜನಸಮರ್ಥಂ ದೃಷ್ಟಮ್ । ತತ್ತು[4] ಸ್ವವಿಷಯವ್ಯಞ್ಜನಸಾಮರ್ಥ್ಯಂ ಶ್ರೋತ್ರಸ್ಯ ಚೈತನ್ಯೇ ಹ್ಯಾತ್ಮಜ್ಯೋತಿಷಿ ನಿತ್ಯೇಽಸಂಹತೇ ಸರ್ವಾನ್ತರೇ ಸತಿ ಭವತಿ, ನಾಸತಿ

---

1. ಇಂದ್ರಿಯಗಳಿಗೂ ವಿಷಯಕ್ಕೂ ಸಂಬಂಧವಾಗಲು ಕೂಡಲೆ ಆಗುವ ಅರಿವು ಆಲೋಚನವು (sensation); ಹೀಗೆ ಮಾಡತಕ್ಕದ್ದು, ಹಿಂದೆ ಮಾಡತಕ್ಕದ್ದಲ್ಲ ಎಂದು ನಿಂಗಡಿಸುವದು **ಸಂಕಲ್ಪವು**; ಇದು ಇಂಥದ್ದು, ಹೀಗೆ ಮಾಡಬೇಕು-ಎಂದು ನಿಶ್ಚಯಿಸುವದು ಅಧ್ಯವಸಾಯವು

2. ಆಲೋಚನೆ, ಸಂಕಲ್ಪ, ನಿಶ್ಚಯ-ಇವುಗಳು ಯಾವ ಅರಿವಿನಲ್ಲಿ ಕೊನೆಗಾಣುವವೋ ಅದೇ ಫಲವು, ಆ ಫಲಚೈತನ್ಯವೇ ಆತ್ಮನು. ಆಲೋಚನವೇ ಮುಂತಾದ ವ್ಯಾಪಾರಗಳಿಂದಾಗುವ ಫಲವು ಯಾರಿಗೋಸ್ಕರವೋ ಅವನು ಆತ್ಮನು ಎಂದು ಸಾಮಾನ್ಯರು ಫಲರೂಪವಾದ ಲಿಂಗದಿಂದ ಆತ್ಮನನ್ನು ಊಹಿಸಿಕೊಳ್ಳಬೇಕಾಗಿದೆಯೇ ಹೊರತು ಆತ್ಮನ ವ್ಯಾಪಾರದಿಂದ ಇಂಥವನು ಆತ್ಮನೆಂದು ನಿಶ್ಚಯಿಸುವದಕ್ಕೆ ಬರುವದಿಲ್ಲ ಎಂದು ಭಾವ.

3. ಸಂಘಾತವು ಪರಾರ್ಥವಾಗಿರುತ್ತದೆ ಎಂಬ ಸಾಂಖ್ಯರ ಯುಕ್ತಿಯನ್ನು ವೇದಾಂತಿಗಳೂ ವ್ಯವಹಾರದಲ್ಲಿ ಉಪಯೋಗಿಸುವರು. ಕ. ಭಾ. ೨-೨-೧, ಪ್ರ. ಭಾ. ೪-೧, ತೈ ಭಾ ೨-೭, ಐ. ಭಾ. ೧-೩.

4. (ವಾ||) ಪಾಠ.

ಇತ್ಯತಃ "ಶ್ರೋತ್ರಸ್ಯ ಶ್ರೋತ್ರಮ್" ಇತ್ಯಾದ್ಯುಪಪದ್ಯತೇ | ತಥಾ ಚ ಶ್ರುತ್ಯನ್ತರಾಣಿ "ಆತ್ಮನೈವಾಯಂ ಜ್ಯೋತಿಷಾಽಽಸ್ತೇ" (ಬೃ. ೪-೩-೬) "ತಸ್ಯ ಭಾಸಾ ಸರ್ವಮಿದಂ ವಿಭಾತಿ" (ಮುಂ. ೨-೨-೧೦), "ಯೇನ ಸೂರ್ಯಸ್ತಪತಿ ತೇಜಸೇದ್ಧಃ" (ತೈ. ಬ್ರಾ ೩-೧೨-೯-೭) ಇತ್ಯಾದೀನಿ | "ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ||" (ಗೀ. ೧೫-೧೨) "ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ||" (ಗೀ. ೧೩-೩೩) ಇತಿ ಚ [1] **ಗೀತಾಸು । ಕಾಠಕೇ** ಚ ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಮ್" (ಕ. ೨-೨-೧೩) | ಶ್ರೋತ್ರಾದ್ಯೇವ ಸರ್ವಸ್ಯಾತ್ಮಭೂತಂ ಚೇತನಮ್ ಇತಿ ಪ್ರಸಿದ್ಧಮ್ । ತದಿಹ ನಿವರ್ತ್ಯತೇ | ಅಸ್ತಿ ಕಿಮಪಿ ವಿದ್ವದ್ಬುದ್ಧಿಗಮ್ಯಂ ಸರ್ವಾನ್ತರತಮಂ ಕೂಟಸ್ಥಮಜಮಜರಮಮೃತಮಭಯಮ್ ಶ್ರೋತ್ರಾದೇರಪಿ ಶ್ರೋತ್ರಾದಿ ತತ್ಸಾಮರ್ಥ್ಯನಿಮಿತ್ತಮ್ ಇತಿ ಪ್ರತಿವಚನಂ ಶಬ್ದಾರ್ಥಶ್ಚೋಪಪದ್ಯತ ಏವ ||

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಇಲ್ಲಿ "ಶ್ರೋತ್ರಕ್ಕೂ ಶ್ರೋತ್ರವು' ಎಂಬ ಮಾತಿನ ಅರ್ಥವೇನು? ಬೆಳಕಿಗೆ ಮತ್ತೊಂದು ಬೆಳಕಿನಿಂದ ಆಗಬೇಕಾದದ್ದೇನೂ ಹೇಗೆ ಇರುವದಿಲ್ಲವೋ, ಹಾಗೆಯೇ ಶ್ರೋತ್ರೇಂದ್ರಿಯಕ್ಕೆ ಮತ್ತೊಂದು ಶ್ರೋತ್ರದಿಂದ ಆಗಬೇಕಾದದ್ದೇನೂ ಇರುವದಿಲ್ಲವಲ್ಲ!

(ಪರಿಹಾರ) :—ಇದೇನೂ ತಪ್ಪಲ್ಲ. ಇಲ್ಲಿ ಈ ಮಾತಿಗೆ ಈ ಅರ್ಥವಿದೆ. ಶ್ರೋತ್ರವಂತೂ ತನ್ನ ವಿಷಯವನ್ನು ತಿಳಿಸಿಕೊಡುವದಕ್ಕೆ ಸಮರ್ಥವಾಗಿದೆ ಎಂಬುದು ಕಂಡೇ ಇದೆ. ಆದರೆ ಶ್ರೋತ್ರಕ್ಕೆ ತನ್ನ ವಿಷಯವನ್ನು ತಿಳಿಸುವ ಈ ಸಾಮರ್ಥ್ಯವು ಚೈತನ್ಯರೂಪವೂ ನಿತ್ಯವೂ ಮತ್ತೊಂದರೊಂದಿಗೆ ಸೇರಿಕೊಳ್ಳದೆ ಇರುವದೂ ಎಲ್ಲಕ್ಕೂ ಒಳಗಿರುವದೂ ಆದ ಆತ್ಮಜ್ಯೋತಿಯಿದ್ದರೆ ಉಂಟಾದೀತೇ ಹೊರತು ಇಲ್ಲದಿದ್ದರೆ (ಉಂಟಾಗಲಾರ)ದಾದ್ದರಿಂದ [2] "ಶ್ರೋತ್ರಕ್ಕೆ ಶ್ರೋತ್ರವು" ಎಂದು ಮುಂತಾಗಿ [3] (ಅದನ್ನು ಕರೆದಿರುವದು) ಯುಕ್ತವಾಗಿರುತ್ತದೆ. "ಈತನು ಆತ್ಮನ ಬೆಳಕಿನಿಂದಲೇ ಕುಳಿತಿರುವನು" (ಬೃ. ೪-೩-೬), "ಆತನ ಬೆಳಕಿನಿಂದ ಇದೆಲ್ಲವೂ ಬೆಳಗುತ್ತಿರುವದು" (ಮು. ೨-೨-೧೦), "ಯಾವ ತೇಜಸ್ಸಿನಿಂದ ಹೊತ್ತಿಕೊಂಡು

---

1. (ವಾ||) ಷಾರ,

2. ಕಿವಿಯಿಂದ ಕೇಳುತ್ತಾನೆ ಎಂಬ ವ್ಯವಹಾರವು ಲೋಕದಲ್ಲಿದ್ದರೂ ನಿಜವಾಗಿ ಕೇಳುವಿಕೆ ಮುಂತಾದ ಅರಿವು ಆತ್ಮಚೈತನ್ಯದಿಂದಲೇ ಆಗುವದು. ಶ್ರೋತ್ರಾದಿಗಳು ಬರಿಯ ಕರಣಗಳು. ಬೃ. ಭಾ ೧-೪-೧೦, ೩-೪-೨; ಕ. ಭಾ. ೨-೧-೩; ಐ. ಭಾ ೩-೧.

4 ಬೃ. ಭಾ. ೩-೪-೨, ೪-೩-೩೦; ಐ. ೧ ಉಪಸಂಹಾರ ಭಾಷ್ಯ.

ಸೂರ್ಯನು ತಪಿಸುತ್ತಿರುವನೋ" (ತೈ. ಬ್ರಾ. ೩-೧೨-೯-೭) ಮುಂತಾದ ಬೇರೆಯ **ಶ್ರುತಿಗಳೂ** ಹಾಗೆಂದೇ (ಹೇಳುತ್ತವೆ). "ಆದಿತ್ಯನಲ್ಲಿರುವ ಯಾವ ಬೆಳಕು ಜಗತ್ತೆಲ್ಲವನ್ನೂ ಬೆಳಗುತ್ತಿರುವದೋ (ಅದು ನನ್ನದೇ)" (ಗೀ. ೧೫-೧೨), "ಎಲೈ ಭರತವಂಶೋತ್ಪನ್ನನೆ, (ಸೂರ್ಯನು ಲೋಕವೆಲ್ಲವನ್ನೂ ಹೇಗೆ ಬೆಳಗುತ್ತಿರುವನೋ ಹಾಗೆಯೇ) ಕ್ಷೇತ್ರಿ(ಯಾದ ಆತ್ಮನು) ಕ್ಷೇತ್ರವೆಲ್ಲವನ್ನೂ [1] ಬೆಳಗುತ್ತಿರುವನು" (ಗೀ. ೧೩-೩೩) ಎಂದು **ಭಗವದ್ಗೀತೆಯಲ್ಲಿರುತ್ತದೆ. ಕಠೋಪನಿಷತ್ತಿನಲ್ಲಿಯೂ** "ಅನಿತ್ಯರುಗಳಲ್ಲಿ ನಿತ್ಯನಾಗಿ ಚೇತನರಲ್ಲಿ ಚೇತನನಾಗಿ" (ಕ. ೨-೨-೧೩) ಎಂದಿದೆ. ಶ್ರೋತ್ರವೇ ಮುಂತಾದದ್ದು ಎಲ್ಲರಿಗೂ ಆತ್ಮನಾಗಿರುವ ಚೇತನವೆಂದು (ಲೋಕದಲ್ಲಿ) ಪ್ರಸಿದ್ಧವಾಗಿರುತ್ತದೆಯಷ್ಟೆ. ಆ(ತಪ್ಪುತಿಳಿವಳಿಕೆಯನ್ನು)"ಜ್ಞಾನಿಗಳ ಬುದ್ಧಿಗೆ(ಮಾತ್ರ) ಗೋಚರವಾಗಿರುವದಾಗಿಯೂ [2] ಎಲ್ಲಕ್ಕಿಂತಲೂ ಒಳಗಿರುವ (ಆತ್ಮನಾಗಿಯೂ) [3] **ಕೂಟಸ್ಥ**ವಾಗಿಯೂ [4] ಜನ್ಮರಹಿತವಾಗಿಯೂ ಮುಪ್ಪಿಲ್ಲದ್ದಾಗಿಯೂ ಮರಣವಿಲ್ಲದ್ದಾಗಿಯೂ ಭಯರಹಿತವಾಗಿಯೂ [5] ಶ್ರೋತ್ರಾದಿಗಳಿಗೂ ಶ್ರೋತ್ರಾದಿಯಾಗಿದ್ದುಕೊಂಡು [6] ಅವುಗಳಲ್ಲಿರುವ ಸಾಮರ್ಥ್ಯಕ್ಕೂ ನಿಮಿತ್ತವಾಗಿಯೂ ಇರುವ ಯಾವದೋ ಒಂದು (ತತ್ತ್ವ)ವಿರುವದು" ಎಂದು ಹೇಳಿ ನಿವಾರಿಸಿರುತ್ತದೆ. ಆದ್ದರಿಂದ [7] ಇಲ್ಲಿ ಉತ್ತರವೂ ಶಬ್ದಾರ್ಥವೂ ಹೊಂದುಗೆಯಾಗಿಯೇ ಇರುತ್ತದೆ.

(ಭಾಷ್ಯ)

೧೮. ತಥಾ ಮನಸಃ ಅನ್ತಃಕರಣಸ್ಯ ಮನಃ । ನ ಹ್ಯನ್ತಃಕರಣಮ್ ಅನ್ತರೇಣ

---

1 ಸ್ಥೂಲಸೂಕ್ಷ್ಮದೇಹಗಳೆರಡನ್ನೂ. ಕ್ಷೇತ್ರಶಬ್ದದ ವಿವರಣೆಯನ್ನು ನೋಡಿದರೆ ಗೀತೆಯಲ್ಲಿ ಇಚ್ಛಾಜ್ಞಾನಾದಿಮನಶ್ಶಕ್ತಿಗಳೆಲ್ಲವೂ ಕ್ಷೇತ್ರವೇ ಎಂದು ಸ್ಪಷ್ಟವಾಗುತ್ತದೆ.

2 ತೋರತಕ್ಕದ್ದಾಗಿಯೂ ಎಂದರ್ಥ, ಅವರ ಜ್ಞಾನಕ್ಕೆ ವಿಷಯವೆಂದೇನೂ ಅರ್ಥವಲ್ಲ. ಬೃ ಭಾ ೧-೪-೧೦ ಈಗ ನಮಗೆ ಅಜ್ಞಾನದಿಂದಲೇ ಆತ್ಮಚೈತನ್ಯವಿಲ್ಲವೆಂಬ ಭ್ರಾಂತಿಯಾಗಿರುತ್ತದೆ ಎಂದು ಭಾವ. ಕ ಭಾ. ೨-೧-೧೧, ಗೀ. ಭಾ ೨-೨೧

3. ಬೃ. ೩-೪, ೩-೫.

4 ಯಾವ ಮಾರ್ಪಾಡೂ ಇಲ್ಲದೆ, ಇದ್ದಂತೆ ಇರುವದಾಗಿಯೂ.

5 ಬೃ. ೪-೪-೨೫ನ್ನು ಸೂಚಿಸುವ ವಿಶೇಷಣಗಳಿವು.

6. "ಶ್ರೋತ್ರಾದಿಸಾಮರ್ಥ್ಯನಿಮಿತ್ತಮ್" ಎಂದಿಷ್ಟೇ ಇರುವ (ಹಿ॥) ಪಾಠದಲಿ 'ಶ್ರೋತ್ರಾದಿಗಳಲ್ಲಿರುವ ಸಾಮರ್ಥ್ಯಕ್ಕೂ ನಿಮಿತ್ತವಾಗಿಯೂ' ಎಂದು ಕನ್ನಡಿಸಿದರೆ ಸಾಕಾಗುವದು.

7. 'ನಿಮಿತ್ತಮ್ ಇತಿ' ಎಂಬುದು 'ನಿಮಿತ್ತಮ್ ಇತೀತಿ' ಎಂದಿರಬೇಕೆಂದು ತೋರುತ್ತದೆ.

ಚೈತನ್ಯಜ್ಯೋತಿಷೋ ದೀಧಿತಿಂ ಸ್ವವಿಷಯಸಙ್ಕಲ್ಪಾಧ್ಯವಸಾಯಾದಿಸಮರ್ಥಂ ಸ್ಯಾತ್। ತಸ್ಮಾನ್ಮನಸೋಽಪಿ ಮನ ಇತಿ । ಇಹ ಬುದ್ಧಿಮನಸೀ ಏಕೀಕೃತ್ಯ ನಿರ್ದೇಶೋ 'ಮನಸಃ' ಇತಿ ॥

(ಭಾಷ್ಯಾರ್ಥ)

ಇದರಂತೆ ಮನಸ್ಸಿಗೆ ಎಂದರೆ ಅಂತಃಕರಣಕ್ಕೂ (ಅದು) ಮನಸ್ಸು ಏಕೆಂದರೆ ಚೈತನ್ಯಜ್ಯೋತಿಯ ಬೆಳಕಿದ್ದ ಹೊರತು [1] ಅಂತಃಕರಣವು ತನ್ನ ವಿಷಯವನ್ನು ಸಂಕಲ್ಪಿಸುವದು, ನಿಶ್ಚಯಿಸುವದು ಮುಂತಾದವುಗಳನ್ನು [2] (ನೆರವೇರಿಸಲು) ಸಮರ್ಥವಾಗಲಾರದು. ಆದ್ದರಿಂದ (ಅದು) ಮನಸ್ಸಿಗೂ ಮನಸ್ಸಾಗಿರುತ್ತದೆ. ಇಲ್ಲಿ ಬುದ್ಧಿಮನಸ್ಸುಗಳೆರಡನ್ನೂ [3] ಒಟ್ಟುಗೂಡಿಸಿ ಮನಸ್ಸೆಂದು ಕರೆದಿರುತ್ತದೆ.

(ಭಾಷ್ಯ)

೧೯. ಯದ್ವಾಚೋ ಹ ವಾಚಮ್ । ಯಚ್ಛಬ್ದೋ ಯಸ್ಮಾದರ್ಥೇ ಶ್ರೋತ್ರಾದಿಭಿಃ ಸರ್ವೈಃ ಸಮ್ಬಧ್ಯತೇ—"ಯಸ್ಮಾತ್ ಶ್ರೋತ್ರಸ್ಯ ಶ್ರೋತ್ರಮ್", "ಯಸ್ಮಾನ್ಮನಸೋ ಮನಃ" ಇತ್ಯೇವಮ್ । "ವಾಚೋ ಹ ವಾಚಮ್" ಇತಿ ದ್ವಿತೀಯಾ ಪ್ರಥಮಾತ್ವೇನ ವಿಪರಿಣಮ್ಯತೇ । "ಪ್ರಾಣಸ್ಯ ಪ್ರಾಣಃ" ಇತಿ ದರ್ಶನಾತ್ ।" "ವಾಚೋ ಹ ವಾಚಮ್" ಇತ್ಯೇತದನುರೋಧೇನ ಪ್ರಾಣಸ್ಯ ಪ್ರಾಣಮಿತಿ ಕಸ್ಮಾದ್ ದ್ವಿತೀಯೈವ ನ ಕ್ರಿಯತೇ? ನ । ಬಹೂನಾಮನುರೋಧಸ್ಯ ಯುಕ್ತತ್ವಾತ್ । 'ವಾಚಮ್' ಇತ್ಯಸ್ಯ 'ವಾಕ್' ಇತ್ಯೇತಾವದ್ವಕ್ತವ್ಯಮ್ "ಸ ಉ ಪ್ರಾಣಸ್ಯ ಪ್ರಾಣಃ" ಇತಿ ಶಬ್ದದ್ವಯಾನುರೋಧೇನ । ಏವಂ ಹಿ ಬಹೂನಾಮನುರೋಧೋ ಯುಕ್ತಃ ಕೃತಃ ಸ್ಯಾತ್। ಪೃಷ್ಟಂ ಚ ವಸ್ತು ಪ್ರಥಮಯೈವ ನಿರ್ದೇಷ್ಟುಂ ಯುಕ್ತಮ್॥

(ಭಾಷ್ಯಾರ್ಥ)

"ಯದ್ವಾಚೋ ಹ ವಾಚಮ್'' ಎಂಬಲ್ಲಿ 'ಯತ್' ಎಂಬ ಮಾತಿಗೆ

---

1 'ಅನ್ತರೇಣ ಚೈತನ್ಯಜ್ಯೋತಿಷಾ ದೀಪಿತಮ್'' ಎಂಬ (ಆ॥) ಪಾಠದಲ್ಲಿ ದೀಪಿತಮ್ ಎಂಬುದು ದೀಪ್ತಿಮ್ ಎಂದಾದರೂ ಇರಬೇಕು, ದೀಪಿತಮ್ ಎಂಬುದನ್ನು ಭಾವಾರ್ಥದಲ್ಲಿಯಾದರೂ ತೆಗೆದುಕೊಂಡು ಅರ್ಥಮಾಡಿಕೊಳ್ಳಬೇಕು ಈಗ ನಾವು ಅಂಗೀಕರಿಸಿರುವ (ವಾ॥ ಗೀ॥) ಪಾಠದಲ್ಲಿ ಕ್ಲೇಶವಿಲ್ಲ

2 ಅಂತಃಕರಣಕ್ಕೆ ಸಂಕಲ್ಪಿಸುವದು, ನಿಶ್ಚಯಿಸುವದು, ಸ್ಮರಿಸುವದು ಮುಂತಾದ ಅನೇಕ ಕೆಲಸಗಳಿವೆ.

3 ಅಂತಃಕರಣವನ್ನು ಮನಸ್ಸು, ಬುದ್ಧಿ-ಎಂದು ಎರಡು ವಿಭಾಗವಾಗಿ ವಿಂಗಡಿಸುವದು ರೂಢಿ; ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ-ಎಂದೂ ವಿಂಗಡಿಸುವದುಂಟು ಗೀ ಭಾ ೧೩-೫, ಸೂ ಭಾ. ೨-೪-೩೨ ಆದರೆ ಇಲ್ಲಿ ಮನಸ್ಸೆಂಬ ಮಾತನ್ನು ಅಂತಃಕರಣವೆಂಬರ್ಥದಲ್ಲಿಯೇ ಉಪಯೋಗಿಸಿರುತ್ತದೆ.

'ಹೀಗಿರುವದರಿಂದ' ಎಂದರ್ಥ. ಇದನ್ನು ಶ್ರೋತ್ರವೇ ಮುಂತಾದವುಗಳಿಗೆಲ್ಲ ಸೇರಿಸಿಕೊಂಡು 'ಶ್ರೋತ್ರಕ್ಕೆ ಶ್ರೋತ್ರವಾಗಿರುವದರಿಂದ', 'ಮನಸ್ಸಿಗೆ ಮನಸ್ಸಾಗಿರುವದರಿಂದ' ಎಂದೀ ಪರಿಯಲ್ಲಿ ಅರ್ಥವನ್ನು ಮಾಡಿಕೊಳ್ಳಬೇಕು. (ಇಲ್ಲಿ) 'ವಾಚೋ ಹ ವಾಚಮ್' ಎಂದಿದೆಯಷ್ಟೆ. (ಇಲ್ಲಿರುವ 'ವಾಚಮ್' ಎಂಬ) ದ್ವಿತೀಯಾವಿಭಕ್ತಿಯನ್ನು ('ವಾಕ್' ಎಂದು) ಪ್ರಥಮಾವಿಭಕ್ತಿಯಾಗಿ ತಿರುಗಿಸಿಕೊಳ್ಳಬೇಕು, ಏಕೆಂದರೆ ಮುಂದೆ 'ಪ್ರಾಣಸ್ಯ ಪ್ರಾಣಃ' (ಎಂದು ಪ್ರಥಮಾವಿಭಕ್ತಿಯೇ) ಕಂಡುಬರುತ್ತದೆ.

(ಆಕ್ಷೇಪ) :—'ವಾಚೋ ಹ ವಾಚಮ್' (ಎಂದಿರುವ) ಇದಕ್ಕೇ ಅನುಗುಣವಾಗಿ 'ಪ್ರಾಣಸ್ಯ ಪ್ರಾಣಮ್' ಎಂದು ದ್ವಿತೀಯಾವಿಭಕ್ತಿಯನ್ನೇ ಏಕೆ ಮಾಡಿಕೊಳ್ಳಬಾರದು ?

(ಪರಿಹಾರ) .—ಹಾಗಲ್ಲ. ಏಕೆಂದರೆ ಬಹಳ ಪ್ರಯೋಗವು[1] ಹೇಗಿದೆಯೋ ಅದನ್ನು ಅನುಸರಿಸುವದೇ ಯುಕ್ತವಾಗಿರುತ್ತದೆ. 'ಸ ಉ ಪ್ರಾಣಸ್ಯ ಪ್ರಾಣಃ' ಎಂಬ ಎರಡು ಶಬ್ದಗಳಿಗನುಗುಣವಾಗಿ 'ವಾಚೋ ಹ ವಾಕ್' ಎಂದಿಷ್ಟೇ[2] ಹೇಳಬೇಕಾಗುತ್ತದೆ, ಹೀಗೆ (ಮಾಡಿದರೆ) ಬಹಳ ಪ್ರಯೋಗಗಳಿಗೆ ಅನುಸಾರವಾಗಿ (ಅನ್ವಯ)ಮಾಡಿದ್ದು ಯುಕ್ತವೂ ಆಗುತ್ತದೆ. ಇದೂ ಅಲ್ಲದೆ ಏತರ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದೆಯೋ[3] ಅದನ್ನು ಪ್ರಥಮಾವಿಭಕ್ತಿಯಿಂದ ಹೇಳುವದೇ ಯುಕ್ತ.

(ಭಾಷ್ಯ)

೨೦. ಸ ಯಸ್ತ್ವಯಾ ಪೃಷ್ಟಃ, ಪ್ರಾಣಸ್ಯ ಪ್ರಾಣಾಖ್ಯವೃತ್ತಿವಿಶೇಷಸ್ಯ ಪ್ರಾಣಃ । ತತ್ಕೃತಂ ಹಿ ಪ್ರಾಣಸ್ಯ ಪ್ರಾಣನಸಾಮರ್ಥ್ಯಮ್ । ನ ಹ್ಯಾತ್ಮನಾ ಅನಧಿಷ್ಠಿತಸ್ಯ ಪ್ರಾಣನಮುಪಪದ್ಯತೇ । "ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನನ್ದೋ ನ ಸ್ಯಾತ್" (ತೈ. ೨-೭), "ಊರ್ಧ್ವಂ ಪ್ರಾಣಮುನ್ನಯತ್ಯ

1 'ವಾಚೋ ಹ ವಾಚಮ್' ಎಂಬಲ್ಲಿ ಮಟ್ಟಿಗೆ ದ್ವಿತೀಯೆ ಇದೆ, ಮಿಕ್ಕ ಪ್ರಯೋಗಗಳಲ್ಲೆಲ್ಲ ಪ್ರಥಮಾವಿಭಕ್ತಿಯೇ ಇದೆ.

2 ವಾಚಮ್ ಎಂಬ ಒಂದು ಮಾತನ್ನು ವಾಕ್ ಎಂದು ಪ್ರಥಮೆಗೆ ತಿರುಗಿಸುವದು ಹಗುರ, 'ಸ ಉ ಪ್ರಾಣಸ್ಯ ಪ್ರಾಣಃ' ಎಂಬುದನ್ನು ದ್ವಿತೀಯೆಗೆ ತಿರುಗಿಸಿದರೆ ತಮು ಪ್ರಾಣಸ್ಯ ಪ್ರಾಣಮ್' ಎಂದು ಎರಡು ಮಾತುಗಳನ್ನು ತಿರುಗಿಸುವದು ಹೆಚ್ಚು ಆಯಾಸ ಗೌರವದೋಷವನ್ನು ಬಿಟ್ಟು ಲಾಘವವನ್ನು ಅನುಸರಿಸುವದು ನ್ಯಾಯ

3 'ಅಂಥ ದೇವನು ಯಾವನು ?'' ಎಂಬ ಪ್ರಶ್ನೆಗೆ 'ಇವನು' ಎಂದು ಪ್ರಥಮೆಯಿಂದ ಉತ್ತರವು ಬರುವದೇ ಯುಕ್ತ.

ಪಾನಂ ಪ್ರತ್ಯಗಸ್ಯತಿ" (ಕ. ೨.೨-೩) ಇತ್ಯಾದಿಶ್ರುತಿಭ್ಯಃ । ಇಹಾಪಿ ಚ ವಕ್ಷ್ಯತೇ "ಯೇನ ಪ್ರಾಣಃ ಪ್ರಣೀಯತೇ । ತದೇವ ಬ್ರಹ್ಮ ತ್ವಂ ವಿದ್ಧಿ" (೧-೮) ಇತಿ ॥

(ಭಾಷ್ಯಾರ್ಥ)

ನೀನು ಕೇಳಿದೆಯಲ್ಲ, ಆ (ಆತ್ಮನು) ಪ್ರಾಣಕ್ಕೂ ಪ್ರಾಣನು, ಎಂದರೆ ಪ್ರಾಣವೆಂಬ ವೃತ್ತಿಗೂ (ಪ್ರಾಣನು). ಏಕೆಂದರೆ ಪ್ರಾಣಕ್ಕೆ ಇರುವ ಉಸಿರಾಡುವ ಶಕ್ತಿಯು ಆತನಿಂದಲೇ ಆಗಿರುತ್ತದೆ; ಆತ್ಮನ ಆಸರೆಯಿಲ್ಲದೆ (ಯಾರಿಗೂ) ಉಸಿರಾಡುವದು ಆಗಲಾರದು. "ಆಕಾಶದಲ್ಲಿ (ಬುದ್ಧಿಗುಹೆಯಲ್ಲಿ) ಈ ಆನಂದ(ರೂಪನಾದ ಆತ್ಮನು) ಇಲ್ಲದಿದ್ದರೆ[1] ಯಾವನುತಾನೆ ಉಸಿರು ತೆಗೆದುಕೊಂಡಾನು, ಯಾವನು ಉಸಿರು ಬಿಟ್ಟಾನು?" (ತೈ. ೨-೭), "ಪ್ರಾಣವನ್ನು ಮೇಲಕ್ಕೇರಿಸುವನು, ಅಪಾನವನ್ನು ಕೆಳಕ್ಕಿಳಿಸುವನು" (ಕ. ೨-೨-೩) ಎಂಬಿವೇ ಮುಂತಾದ ಶ್ರುತಿಗಳು (ಇದಕ್ಕೆ ಪ್ರಮಾಣವು). ಇಲ್ಲಿಯೂ "ಯಾವದರಿಂದ ಪ್ರಾಣವು ತನ್ನ ಪ್ರಾಣನಕಾರ್ಯವನ್ನು ಮಾಡುತ್ತಿರುವದೋ ಅದನ್ನೇ ಬ್ರಹ್ಮವೆಂದು ನೀನು ತಿಳಿ" (೧-೮) ಎಂದು ಮುಂದೆ ಹೇಳಿರುತ್ತದೆ.

(ಭಾಷ್ಯ)

೨೧ ಶ್ರೋತ್ರಾದೀನ್ದ್ರಿಯಪ್ರಸ್ತಾವೇ ಘ್ರಾಣಪ್ರಾಣಸ್ಯ ನನು ಯುಕ್ತಂ ಗ್ರಹಣಮ್? ಸತ್ಯಮೇವಮ್ । ಪ್ರಾಣಗ್ರಹಣೇನೈವ ತು ಘ್ರಾಣಪ್ರಾಣಸ್ಯ ಗ್ರಹಣಂ ಕೃತಮೇವ ಮನ್ಯತೇ ಶ್ರುತಿಃ । ಸರ್ವಸ್ಯೈವ ಕರಣಕಲಾಪಸ್ಯ ಯದರ್ಥಪ್ರಯುಕ್ತಾ ಪ್ರವೃತ್ತಿಃ, ತದ್ಬ್ರಹ್ಮೇತಿ ಪ್ರಕರಣಾರ್ಥೋ ವಿವಕ್ಷಿತಃ ॥

(ಭಾಷ್ಯಾರ್ಥ)

(ಆಕ್ಷೇಪ):—ಶ್ರೋತ್ರವೇ ಮುಂತಾದ ಇಂದ್ರಿಯಗಳನ್ನು (ವಿಚಾರಮಾಡುವ) ಸಂದರ್ಭದಲ್ಲಿ ಘ್ರಾಣರೂಪವಾದ ಪ್ರಾಣವನ್ನು[2] ತೆಗೆದುಕೊಳ್ಳುವದು ಯುಕ್ತವಲ್ಲವೆ?

(ಪರಿಹಾರ).—ನಿಜ, ಹಾಗೆಯೇ ಸರಿ. ಆದರೆ ಪ್ರಾಣವನ್ನು ಹೇಳಿದ್ದರಿಂದಲೇ ಘ್ರಾಣರೂಪವಾದ ಪ್ರಾಣವನ್ನು[3] ತೆಗೆದುಕೊಂಡು (ಹೇಳಿದಂತೆ ಆಯಿತು)

1. ಈ ಶ್ರುತಿಗೆ ಸೂ. ಭಾ. (೧-೧-೨೨) ದಲ್ಲಿ ಈ ಆಕಾಶರೂಪನಾದ ಆತ್ಮನೆಂಬ ಆನಂದವು ಎಂದು ಅರ್ಥ ಬರುವಂತೆ ಉದಾಹರಿಸಿದೆ.

2. ಪ್ರಾಣ ಎಂಬ ಮಾತಿಗೆ ಪ್ರಾಣವಾಯು, ಘ್ರಾಣೇಂದ್ರಿಯ—ಎಂಬ ಎರಡರ್ಥಗಳು ವೇದದಲ್ಲಿ ಕಂಡುಬರುವವು. ಇಂದ್ರಿಯಗಳನ್ನು ಪ್ರಸ್ತಾಪಿಸಿರುವದರಿಂದ ಘ್ರಾಣೇಂದ್ರಿಯವನ್ನೇ ಏಕೆ ತೆಗೆದುಕೊಳ್ಳಬಾರದು?—ಎಂಬುದು ಆಕ್ಷೇಪಕನ ಭಾವ.

3. "ಘ್ರಾಣಪ್ರಾಣಸ್ಯ" ಎಂಬ (ಅ॥) ಪಾಠವನ್ನಿಟ್ಟುಕೊಂಡೇ ಕನ್ನಡಿಸಿರುತ್ತದೆ. "ಘ್ರಾಣಸ್ಯೇವ ಪ್ರಾಣಸ್ಯ ನ ತು ಯುಕ್ತಂ ಗ್ರಹಣಮ್" (ವಾ॥) "ಘ್ರಾಣಸ್ಯೈವ ಗ್ರಹಣಂ

ಎಂದು ಶ್ರುತಿಯ ಅಭಿಪ್ರಾಯವಿರುತ್ತದೆ. ಇಡಿಯ ಕರಣಸಮೂಹದ ಪ್ರವೃತ್ತಿಯು ಯಾವದೊಂದಕ್ಕಾಗಿ[1] ಆಗುತ್ತಿರುವದೋ ಅದೇ ಬ್ರಹ್ಮವು–ಎಂಬುದೇ (ಈ) ಪ್ರಕರಣದಲ್ಲಿ ಹೇಳಬೇಕೆಂದಿರುವ ವಿಷಯವು.

(ಭಾಷ್ಯ)

೨೨. ತಥಾ ಚಕ್ಷುಷಶ್ಚಕ್ಷುಃ ರೂಪಪ್ರಕಾಶಕಸ್ಯ ಚಕ್ಷುಷೋ ಯದ್ರೂಪಗ್ರಹಣ ಸಾಮರ್ಥ್ಯಮ್, ತದಾತ್ಮಚೈತನ್ಯಾಧಿಷ್ಠಿತಸ್ಯೈವ । ಅತಶ್ಚಕ್ಷುಷಶ್ಚಕ್ಷುಃ ॥

(ಭಾಷ್ಯಾರ್ಥ)

ಇದರಂತೆ 'ಚಕ್ಷುವಿಗೂ ಚಕ್ಷುವು' ರೂಪವನ್ನು ಬೆಳಗುವ ಚಕ್ಷುರಿಂದ್ರಿಯಕ್ಕೆ ರೂಪವನ್ನು ಹಿಡಿಯುವ ಸಾಮರ್ಥ್ಯವಿದೆಯಷ್ಟೆ, ಅದು ಆತ್ಮಚೈತನ್ಯವನ್ನು ಆಶ್ರಯಿಸಿಕೊಂಡಿರುವದರಿಂದಲೇ ಅದಕ್ಕೆ (ಉಂಟಾಗಿರುತ್ತದೆ); ಆದ್ದರಿಂದ (ಆತ್ಮನು) ಚಕ್ಷುವಿಗೂ ಚಕ್ಷುವು.

## ಏಷಣಾತ್ಯಾಗದಿಂದ ಸಾವನ್ನು ಗೆಲ್ಲಬಹುದು.

(ಭಾಷ್ಯ)

೨೩. ಪ್ರಷ್ಟುಃ ಪೃಷ್ಟಸ್ಯಾರ್ಥಸ್ಯ ಜ್ಞಾತುಮಿಷ್ಟತ್ವಾತ್ ಶ್ರೋತ್ರಾದೇಃ ಶ್ರೋತ್ರಾದಿಲಕ್ಷಣಂ ಯಥೋಕ್ತಂ ಬ್ರಹ್ಮ 'ಜ್ಞಾತ್ವಾ' ಇತ್ಯಧ್ಯಾಹ್ರಿಯತೇ । "ಅಮೃತಾ ಭವನ್ತಿ" ಇತಿ ಫಲಶ್ರುತೇಶ್ಚ । ಜ್ಞಾನಾದ್ಧಿ ಅಮೃತತ್ವಂ ಪ್ರಾಪ್ಯತೇ । 'ಜ್ಞಾತ್ವಾ ಅತಿಮುಚ್ಯ' ಇತಿ ಸಾಮರ್ಥ್ಯಾತ್ ಶ್ರೋತ್ರಾದಿಕರಣಕಲಾಪಮ್ ಉಜ್ಝಿತ್ವಾ । ಶ್ರೋತ್ರಾದೌ ಹ್ಯಾತ್ಮಭಾವಂ ಕೃತ್ವಾ ತದುಪಾಧಿಃ ಸನ್ ತದಾತ್ಮನಾ ಜಾಯತೇ ಮ್ರಿಯತೇ, ಸಂಸರತಿ । ಅತಃ ಶ್ರೋತ್ರಾದೇಃ ಶ್ರೋತ್ರಾದಿಲಕ್ಷಣಂ ಬ್ರಹ್ಮಾತ್ಮೇತಿ ವಿದಿತ್ವಾ ಅತಿಮುಚ್ಯ ಶ್ರೋತ್ರಾದ್ಯಾತ್ಮಭಾವಂ ಪರಿತ್ಯಜ್ಯ । ಯೇ ಶ್ರೋತ್ರಾದ್ಯಾತ್ಮಭಾವಂ ಪರಿತ್ಯಜನ್ತಿ ತೇ ಧೀರಾಃ ಧೀಮನ್ತಃ । ನ ಹಿ ವಿಶಿಷ್ಟ ಧೀಮತ್ತ್ವಮನ್ತರೇಣ ಶ್ರೋತ್ರಾದ್ಯಾತ್ಮಭಾವಃ ಶಕ್ಯಃ ಪರಿತ್ಯಕ್ತುಮ್ । ಪ್ರೇತ್ಯ

---

ಯುಕ್ತಂ ನ ತು ಪ್ರಾಣಸ್ಯ" (೧೯॥) ಎಂಬ ಪಾರಗಳಲ್ಲಿ ಪ್ರಾಣವನ್ನು ಇಲ್ಲಿ ಹೇಳಿರುವದು ಯುಕ್ತವಲ್ಲವೆಂಬ ಆಕ್ಷೇಪವು ಬರುತ್ತದೆ. ಆದರೆ ಇಲ್ಲಿ ಘ್ರಾಣವೇಕೆ ಬರಲಿಲ್ಲ?'–ಎಂಬ ಆಕ್ಷೇಪವೇ ಹೆಚ್ಚು ಹೊಂದುತ್ತದೆ.

1. ಕರಣಗಳು ಪರಾರ್ಥ, ಆತ್ಮನು ಸ್ವಾರ್ಥ, ಐ. ಭಾ. ೧-೩, ಕ. ಭಾ. ೨ ೨-೧. ಕರಣವ್ಯಾಪಾರವೆಲ್ಲ ಪ್ರಾಣದಿಂದಲೇ ಆಗುತ್ತಿರುವದರಿಂದ 'ಪ್ರಾಣ' ಎಂಬ ಮಾತು ಘ್ರಾಣವನ್ನೇ ಅಲ್ಲದೆ ಎಲ್ಲಾ ಕರಣವ್ಯಾಪಾರವೂ ಚೈತನ್ಯದ ಆಸರೆಯಿಂದ ನಡೆಯುತ್ತದೆ ಎಂಬುದನ್ನೂ ತಿಳಿಸುತ್ತದೆ ಎಂದು ಭಾವ.

ವ್ಯಾವೃತ್ಯ, ಅಸ್ಮಾತ್ ಲೋಕಾತ್ ಪುತ್ರಮಿತ್ರಕಲತ್ರಬನ್ಧುಷು ಮಮಾಹಂಭಾವ ಸಂವ್ಯವಹಾರಲಕ್ಷಣಾತ್ ತ್ಯಕ್ತಸರ್ವೈಷಣಾ ಭೂತ್ವೇತ್ಯರ್ಥಃ । ಅಮೃತಾಃ ಅಮರಣ ಧರ್ಮಾಣೋ ಭವನ್ತಿ । "ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ" (ತೈ. ನಾ ೨೮), "ಪರಾಞ್ಚಿ ಖಾನಿ ವ್ಯತೃಣತ್.. ಆವೃತ್ತ ಚಕ್ಷುರಮೃತತ್ವಮಿಚ್ಛನ್" (ಕ. ೨-೧-೧), "ಯದಾ ಸರ್ವೇ ಪ್ರಮುಚ್ಯನ್ತೇ........ ಅತ್ರ ಬ್ರಹ್ಮ ಸಮಶ್ನುತೇ" (ಕ ೨-೩-೧೪)–ಇತ್ಯಾದಿಶ್ರುತಿಭ್ಯಃ । ಅಥವಾ 'ಅತಿ ಮುಚ್ಯ' ಇತ್ಯನೇನೈವ ಏಷಣಾತ್ಯಾಗಸ್ಯ ಸಿದ್ಧತ್ವಾತ್ ಅಸ್ಮಾಲ್ಲೋಕಾತ್ ಪ್ರೇತ್ಯ ಅಸ್ಮಾತ್ ಶರೀರಾತ್ ಅಪೇಕ್ಷ್ಯತ್ಯ [1] ಮೃತ್ವೇತ್ಯರ್ಥಃ ॥

(ಭಾಷ್ಯಾರ್ಥ)

ಕೇಳುವಾತನಿಗೆ ಕೇಳಿದ ವಿಷಯವನ್ನು ಅರಿತುಕೊಳ್ಳಬೇಕೆಂಬ [2] ಇಚ್ಛೆ ಇರುವ ದಾದ್ದರಿಂದ 'ಶ್ರೋತ್ರಾದಿಗಳಿಗೂ ಶ್ರೋತ್ರಾದಿರೂಪವಾಗಿರುವ ಮೇಲೆ ಹೇಳಿದ ಬ್ರಹ್ಮವನ್ನು ಅರಿತುಕೊಂಡು'–ಎಂದು ಅಧ್ಯಾಹಾರಮಾಡಿಕೊಳ್ಳಬೇಕು. [3] "ಅಮೃತರಾಗುವರು" ಎಂದು ಫಲವನ್ನು ಹೇಳಿರುವ ಶ್ರುತಿಯಿಂದಲೂ (ಹೀಗೆ ಅಧ್ಯಾಹಾರಮಾಡಿಕೊಳ್ಳಬೇಕು.) ಜ್ಞಾನದಿಂದಲೇ ಅಲ್ಲವೆ, ಅಮೃತವನ್ನು ಹೊಂದ ಲಾಗುವದು? [4] (ಅದನ್ನು ಅರಿತುಕೊಂಡು 'ಬಿಟ್ಟು'..... ಎಂದರೆ ಶ್ರೋತ್ರಾದಿ ಕರಣಸಮೂಹವನ್ನು ಬಿಟ್ಟು ಎಂದು (ಶಬ್ದ)ಸಾಮರ್ಥ್ಯದಿಂದ [5] (ಅರ್ಥಮಾಡ ಬೇಕು). ಏಕೆಂದರೆ ಶ್ರೋತ್ರಾದಿಗಳಲ್ಲಿ (ಅವು) ತಾನೆಂಬ ಭಾವನೆಯನ್ನು ಮಾಡಿ

---

1. ವಾ॥ ಪಾಠ.

2. ಯಾವ ವಿಷಯವನ್ನು ಕೇಳುತ್ತೇವೆಯೋ ಅದರ ಅರಿವು ನಮಗೆ ಬೇಕಾಗಿರುತ್ತದೆ. ಆ ದೇವನು ಯಾರು?- ಎಂದು ಕೇಳಿರುವದರಿಂದ ಅಂಥ ಆತ್ಮನ ಜ್ಞಾನವು ಶಿಷ್ಯನಿಗೆ ಬೇಕಾ ದದ್ದೆಂದಾಯಿತು. ಆದ್ದರಿಂದ 'ಜ್ಞಾತ್ವಾ-ಅರಿತುಕೊಂಡು' ಎಂಬ ಮಾತನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

3. ಸುಮ್ಮನೆ 'ಬ್ರಹ್ಮವು ಇಂಥದ್ದು ಎಂದು ಹೇಳಿ ಅಮೃತರಾಗುವರು' ಎಂದಿಷ್ಟೇ ಹೇಳಿದರೆ ಈ ಎರಡು ವಾಕ್ಯಗಳಿಗೂ ಸಂಬಂಧವಿಲ್ಲದೆ ಹೋಗುವದು. ಆದ್ದ ರಿಂದ 'ಈ ಬ್ರಹ್ಮವನ್ನು ಅರಿತುಕೊಂಡರೆ' ಮುಕ್ತರಾಗುತ್ತಾರೆ ಎಂದು ಅನ್ವಯಮಾಡಿಕೊಳ್ಳ ಬೇಕು ಎಂದು ಭಾವ.

4. ಜ್ಞಾನದಿಂದಲೇ ಮುಕ್ತಿ ಎಂದು ಶ್ರುತಿಸಿದ್ಧವಾಗಿರುತ್ತದೆ; ಆದ್ದರಿಂದಲೂ ಹೀಗೆ ಅಧ್ಯಾಹಾರಮಾಡಿಕೊಳ್ಳುವದು ಯುಕ್ತ.

5. ಏನನ್ನು ಬಿಟ್ಟು? ಎಂಬ ಆಕಾಂಕ್ಷೆ ಉಂಟಾಗುವದರಿಂದ ಪ್ರಕೃತವಾಗಿರುವ ಶ್ರೋತ್ರಾದಿಗಳನ್ನು ಎಂದು ಕಲ್ಪಿಸಬೇಕಾಗುತ್ತದೆ.

ಕೊಂಡಿರುವದರಿಂದಲೇ ಆ ಉಪಾಧಿಗಳುಳ್ಳವನಾಗಿ ಅವುಗಳೇ ತಾನಾಗುವದರಿಂದ ಹುಟ್ಟುತ್ತಲೂ ಸಾಯುತ್ತಲೂ ಸಂಸಾರದಲ್ಲಿ ತೊಳಲುತ್ತಲೂ[1] ಇರುತ್ತಾನೆ. ಆದ್ದರಿಂದ ಶ್ರೋತ್ರಾದಿಗಳಿಗೂ ಶ್ರೋತ್ರಾದಿರೂಪವಾಗಿರುವ ಬ್ರಹ್ಮವೇ ಆತ್ಮನೆಂದು ಅರಿತುಕೊಂಡು 'ಅತಿಮುಚ್ಯ' ಎಂದರೆ ಶ್ರೋತ್ರಾದಿಗಳೇ ತಾನೆಂಬ ಭಾವನೆಯನ್ನು ಬಿಟ್ಟುಬಿಟ್ಟು (ಎಂದರ್ಥ). ಯಾರು ಶ್ರೋತ್ರಾದಿಗಳೇ ತಾವೆಂಬ ಭಾವನೆಯನ್ನು ಬಿಡುವರೋ ಅವರು ಧೀರರು, ಬುದ್ಧಿವಂತರು. ಏಕೆಂದರೆ ಅಸಾಧಾರಣವಾದ[2] (ಬ್ರಹ್ಮವಿಷಯಕವಾದ) ಬುದ್ಧಿಯಿಲ್ಲದೆ ಶ್ರೋತ್ರಾದಿಗಳೇ ನಾವೆಂಬ ಬುದ್ಧಿಯನ್ನು ಬಿಟ್ಟುಬಿಡುವದು ಆಗಲೇ ಆರದು (ಅಂಥ) ಬುದ್ಧಿವಂತರು ಈ ಲೋಕದಿಂದ ಹೊರಟುಹೋಗಿ, ಎಂದರೆ ಮಕ್ಕಳು, ಸ್ನೇಹಿತರು, ಹೆಂಡತಿ, ನೆಂಟರು–ಇವರಲ್ಲಿ ನಾನುನನ್ನದೆಂಬ ಭಾವನೆಯು ವ್ಯವಹಾರರೂಪವಾಗಿರುವ (ಈ ಲೋಕದಿಂದ) ಹಿಂತಿರುಗಿ, ಎಲ್ಲ ಏಷಣೆಗಳನ್ನೂ ಬಿಟ್ಟು ಎಂದರ್ಥ.[3] ಅಮೃತರಾಗುವರು ಎಂದರೆ ಸಾವೆಂಬ ಧರ್ಮವಿಲ್ಲದವರಾಗುವರು. "ಕರ್ಮದಿಂದಲ್ಲ, ಪ್ರಜೆಯಿಂದಲ್ಲ, ಧನದಿಂದಲ್ಲ, ತ್ಯಾಗದಿಂದಲೇ ಕೆಲವರು ಅಮೃತತ್ವವನ್ನು ಪಡೆದಿರುತ್ತಾರೆ" (ತೈ. ನಾ. ೨೮) "ಪರಮೇಶ್ವರನು ಇಂದ್ರಿಯಗಳನ್ನು ಹೊರಗಡೆಗೆ ಕೊರೆದಿರುತ್ತಾನೆ,.. .. (ಯಾವನೋ ಒಬ್ಬ ಧೀರನು) ಇಂದ್ರಿಯಗಳನ್ನು ಹಿಂತಿರುಗಿಸಿ ಅಮೃತತ್ವದ ಬಯಕೆಯಿಂದ (ಪ್ರತ್ಯಗಾತ್ಮನನ್ನು ಕಾಣುತ್ತಾನೆ)" (ಕ ೨-೧-೧), ಯಾವಾಗ (ಕಾಮ)ಗಳೆಲ್ಲವೂ ಬಿಡುಗಡೆಯಾಗುವವೋ ......(ಆಗ) ಇಲ್ಲಿಯೇ[4] ಬ್ರಹ್ಮವನ್ನು ಪಡೆಯುವನು" (ಕ. ೨-೩-೧೪)—ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. ಅಥವಾ

---

1. ಆತ್ಮನಿಗೆ ಸ್ವತಃ ಸಂಸಾರವಿಲ್ಲ, ಶ್ರೋತ್ರಾದಿಗಳೆಂಬ ಉಪಾಧಿಗಳ ಸಂಬಂಧದಿಂದಲೇ ಸಂಸಾರವಾಗಿರುತ್ತದೆ.

2. ಶ್ರೋತ್ರಾದಿಗಳಿಗೂ ಶ್ರೋತೃವಾದ ಬ್ರಹ್ಮವೇ ತಾವೆಂಬ ಬುದ್ಧಿ ಸರ್ವಸಾಧಾರಣವಾಗಿಲ್ಲ.

3. ಪ್ರೇತ್ಯ ಎಂಬ ಮಾತಿಗೆ ಸತ್ತು ಎಂದು ಸಾಮಾನ್ಯವಾಗಿ ಅರ್ಥವಾಗುವದು; ಆದರೆ ಜ್ಞಾನಿಗಳ ವಿಷಯದಲ್ಲಿ ಫಲವು ಬದುಕಿರುವಾಗಲೇ ಆಗಿರುವದರಿಂದ ಏಷಣೆಗಳನ್ನು ಬಿಟ್ಟು ಎಂದರ್ಥ. ತೈ. ಭಾ. ೨-೮ ನೋಡಿ. ಮಕ್ಕಳು, ಕರ್ಮ, ಉಪಾಸನೆ ಎಂಬಿವುಗಳ ಬಯಕೆಯಿಂದಲೇ ಸಂಸಾರಲೋಕವು ತೋರಿಕೊಳ್ಳುವದರಿಂದ ಏಷಣೆಯನ್ನು ಬಿಡುವದೆಂದರೂ ಲೋಕವನ್ನು ಬಿಡುವದೆಂದರೂ ಒಂದೇ. ಬೃ ೧-೬-೧೬.

4. ಇದೇ ಆಚಾರ್ಯರಿಗೆ ಸಮ್ಮತವಾದ ಮುಖ್ಯಮುಕ್ತಿ. ಸೂ. ಭಾ. ೧-೧-೪. ಕ. ಭಾ. ೨-೨-೧, ಬೃ. ಭಾ. ೪-೪-೬, ಮುಂ. ಭಾ. ೩-೨-೬, ೩-೨-೯ ನೋಡಿರಿ.

ಅತಿಮುಚ್ಯ (ಬಿಟ್ಟು) ಎಂಬ ಮಾತಿನಿಂದಲೇ ಏಷಣಾತ್ಯಾಗವು ಸಿದ್ಧವಾಗಿರುವದರಿಂದ[1] ಈ ಲೋಕದಿಂದ ಹೊರಟುಹೋಗಿ ("ಪ್ರೇತ್ಯ") ಎಂದರೆ ಈ ಶರೀರವನ್ನು ಬಿಟ್ಟುಹೋಗಿ ಎಂದರೆ ಸತ್ತು[2] ಎಂದರ್ಥವು. ॥ ೨ ॥

## ಬ್ರಹ್ಮವು ಇಂದ್ರಿಯಗಳಿಗೂ ಮನಸ್ಸಿಗೂ ಅಗೋಚರ

(ಭಾಷ್ಯ)

ಯಸ್ಮಾತ್ ಶ್ರೋತ್ರಾದೇರಪಿ ಶ್ರೋತ್ರಾದ್ಯಾತ್ಮಭೂತಂ ಬ್ರಹ್ಮ ಅತಃ—

(ಭಾಷ್ಯಾರ್ಥ)

(ಹೀಗೆ) ಬ್ರಹ್ಮವು ಶ್ರೋತ್ರಾದಿಗಳಿಗೂ ಶ್ರೋತ್ರವೇ ಮುಂತಾದದ್ದಾಗಿರುವ ಸ್ವರೂಪವಾಗಿರುತ್ತದೆಯಾದ್ದರಿಂದ—

**ನ ತತ್ರ ಚಕ್ಷುರ್ಗಚ್ಛತಿ**
**ನ ವಾಗ್ಗಚ್ಛತಿ ನೋ ಮನಃ ।**
**ನ ವಿದ್ಮೋ ನ ವಿಜಾನೀಮೋ**
**ಯಥೈತದನುಶಿಷ್ಯಾತ್ ॥ ೩ ॥**

೩. ಅಲ್ಲಿಗೆ ಚಕ್ಷುಸ್ಸು ಹೋಗುವದಿಲ್ಲ, ವಾಕ್ಕು ಹೋಗುವದಿಲ್ಲ, ಮನಸ್ಸು (ಹೋಗುವ)ದಿಲ್ಲ. (ಇದನ್ನು) ನಾವರಿಯೆವು, ಇದನ್ನು ಹೇಗೆ ತಿಳಿಯಪಡಿಸಬೇಕೋ ತಿಳಿಯೆವು.

೨೪. ನ ತತ್ರ ತಸ್ಮಿನ್ ಬ್ರಹ್ಮಣಿ ಚಕ್ಷುಃ ಗಚ್ಛತಿ । ಸ್ವಾತ್ಮನಿ ಗಮನಾಸಮ್ಭವಾತ್ । ತಥಾ ನ ವಾಕ್ ಗಚ್ಛತಿ । ವಾಚಾ ಹಿ ಶಬ್ದ ಉಚ್ಚಾರ್ಯಮಾಣಃ, ಅಭಿಧೇಯಂ ಪ್ರಕಾಶಯತಿ ಯದಾ, ತದಾ ಅಭಿಧೇಯಂ ಪ್ರತಿ ವಾಕ್ ಗಚ್ಛತಿ ಇತ್ಯುಚ್ಯತೇ । ತಸ್ಯ ಚ ಶಬ್ದಸ್ಯ ತನ್ನಿರ್ವರ್ತಕಸ್ಯ ಚ ಕರಣಸ್ಯ ಆತ್ಮಾ ಬ್ರಹ್ಮ । ಅತೋ ನ ವಾಗ್ಗಚ್ಛತಿ । ಯಥಾ ಅಗ್ನಿರ್ದಾಹಕಃ ಪ್ರಕಾಶಕಶ್ಚಾಪಿ ಸನ್ ನ ಹ್ಯಾತ್ಮಾನಂ ಪ್ರಕಾಶಯತಿ ದಹತಿ ವಾ, ತದ್ವತ್ । ನೋ ಮನಃ । ಮನಶ್ಚ ಅನ್ಯಸ್ಯ ಸಙ್ಕಲ್ಪಯಿತೃ

---

1. ಈ ಪಕ್ಷದಲ್ಲಿ ಅತಿಮುಚ್ಯ ಎಂದರೆ ಶ್ರೋತ್ರಾದಿಗಳ ಆತ್ಮನೇ ತಾನೆಂದು ತಿಳಿದುಕೊಂಡದ್ದರ ಫಲವಾಗಿ ಹೊರಗಿನ ವಿಷಯಗಳಲ್ಲಿ ನಾನು ನನ್ನದೆಂಬುದನ್ನು ಬಿಟ್ಟು ಎಂದರ್ಥ.

2. ಇದು 'ವಿದೇಹಮುಕ್ತಿ'ಯು. ಇದೇ ಮುಖ್ಯಮುಕ್ತಿಯೆಂದು ಕೆಲವರು ಹೇಳುವರು; ಆದರೆ ಈ ಅಭಿಪ್ರಾಯಕ್ಕೆ ಭಾಷ್ಯದ ಬೆಂಬಲವಿಲ್ಲ. ಸತ್ತಮೇಲೆ ಅಜ್ಞರು ಮತ್ತೆ ಶರೀರವನ್ನು ಧರಿಸುವಂತೆ ಜ್ಞಾನಿಯು ಮತ್ತೆ ಧರಿಸುವದಿಲ್ಲವೆಂಬ ಅಭಿಪ್ರಾಯದಿಂದ ಇದನ್ನು ಮುಕ್ತಿಯೆಂದು ಉಪಚಾರಕ್ಕೆ ಕರೆದಿರುತ್ತದೆ ಎಂದು ಬೃ. ಭಾ. ೪-೪-೬ದಲ್ಲಿ ಬರೆದಿರುವದನ್ನು ನೋಡಿರಿ.

ಅಧ್ಯವಸಾತ್ಯ ಚ ಸತ್ ನಾತ್ಮಾನಂ[1] ಸಙ್ಕಲ್ಪಯತಿ ಅಧ್ಯವ್ಯಸತಿ ಚ । ತಸ್ಯಾಪಿ ಬ್ರಹ್ಮ ಆತ್ಮೇತಿ ॥

(ಭಾಷ್ಯಾರ್ಥ)

ಅಲ್ಲಿಗೆ ಅಂದರೆ ಆ ಬ್ರಹ್ಮವಿದ್ದಲ್ಲಿಗೆ ಚಕ್ಷುಸ್ಸು ಹೋಗುವದಿಲ್ಲ ; ಏಕೆಂದರೆ ತನ್ನ ಆತ್ಮನ ಬಳಿಗೆ ಹೋಗುವದಕ್ಕೆ ಅದರಿಂದ ಆಗಲಾರದು ಇದರಂತೆ ವಾಕ್ಕು ಹೋಗುವದಿಲ್ಲ. ವಾಗಿಂದ್ರಿಯದಿಂದ ಉಚ್ಚರಿಸಿದ ಶಬ್ದವು ಹೇಳಬೇಕಾದ (ವಿಷಯ)ವನ್ನು ಯಾವಾಗ ಬೆಳಗುವದೋ ಆಗ ಆ ಹೇಳಬೇಕಾದ (ವಿಷಯ)ದ ಕಡೆಗೆ ವಾಕ್ಕು[2] ಹೋಗುತ್ತದೆ ಎನ್ನುವರು. ಆ ಶಬ್ದಕ್ಕೂ ಅದನ್ನು ಉಂಟುಮಾಡುವ ಕರಣಕ್ಕೂ[2] ಬ್ರಹ್ಮವು ಆತ್ಮನಾಗಿರುವದು. ಆದ್ದರಿಂದ (ಅದರ ಬಳಿಗೆ) ವಾಕ್ಕು ಹೋಗಲಾರದು. ಹೇಗೆ ಬೆಂಕಿಯು ಸುಡತಕ್ಕದ್ದೂ ಬೆಳಗತಕ್ಕದ್ದೂ ಆಗಿದ್ದರೂ ತನ್ನನ್ನು ತಾನೇ ಸುಡಲಾರದೋ ಬೆಳಗಲೂ ಆರದೋ, ಅದರಂತೆಯೇ[3] (ಇದನ್ನು ಅರಿಯಬೇಕು) ಮನಸ್ಸು[4] ಹೋಗುವದಿಲ್ಲ ಮನಸ್ಸೆಂಬುದೂ (ತನಗಿಂತ) ಬೇರೆಯಾಗಿರುವ (ವಸ್ತು)ವನ್ನು ಸಂಕಲ್ಪಿಸತಕ್ಕದ್ದೂ ನಿಶ್ಚಯಿಸತಕ್ಕದ್ದೂ ಆಗಿದ್ದರೂ ಆತ್ಮನನ್ನು[5] ಸಂಕಲ್ಪಿಸಲಾರದು, ನಿಶ್ಚಯಿಸಲೂ ಆರದು. ಏಕೆಂದರೆ ಬ್ರಹ್ಮವು ಅದಕ್ಕೂ ಆತ್ಮನಾಗಿರುತ್ತದೆ

(ಭಾಷ್ಯ)

೨೫. ಇನ್ದ್ರಿಯಮನೋಭ್ಯಾಂ ಹಿ ವಸ್ತುನೋ ವಿಜ್ಞಾನಮ್ । ತದಗೋಚರತ್ವಾತ್ ನ ವಿದ್ಮಃ ತದ್ಬ್ರಹ್ಮ ಈದೃಶಮ್ ಇತಿ । ಅತೋ ನ ವಿಜಾನೀಮಃ ಯಥಾ ಯೇನ ಪ್ರಕಾರೇಣ ಏತತ್ ಬ್ರಹ್ಮ ಅನುಶಿಷ್ಯಾತ್ ಉಪದಿಶೇತ್ ಶಿಷ್ಯಾಯೇತ್ಯಭಿಪ್ರಾಯಃ । ಯದ್ಧಿ ಕರಣಗೋಚರಮ್ ತತ್ ಅನ್ಯಸ್ಮೈ ಉಪದೇಷ್ಟುಂ ಶಕ್ಯಂ ಜಾತಿಗುಣಕ್ರಿಯಾವಿಶೇಷಣೈಃ । ನ ತತ್ ಜಾತ್ಯಾದಿವಿಶೇಷಣವದ್ ಬ್ರಹ್ಮ । ತಸ್ಮಾತ್

---

1. ಇದು (ವಾ॥) ಪಾಠ ; (ಆ॥) ಪಾಠದಲ್ಲಿ ನ ಬಿಟ್ಟುಹೋಗಿದೆ.

2. ವಾಕ್ಕು ಎಂದರೆ ವಾಗಿಂದ್ರಿಯ, ಅದರ ವಿಷಯವಾದ ಶಬ್ದ—ಈ ಎರಡನ್ನೂ ಗ್ರಹಿಸಬೇಕೆಂದು ಭಾವ. ಮುಂದಿನ ಮಂತ್ರದ ಭಾಷ್ಯವನ್ನು ನೋಡಿರಿ.

3. ವಾಗಾದಿಗಳು ಆತ್ಮನಿಗಿಂತ ಬೇರೆಯಾಗಿ ಇಲ್ಲವೇ ಇಲ್ಲದ್ದರಿಂದ ಆತ್ಮನೇ ಅವುಗಳ ನಿಜವಾದ ಸ್ವರೂಪವು. ತನ್ನ ಸ್ವರೂಪವನ್ನು ತಾನು ವಿಷಯೀಕರಿಸುವದೆಂಬುದು ಆಗಲಾರದು.

4. ಅಂತಃಕರಣವು.

5. "ತನ್ನನ್ನು (ತಾನು) ಸಂಕಲ್ಪಿಸಲಾರದು, ನಿಶ್ಚಯಿಸಲೂ ಆರದು ; ಬ್ರಹ್ಮವು ಅದಕ್ಕೂ ಆತ್ಮನೇ ಆಗಿರುವದರಿಂದ (ಮನಸ್ಸು ಅದರ ಕಡೆಗೆ ಹೋಗಲಾರದು)" ಎಂದೂ ಕನ್ನಡಿಸಬಹುದು.

ವಿಷಮಂ ಶಿಷ್ಯಾನ್ ಉಪದೇಶೇನ ಪ್ರತ್ಯಾಯಯಿತುಮ್ ಇತಿ ಉಪದೇಶೇ ತದರ್ಥ ಗ್ರಹಣೇ ಚ ಯತ್ನಾತಿಶಯಕರ್ತವ್ಯತಾಂ ದರ್ಶಯತಿ ||

(ಭಾಷ್ಯಾರ್ಥ)

ಇಂದ್ರಿಯ, ಮನಸ್ಸು- ಇವೆರಡರಿಂದಲೇ ಅಲ್ಲವೆ, ವಸ್ತುವಿನ ಅರಿವು ಆಗ ತಕ್ಕದ್ದು ? ಇವೆರಡಕ್ಕೂ ಗೋಚರವಾಗದೆ ಇರುವದರಿಂದ ಈ ಬ್ರಹ್ಮವು ಹೇಗಿರುವ ದೆಂಬುದನ್ನು ನಾವರಿಯೆವು. ಹೇಗೆ ಎಂದರ ಯಾವ ಪ್ರಕಾರದಿಂದ ಈ ಬ್ರಹ್ಮವನ್ನು ತಿಳಿಯಪಡಿಸಬೇಕೋ ಶಿಷ್ಯನಿಗೆ ಉಪದೇಶಮಾಡಬೇಕೋ ನಮಗೆ ತಿಳಿಯದು ಎಂದು ಅಭಿಪ್ರಾಯ. **ಯಾವದು ಕರಣಗಳಿಗೆ ಗೋಚರವಾಗಿರುವದೋ ಅದನ್ನು ಮತ್ತೊಬ್ಬನಿಗೆ (ಅದರ) ಜಾತಿ[1], ಗುಣ, ಕ್ರಿಯೆ-ಎಂಬ ವಿಶೇಷಣ ಗಳಿಂದ ತಿಳಿಸಬಹುದು. ಆದರೆ ಈ ಬ್ರಹ್ಮದಲ್ಲಿ ಜಾತಿಯೇ ಮುಂತಾದ ವಿಶೇಷಣಗಳಿರುವದಿಲ್ಲ.** ಆದ್ದರಿಂದ ಶಿಷ್ಯರಿಗೆ ಇದನ್ನು ತಿಳಿಸಿಕೊಡುವದು ಕಷ್ಟವು-ಎಂದು[2] ಉಪದೇಶಮಾಡುವದರಲ್ಲಿಯೂ ಅದರ ಅರ್ಥವನ್ನು ತಿಳಿದು ಕೊಳ್ಳುವದರಲ್ಲಿಯೂ ಹೆಚ್ಚಿನ ಪ್ರಯತ್ನವನ್ನು ಮಾಡಬೇಕು ಎಂದು ತಿಳಿಸಿರುತ್ತದೆ.

## ತನ್ನ ಸ್ವರೂಪವೇ ಆಗಿರುವ ಬ್ರಹ್ಮವನ್ನು ಉಪದೇಶದಿಂದಲೇ ಅರಿತುಕೊಳ್ಳಬೇಕು.

(ಭಾಷ್ಯ)

೨೬. "ನ ವಿದ್ಮೋ ನ ವಿಜಾನೀಮೋ ಯಥೈತದನುಶಿಷ್ಯಾತ್" ಇತಿ ಅತ್ಯನ್ತಮೇವ ಉಪದೇಶಪ್ರಕಾರಪ್ರತ್ಯಾಖ್ಯಾನೇ ಪ್ರಾಪ್ತೇ ತದಪವಾದೋಽಯ ಮುಚ್ಯತೇ। ಸತ್ಯಮ್ ಏವಂ ಪ್ರತ್ಯಕ್ಷಾದಿಭಿಃ ಪ್ರಮಾಣೈರ್ನ ಪರಃ ಪ್ರತ್ಯಾಯಯಿತುಂ ಶಕ್ಯಃ। ಆಗಮೇನ ತು ಶಕ್ಯತ ಏವ ಪ್ರತ್ಯಾಯಯಿತುಮಿತಿ ತದುಪದೇಶಾರ್ಥಮಾ ಗಮಮಾಹ—ಅನ್ಯದೇವ ತದ್ವಿದಿತಾದಥೋ ಅವಿದಿತಾದಧೀತಿ ||

---

1. ಕರಿಯ ಗೋವು ಚಲಿಸುತ್ತದೆ_ಎಂಬಲ್ಲಿ ಗೋತ್ವವು ಜಾತಿಯು, ಕಪ್ಪು ಗುಣವು, ಚಲನೆಯು ಕ್ರಿಯೆ. ಹೀಗೆ ವಸ್ತುವಿನ ಜಾತಿಗುಣಕ್ರಿಯೆಗಳನ್ನು ಹೇಳುವ ವಿಶೇಷಣಗಳನ್ನು ಕೊಟ್ಟು ವಸ್ತುವನ್ನು ತಿಳಿಸಬಹುದು. ತೈ. ಭಾ. ೨-೧-೯, ಮಾಂ. ಭಾ. ೭, ಗೀ. ಭಾ. ೧೩-೧೨.

2. "ದರ್ಶಯತಿ ನ ವಿದ್ಮ ಇತ್ಯಾದಿ" ಎಂಬ (ಅ) ಪಾಠವನ್ನು "ನಾವರಿಯೆವು ಎಂದು ಮುಂತಾಗಿ ಹೇಳಿದ್ದರಿಂದ ಉಪದೇಶಮಾಡುವದರಲ್ಲಿಯೂ. .. ತಿಳಿಸಿರುತ್ತದೆ'' ಎಂದು ಕನ್ನಡಿಸಬೇಕು. ಇಲ್ಲಿ ತಿಳಿಯುವದು ಕಷ್ಟವು ಎಂದದ್ದರಿಂದ ಕಷ್ಟಪಟ್ಟಾವರೂ ತಿಳಿಯ ಬೇಕು ಎಂದರ್ಥವೇ ಹೊರತು ತಿಳಿಯುವದಕ್ಕೆ ದಾರಿಯೇ ಇಲ್ಲವೆಂದು ಅಭಿಪ್ರಾಯವಲ್ಲ ಎಂದು ಭಾವ.

(ಭಾಷ್ಯಾರ್ಥ)

"ಇದನ್ನು ಹೇಗೆ ತಿಳಿಯಪಡಿಸಬೇಕೋ ತಿಳಿಯೆವು" ಎಂಬುದರಿಂದ[1] (ಇದನ್ನು) ತಿಳಿಸಿಕೊಡುವದಕ್ಕೆ (ಯಾವದೊಂದು) ಪ್ರಕಾರವೂ ಇಲ್ಲವೇ ಎಂದಾಯಿತಲ್ಲ!—ಎಂದರೆ ಈ (ನಿಯಮಕ್ಕೆ) ಈ ಅಪವಾದವನ್ನು ಹೇಳುತ್ತಾರೆ. (ಮೇಲೆ ಹೇಳಿ)ದಂತೆ **ಪ್ರತ್ಯಕ್ಷಾದಿ**ಪ್ರಮಾಣಗಳಿಂದ[2] ಮತ್ತೊಬ್ಬರಿಗೆ ತಿಳಿಯಹೇಳುವದಕ್ಕೆ ಆಗುವದಿಲ್ಲವೆಂಬುದು ನಿಜವೇ. ಆದರೆ **ಆಗಮ**ದಿಂದ[3] ತಿಳಿಸುವದಕ್ಕೆ ಆಗಿಯೇ ಆಗುತ್ತದೆ–ಎಂದು ಅದನ್ನು ಹೇಳಿಕೊಡುವದಕ್ಕಾಗಿ "ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ" ಎಂಬ ಆಗಮವನ್ನು ಹೇಳುತ್ತಾರೆ

**ಅನ್ಯದೇವ ತದ್ವಿದಿತಾ**
**ದಥೋ ಅವಿದಿತಾದಧಿ ।**
**ಇತಿ ಶುಶ್ರುಮ ಪೂರ್ವೇಷಾಂ**
**ಯೇ ನಸ್ತದ್ವ್ಯಾಚಚಕ್ಷಿರೇ ॥ ೪ ॥**

೪. ಅದು ತಿಳಿಯಲ್ಪಟ್ಟದ್ದಕ್ಕಿಂತಲೂ ಬೇರೆಯೇ ಮತ್ತು ತಿಳಿಯಲ್ಪಡದೆ ಇರುವದಕ್ಕಿಂತಲೂ ಬೇರೆಯೇ ಎಂದು ನಮಗೆ ಅದನ್ನು ವಿವರಿಸಿ ಹೇಳಿದ ಹಿರಿಯವರಿಂದ ನಾವು ಕೇಳಿರುತ್ತೇವೆ.

(ಭಾಷ್ಯ)

೨೨. ಅನ್ಯದೇವ ಪೃಥಗೇವ ತತ್ । ಯತ್ ಪ್ರಕೃತಂ "ಶ್ರೋತ್ರಾದೀನಾಂ ಶ್ರೋತ್ರಾದಿ" ಇತ್ಯುಕ್ತಮ್ ಅವಿಷಯಶ್ಚ ತೇಷಾಮ್, ತತ್ ವಿದಿತಾತ್ ಅನ್ಯದೇವ ಹಿ । ವಿದಿತಂ ನಾಮ ಯದ್ ವಿದಿಕ್ರಿಯಯಾ ಅತಿಶಯೇನ ಆಪ್ತಮ್ ವಿದಿಕ್ರಿಯಾ ಕರ್ಮಭೂತಮ್ । ಕ್ವಚಿತ್ ಕಿಂಚಿತ್ ಕಸ್ಯಚಿದ್ವಿದಿತಂ ಸ್ಯಾತ್ ಇತಿ ಸರ್ವಮೇವ

---

1. "ನ ವಿದ್ಮೋ ನ ವಿಜಾನೀಮೋ ಯಥೈತದನುಶಿಷ್ಯಾತ್" ಎಂಬ (ವಾ॥) ಪಾಠವು (ಅ॥) ಪಾಠದಲ್ಲಿ ಕಂಡುಬರುವದಿಲ್ಲ "ನ ವಿದ್ಮ ಇತ್ಯಾದಿ" (ಅ॥) ಎಂಬುದಕ್ಕೆ ಬದಲೇ ಈ ವಾಕ್ಯವು ಬಂದಿದೆ ಎಂದು ಇಟ್ಟುಕೊಂಡರೆ ಹಿಂದಿನ ಮಂತ್ರದ ಭಾಷ್ಯಕ್ಕೆ ಇದು ಸೇರುತ್ತದೆ.

2. ಪ್ರತ್ಯಕ್ಷಾದಿಗಳು ದ್ರವ್ಯ, ಗುಣ, ಕ್ರಿಯೆ, ಜಾತಿ–ಮುಂತಾದವನ್ನು ಮಾತ್ರ ತಿಳಿಸುತ್ತವೆ.

3. ಆಗಮವೆಂದರೆ ಅನುಭವವನ್ನು ಉಪದೇಶಿಸುವದು. ಪ್ರಮಾಣಕ್ಕೆ ತಿಳಿಯಬರದ ಜಾಗ್ರದಾದ್ಯವಸ್ಥೆಗಳನ್ನು ಅನುಭವದಿಂದ ತಿಳಿದುಕೊಂಡು ಮತ್ತೊಬ್ಬರಿಗೆ ತಿಳಿಸಿಕೊಡುವಂತೆ ಆತ್ಮನನ್ನು ಸಾರ್ವತ್ರಿಕವಾದ ಅನುಭವದ ಆಧಾರದಿಂದಲೇ ಮತ್ತೊಬ್ಬರಿಗೆ ತಿಳಿಯಹೇಳಬಹುದು–ಎಂದು ಭಾವ.

**ವ್ಯಾಕೃತಂ** ವಿದಿತಮೇವ । ತಸ್ಮಾದನ್ಯದೇವ ಇತ್ಯರ್ಥಃ । ಅವಿದಿತಮ್ ಅಜ್ಞಾತಂ ತರ್ಹಿ ಇತಿ ಪ್ರಾಪ್ತೇ ಆಹ—ಅಥೋ ಅಪಿ ಅವಿದಿತಾತ್ ವಿದಿತವಿಪರೀತಾತ್ **ಅವ್ಯಾಕೃತಾತ್ ಅವಿದ್ಯಾಲಕ್ಷಣಾತ್** ವ್ಯಾಕೃತಬೀಜಾತ್ । ಅಧಿ ಇತಿ ಉಪರ್ಯರ್ಥೇ । ಲಕ್ಷಣಯಾ ಅನ್ಯತ್ ಇತ್ಯರ್ಥಃ । ಯದ್ ಹಿ ಯಸ್ಮಾದ್ ಅಧಿ ಉಪರಿ ಭವತಿ, ತತ್ ತಸ್ಮಾತ್ ಅನ್ಯತ್ ಇತಿ ಪ್ರಸಿದ್ಧಮ್ ॥

(ಭಾಷ್ಯಾರ್ಥ)

ಅದು ಬೇರೆಯೇ ಎಂದರೆ ಬೇರ್ಪಟ್ಟೇ ಇರುತ್ತದೆ. ಯಾವದು ಶ್ರೋತ್ರಾದಿಗಳಿಗೂ ಶ್ರೋತ್ರಾದಿಯೆಂದೂ ಅವುಗಳಿಗೆ ವಿಷಯವಲ್ಲವೆಂದೂ[1] ಹೇಳಿ ಪ್ರಕೃತವಾಗಿದೆಯೋ[2] ಅದು ತಿಳಿಯಲ್ಪಟ್ಟದ್ದಕ್ಕಿಂತಲೂ ಬೇರೆಯೇ ಸರಿ. (ಇಲ್ಲ) ತಿಳಿಯಲ್ಪಟ್ಟದ್ದು ಎಂದರೆ ಯಾವದು ತಿಳಿಯೋಣವೆಂಬ ಕ್ರಿಯೆಯಿಂದ ತೀರ ಹೆಚ್ಚಾಗಿ ವ್ಯಾಪ್ತವಾಗಿರುವದೋ, ತಿಳಿಯೋಣವೆಂಬ ಕ್ರಿಯೆಗೆ ಕರ್ಮವಾಗಿರುವದೋ[3] (ಅದು). ಎಲ್ಲಿಯೇ ಇರಲಿ, ಏನೇ ಇರಲಿ, ಯಾರಿಗಾದರೊಬ್ಬರಿಗೆ ತಿಳಿಯುವದಾಗಿಯೇ ಇರಬಹುದಾದ್ದರಿಂದ **ವ್ಯಾಕೃತ**ವಾಗಿರುವದೆಲ್ಲವೂ ತಿಳಿಯಲ್ಪಟ್ಟದ್ದೇ (ಆಗಿರುತ್ತದೆ).[4] ಅದಕ್ಕಿಂತಲೂ (ಬ್ರಹ್ಮವು) ಬೇರೆಯೇ ಎಂದರ್ಥ." ಹಾಗಾದರೆ ಅದು ತಿಳಿಯಲ್ಪಟ್ಟದ್ದಲ್ಲ, ಅರಿಯಲ್ಪಡತಕ್ಕದ್ದಲ್ಲ ಎಂದಾಯಿತು" ಎಂದರೆ (ಅದಕ್ಕೆ) ಹೇಳುತ್ತಾರೆ.— **ಅಥೋ** ಎಂದರೆ ಮತ್ತು ಅವಿದಿತಕ್ಕಿಂತಲೂ, ಎಂದರೆ ತಿಳಿಯಲ್ಪಡತಕ್ಕದ್ದಕ್ಕೆ ವಿರುದ್ಧವಾಗಿ **ವ್ಯಾಕೃತಕ್ಕೆ ಕಾರಣವಾಗಿ ಅವಿದ್ಯೆಯಿಂದ ತೋರುವ ಅವ್ಯಾಕೃತಕ್ಕಿಂತಲೂ**[5], ಬೇರೆಯೇ. (ಮೂಲದಲ್ಲಿರುವ) ಅಧಿ ಎಂಬ (ಮಾತಿಗೆ) ಮೇಲೆ ಎಂದರ್ಥ. (ಇಲ್ಲಿ) ಲಕ್ಷಣೆಯಿಂದ (ಇದಕ್ಕೆ) ಬೇರೆ ಎಂದು ಅರ್ಥ(ವನ್ನು ಮಾಡಿಕೊಳ್ಳಬೇಕು);

1. ಎರಡುಮೂರನೆಯ ಮಂತ್ರಗಳಲ್ಲಿ ಹೇಳಿರುವದರ ಸಾರವಿದು.

2. ತತ್ ಎಂಬ ಸರ್ವನಾಮವು ಪ್ರಕೃತವಾದ ಬ್ರಹ್ಮವನ್ನೇ ಹೇಳುವದೆಂದು ಭಾವ.

3. ಕ್ರಿಯೆಯಿಂದ ಯಾವದು ಎಲ್ಲಕ್ಕೂ ಹೆಚ್ಚಾಗಿ ವ್ಯಾಪಿಸಲ್ಪಡುವದೋ ಅದು ಕರ್ಮವು ಎಂದು ವ್ಯಾಕರಣದಲ್ಲಿ ಹೇಳಿರುತ್ತದೆ. ತಿಳಿಯಲ್ಪಡತಕ್ಕ ವಿಷಯವನ್ನೇ ಇಲ್ಲಿ ವಿದಿತವೆಂದಿದೆ ಎಂದರ್ಥ.

4. ವಿದಿತವೆಂಬ ಮಾತಿನಲ್ಲಿ ನಮ್ಮಲ್ಲಿ ಯಾರಾದರೊಬ್ಬರಿಗೆ ತಿಳಿದಿರುವದು ಮಾತ್ರವೇ ಅಲ್ಲದೆ ತಿಳಿಯಬಹುದಾದ ಸ್ವರೂಪವುಳ್ಳದ್ದನ್ನೂ ಸೇರಿಸಿದೆ ಎಂದು ಅಭಿಪ್ರಾಯ. ಹೊರಗೆ ನಾಮರೂಪಕರ್ಮವಾಗಿ ತೋರಿಕೊಳ್ಳುವ ಪ್ರಪಂಚವೆಲ್ಲವೂ ವ್ಯಾಕೃತ, ವಿದಿತ.

5. ವ್ಯಾಕೃತಕ್ಕೆ ಕಾರಣವಾಗಿ ಸೃಷ್ಟಿಗೆ ಪೂರ್ವದಲ್ಲಿತ್ತೆಂದು ನಾವು ತಪ್ಪುತಿಳಿವಳಿಕೆಯಿಂದ ಕಲ್ಪಿಸುವ ಬೀಜವು ಅವ್ಯಾಕೃತ, ಅವಿದಿತ. ಸೂ. ಭಾ. ೨-೧-೧೪; ಬೃ. ಭಾ. ೧-೪-೭.

ಏಕೆಂದರೆ ಯಾವದಕ್ಕಿಂತ ಯಾವದು ಮೇಲೆ ಇರುವದೋ ಅದು ಅದಕ್ಕಿಂತಲೂ ಬೇರೆಯೇ ಎಂಬುದು ಪ್ರಸಿದ್ಧವಾಗಿರುತ್ತದೆ.

(ಭಾಷ್ಯ)

೨೮. ಯದ್ವಿದಿತಂ ತದಲ್ಪಂ ಮರ್ತ್ಯಂ ದುಃಖಾತ್ಮಕಂ ಚ ಇತಿ ಹೇಯಮ್ ತಸ್ಮಾತ್ ವಿದಿತಾದನ್ಯತ್ ಬ್ರಹ್ಮ ಇತ್ಯುಕ್ತೇ ತ್ವಹೇಯತ್ವಮ್ ಉಕ್ತಂ ಸ್ಯಾತ್ । ತಥಾ "ಅವಿದಿತಾತ್ ಅಧಿ" ಇತ್ಯುಕ್ತೇ ಅನುಪಾದೇಯತ್ವಮ್ ಉಕ್ತಂ ಸ್ಯಾತ್ । ಕಾರ್ಯಾರ್ಥಂ ಹಿ ಕಾರಣಮನ್ಯತ್ ಅನ್ಯೇನ ಉಪಾದೀಯತೇ । ಅತಶ್ಚ ನ ವೇದಿತುಃ ಅನ್ಯಸ್ಮೈ ಪ್ರಯೋಜನಾಯ ಅನ್ಯತ್ ಉಪಾದೇಯಂ ಭವತೀತಿ । ಏವಂ ವಿದಿತಾವಿದಿತಾಭ್ಯಾಮ್ ಅನ್ಯತ್ ಇತಿ ಹೇಯೋಪಾದೇಯಪ್ರತಿಷೇಧೇನ ಸ್ವಾತ್ಮನೋ ಽನನ್ಯತ್ವಾತ್ ಬ್ರಹ್ಮವಿಷಯಾ ಜಿಜ್ಞಾಸಾ ಶಿಷ್ಯಸ್ಯ ನಿವರ್ತಿತಾ ಸ್ಯಾತ್ । ನ ಹ್ಯನ್ಯಸ್ಯ ಸ್ವಾತ್ಮನೋ ವಿದಿತಾವಿದಿತಾಭ್ಯಾಮ್ ಅನ್ಯತ್ವಂ ವಸ್ತುನಃ ಸಮ್ಭವತೀತಿ ಆತ್ಮಾ ಬ್ರಹ್ಮ ಇತ್ಯೇಷ ವಾಕ್ಯಾರ್ಥಃ । "ಅಯಮಾತ್ಮಾ ಬ್ರಹ್ಮ" (ಬೃ. ೪-೪-೫) "ಯ ಆತ್ಮಾ ಅಪಹತಪಾಪ್ಮಾ" (ಛಾ. ೮-೭-೧), "ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ .... ...ಯ ಆತ್ಮಾ ಸರ್ವಾನ್ತರಃ" (ಬೃ. ೩-೪-೧) ಇತ್ಯಾದಿಶ್ರುತ್ಯನ್ತರೇಭ್ಯಶ್ಚೇತಿ ॥

(ಭಾಷ್ಯಾರ್ಥ)

ಯಾವದು ತಿಳಿಯಲ್ಪಡತಕ್ಕದ್ದಾಗಿರುವದೋ ಅದು ಅಲ್ಪವೂ ಮರ್ತ್ಯವೂ[1] ದುಃಖರೂಪವೂ ಆಗಿರುವದರಿಂದ ಬಿಡತಕ್ಕದ್ದಾಗಿರುವದು. ಆದ್ದರಿಂದ ತಿಳಿಯಲ್ಪಡ ತಕ್ಕದ್ದಕ್ಕಿಂತಲೂ ಬ್ರಹ್ಮವು ಬೇರೆ ಎಂದದ್ದರಿಂದ (ಅದು) ಬಿಡತಕ್ಕದ್ದಲ್ಲವೆಂದು ಹೇಳಿ ದಂತಾಗುವದು. ಇದರಂತೆ ತಿಳಿಯಲ್ಪಡಲಾರದ್ದಕ್ಕಿಂತ ಬೇರೆ ಎಂದದ್ದರಿಂದ ಅದು ತೆಗೆದುಕೊಳ್ಳತಕ್ಕದ್ದೂ ಅಲ್ಲವೆಂದು ಹೇಳಿದಂತಾಗುವದು. ಏಕೆಂದರೆ (ಯಾವದಾದ ರೊಂದು) ಕಾರ್ಯಕ್ಕಾಗಿ (ಅದರ) ಕಾರಣವಾದ ಬೇರೆ ಒಂದನ್ನು (ಅವೆರಡಕ್ಕಿಂತ) ಬೇರೆಯಾದ(ವನೊಬ್ಬನು)[2] ತಗೆದುಕೊಳ್ಳುತ್ತಾನೆ. ಆದ್ದರಿಂದ (ಬ್ರಹ್ಮವು) ತಿಳಿಯು ವಾತನಿಗಿಂತ ಬೇರೆಯಾದ ಪ್ರಯೋಜನಕ್ಕಾಗಿ ತೆಗೆದುಕೊಳ್ಳಬೇಕಾಗಿರುವ ಬೇರೆ

---

1. ಅವಿದ್ಯೆಯ ಕಾಲದಲ್ಲಿ ಮಾತ್ರವಿರುವದಾದ್ದರಿಂದ ಅದು ಪರಿಚ್ಛಿನ್ನವಾಗಿರುವದ ರಿಂದಲೇ ನಾಶವಾಗತಕ್ಕದ್ದು. ಛಾ. ಭಾ. ೭-೨೪-೧. ವ್ಯಾಕೃತವೂ ಅವ್ಯಾಕೃತವೂ ಅವಿದ್ಯಾ ಕಲ್ಪಿತವಾಗಿರುವದಾದ್ದರಿಂದ ಬ್ರಹ್ಮಸ್ವರೂಪಕ್ಕೆ ಸೇರಿದ್ದಲ್ಲವೆಂದು ಭಾವ. ಸೂ. ಭಾ. ೨-೧-೨೭, ೧-೪-೩.

2. ಕಾರ್ಯವು ಪ್ರಯೋಜನವು, ಕಾರಣವೆಂಬುದು ಸಾಧನವು; ಕಾರಣವನ್ನು ತೆಗೆದು ಕೊಂಡು ಕಾರ್ಯವನ್ನು ಪಡೆಯುವವನು ಕಾರ್ಯಕಾರಣಗಳೆರಡಕ್ಕಿಂತ ಬೇರೆಯಾಗಿರುತ್ತಾನೆ.

ಒಂದು ವಸ್ತುವಲ್ಲ[1] ಎಂದು (ಹೇಳಿದಂತೆ ಆಯಿತು). ಹೀಗೆ (ಬ್ರಹ್ಮವು) ತಿಳಿಂ ಲ್ಪಡತಕ್ಕದ್ದು, ತಿಳಿಯಲ್ಪಡಲಾರದ್ದು–ಈ ಎರಡಕ್ಕಿಂತಲೂ ಬೇರೆಯೇ ಎಂ ಬಿಡತಕ್ಕದ್ದೂ ತೆಗೆದುಕೊಳ್ಳದ್ದೂ ಅಲ್ಲವೆಂದದ್ದರಿಂದ[2] (ಅದು) ತನಗಿಂತಲೂ ಬೇ ಯಲ್ಲವಾಗುವದರಿಂದ ಶಿಷ್ಯನಿಗೆ ಇರುವ ಬ್ರಹ್ಮವಿಷಯವಾದ ಜಿಜ್ಞಾಸೆಯನ್ನು ತೊ ಗಿಸಿದಂತೆ[3] ಆಗುತ್ತದೆ. ತನಗಿಂತ ಬೇರೆಯಾದ ವಸ್ತುವು[4] ತಿಳಿಯಲ್ಪಡತಕ್ಕದ ತಿಳಿಯಲ್ಪಡದೆ ಇರುವದು–(ಈ) ಎರಡಕ್ಕಿಂತಲೂ ಬೇರೆಯಾಗಿರುವದು ಸಂಭವಿಸು ದಿಲ್ಲವಾದ್ದರಿಂದ (ತನ್ನ) ಆತ್ಮನೇ ಬ್ರಹ್ಮವು ಎಂಬುದು (ಒಟ್ಟು) ವಾಕ್ಯದ ಅರ್ಥ "(ಈ) ಆತ್ಮನೇ ಬ್ರಹ್ಮವು" (ಬೃ. ೪-೪-೫), "ಯಾವನು ಪಾಪದ ಹೊಡೆತವಿಲ್ಲ ... ....ಆತ್ಮನೋ" ಛಾ. ೮-೭-೧), "ಯಾವದು ನೇರಾಗಿ ಅಪರೋಕ್ಷವಾಗಿರು ಬ್ರಹ್ಮವೋ, ಯಾವನು ಎಲ್ಲಕ್ಕಿಂತಲೂ ಒಳಗಿರುವ ಆತ್ಮನೋ" (ಬೃ. ೩-೪-೧) ಮುಂತಾದ ಬೇರೆಯ ಶ್ರುತಿಗಳಿಂದಲೂ (ಈ ಅಭಿಪ್ರಾಯವು ಸಿದ್ಧಿಸುತ್ತದೆ.

(ಭಾಷ್ಯ)

೨೯. ಏವಂ ಸರ್ವಾತ್ಮನಃ ಸರ್ವವಿಶೇಷರಹಿತಸ್ಯ ಚಿನ್ಮಾತ್ರಜ್ಯೋತಿಷೋ ಬ್ರಹ್ಮತ್ವಪ್ರತಿಪಾದಕಸ್ಯ ವಾಕ್ಯಸ್ಯ ಆಚಾರ್ಯೋಪದೇಶ ಪರಮ್ಪರಯಾ ಪ್ರಾಪ್ತತ್ ಮಾಹ—ಇತಿ ಶುಶ್ರುಮೇತ್ಯಾದಿ । ಬ್ರಹ್ಮಚೈವಮ್ ಆಚಾರ್ಯೋಪದೇಶಪರಮ್ಪ ಯೈವಾಧಿಗನ್ತವ್ಯಮ್ ನ ತರ್ಕತಃ ಪ್ರವಚನಮೇಧಾಬಹುಶ್ರುತತಪೋಯಜ್ಞಾ ಭ್ಯಶ್ಚ । ಇತಿ ಏವಮ್ ಶುಶ್ರುಮ ವಯಂ ಪೂರ್ವೇಷಾಮ್ ಆಚಾರ್ಯಾಣಾಂ ವ

---

1. ಕಾರಣವಲ್ಲ. "ಉಪಾದೇಯಂ ನ ಭವತಿ" ಎಂಬ (ಮೈ॥) ಪಾಠಕ್ಕಿಂತ ನಮ್ ಪಾಠವೇ ಮೇಲು.

2. ಬೇಕಾದದ್ದು ಸಾಧನವು; ಬೇಡವಾದದ್ದನ್ನು ತಪ್ಪಿಸಿಕೊಳ್ಳುವದಕ್ಕಾಗಿ ಅದ ಬೇಕಾದ ಸಾಧನವನ್ನು ತೆಗೆದುಕೊಳ್ಳುತ್ತಾರೆ. ಬ್ರಹ್ಮವು ಬೇಕು, ಬೇಡ–ಈ ಎರಡು ಅಲ್ಲ.

3. ತನಗಿಂತ ಬೇರೆಯಾದದ್ದನ್ನೇ ತಿಳಿಯಬೇಕಾಗಿರುವದು, ತನ್ನನ್ನು ತಾನು ತಿಳಿಯ ಬೇಕೆಂಬ ಇಚ್ಛೆಯಿಂದ ಯಾರೂ ವಿಚಾರವನ್ನು ಮಾಡುವದಕ್ಕೆ ತೊಡಗುವದಿಲ್ಲ. ಅದ್ದರಿಂ ಬ್ರಹ್ಮವು ತಿಳಿಯಬೇಕಾಗಿರುವ ವಿಷಯವಲ್ಲ, ತಿಳಿಯುವಾತನ ಸ್ವರೂಪವೇ ಎಂದು ತಿಳಿ ವಿಚಾರಪರಿಸಮಾಪ್ತಿಯನ್ನು ಮಾಡಿದಂತೆ ಆಯಿತು ಎಂದರ್ಥ. "ಸ್ವಾತ್ಮನೋಽನ್ಯಬ್ರಹ್ ವಿಷಯಾ" ಎಂಬ (ಆ॥) ಪಾಠದಲ್ಲಿ "ತನಗಿಂತ ಬೇರೆಯಾದ ಬ್ರಹ್ಮವನ್ನರಿಯಬೇಕೆಂ ಇಚ್ಛೆಯನ್ನು ತೊಲಗಿಸಿದಂತೆ ಆಯಿತು" ಎಂದು ಕನ್ನಡಿಸಬೇಕು.

4. "ವಸ್ತುತಃ" (ನಿಜವಾಗಿ) ಎಂಬ (ಹಿ॥) ಪಾಠಕ್ಕಿಂತ ಈಗಿನ ಪಾಠವೇ ಉತ್ತಮ ವೆಂದು ತೋರುತ್ತದೆ.

ನಮ್ । ಯೇ ಆಚಾರ್ಯಾಃ ನಃ ಅಸ್ಮಭ್ಯಂ ತತ್ ಬ್ರಹ್ಮ ವ್ಯಾಚಚಕ್ಷಿರೇ ವ್ಯಾಖ್ಯಾತ ವನ್ತಃ ವಿಸ್ಪಷ್ಟಂ ಕಥಿತವನ್ತಃ ತೇಷಾಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆ ಯಾವ ವಿಶೇಷವೂ ಇಲ್ಲದವನೂ ಬರಿಯ ಚೈತನ್ಯದ ಜ್ಯೋತಿಯೂ ಆಗಿರುವ ಎಲ್ಲರ ಆತ್ಮನೇ ಬ್ರಹ್ಮವೆಂದು ಹೇಳುವ ಈ ವಾಕ್ಯವು[1] **ಆಚಾರ್ಯರುಗಳ ಉಪದೇಶಪರಂಪರೆ**ಯಿಂದ ಬಂದದ್ದೆಂದು "ಎಂದು ಕೇಳಿರುತ್ತೇವೆ" ಮುಂತಾದ (ವಾಕ್ಯದಲ್ಲಿ) ಹೇಳಿರುತ್ತದೆ. ಬ್ರಹ್ಮವನ್ನು ಹೀಗೆ ಆಚಾರ್ಯರುಗಳ ಉಪದೇಶಪರಂಪರೆಯಿಂದಲೇ[2] ತಿಳಿದುಕೊಳ್ಳಬಹುದೇ ಹೊರತು (ಬರಿಯ) ತರ್ಕದಿಂದಲಾಗಲಿ[3] (ಬರಿಯ) ಅಧ್ಯಯನ, ಗ್ರಂಥಾರ್ಥಧಾರಣಶಕ್ತಿ, ಬಹಳವಾಗಿ ಮಾಡಿದ ಶ್ರವಣ, ತಪಸ್ಸು, ಯಜ್ಞ[4] – ಮುಂತಾದವುಗಳಿಂದಲಾಗಲಿ (ತಿಳಿದುಕೊಳ್ಳುವದು) ಆಗಲಾರದು ಎಂದು ಹೀಗೆ ಹಿಂದಿನ ಆಚಾರ್ಯರುಗಳು ಹೇಳಿದ್ದನ್ನು ಕೇಳಿರುತ್ತೇವೆ. ಯಾವ ಆಚಾರ್ಯರು ನಮಗೆ ಆ ಬ್ರಹ್ಮವನ್ನು ವಿವರಿಸಿ ಸ್ಪಷ್ಟವಾಗಿ ಹೇಳಿದರೋ ಅವರ (ವಚನವನ್ನು ಕೇಳಿರುತ್ತೇವೆ) ಎಂದರ್ಥ.[5] ॥ ೪ ॥

## ಉಪಾಸ್ಯರೂಪವು ಬ್ರಹ್ಮದ ಪರಮಾರ್ಥರೂಪವಲ್ಲ

(ಭಾಷ್ಯ)

೩೦. "ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ" ಇತ್ಯನೇನ ವಾಕ್ಯೇನ ಆತ್ಮಾ ಬ್ರಹ್ಮ–ಇತಿ ಪ್ರತಿಪಾದಿತೇ ಶ್ರೋತುಃ ಆಶಙ್ಕಾ ಜಾತಾ—"ಕಥಂ ನು[6] ಆತ್ಮಾ ಬ್ರಹ್ಮ? ಆತ್ಮಾ ಹಿ ನಾಮ ಅಧಿಕೃತಃ ಕರ್ಮಣಿ ಉಪಾಸನೇ ಚ ಸಂಸಾರೀ ಕರ್ಮ ಉಪಾಸನಂ ವಾ ಸಾಧನಮ್ ಅನುಷ್ಠಾಯ ಬ್ರಹ್ಮಾದಿದೇವಾನ್ ಸ್ವರ್ಗಂ ವಾ ಪ್ರಾಪ್ತುಮ್ ಇಚ್ಛತಿ । ತತ್ ತಸ್ಮಾದನ್ಯ ಉಪಾಸ್ಯೋ **ವಿಷ್ಣುಃ, ಈಶ್ವರಃ, ಇನ್ದ್ರಃ, ಪ್ರಾಣೋ** ವಾ ಬ್ರಹ್ಮ ಭವಿತುಮ್ ಅರ್ಹತಿ । ನತ್ವಾತ್ಮಾ ಲೋಕ

1. 'ವಾಕ್ಯಾರ್ಥಸ್ಯ' ಎಂದು ಅನೇಕ ಕೋಶಗಳಲ್ಲಿದೆ. ಆದರೆ 'ವಾಕ್ಯಸ್ಯ' ಎಂಬ (ಮೈ॥) ಪಾಠವೇ ಉತ್ತಮ.

2. ಕ. ಭಾ. ೧-೨-೮ ; ಗೀ. ೪-೩೪.

3. ಕ. ೧-೨-೯.

4. ಮು. ೩-೨-೩, ೪ ; ಗೀ. ೧೧-೫೩. ಇಲ್ಲಿ ಬರಿಯ ತರ್ಕ, ಅಧ್ಯಯನ ಮುಂತಾದವುಗಳಿಂದ ತಿಳಿಯುವದಕ್ಕೆ ಆಗಲಾರದು ಎಂದು ಹೇಳಿರುವದು ಅವುಗಳು ಆಚಾರ್ಯನ ಉಪದೇಶವಿಲ್ಲದೆ ಪ್ರಯೋಜನಕಾರಿಯಾಗಲಾರವೆಂಬ ಅಭಿಪ್ರಾಯದಿಂದ.

5. ಅವರ ವಚನದಿಂದಲೇ ನಮಗೆ ಆತ್ಮಜ್ಞಾನವಾಗಿದೆ ಎಂದಭಿಪ್ರಾಯ.

6 (ವಾ॥) ಪಾಠ.

ಪ್ರತ್ಯಯವಿರೋಧಾತ್ । ಯಥಾ ಅನ್ಯೇ ತಾರ್ಕಿಕಾ ಈಶ್ವರಾದನ್ಯ ಆತ್ಮಾ ಇತ್ಯಾಚಕ್ಷತೇ, ತಥಾ ಕರ್ಮಿಣಃ "ಅಮುಂ ಯಜಾಮುಂ ಯಜ" (ಬೃ. ೧-೪-೬) ಇತ್ಯನ್ಯಾ ಏವ ದೇವತಾ ಉಪಾಸತೇ । ತಸ್ಮಾತ್ ಯುಕ್ತಂ ಯದ್ ವಿದಿತಮ್ ಉಪಾಸ್ಯಂ ತದ್ ಬ್ರಹ್ಮ ಭವೇತ್, ತತೋಽನ್ಯ ಉಪಾಸಕ ಇತಿ । ತಾಮ್ ಏತಾಮ್ ಆಶಙ್ಕಾಂ ಶಿಷ್ಯಲಿಙ್ಗೇನ ಉಪಲಕ್ಷ್ಯ ತದ್ವಾಕ್ಯಾದ್ವಾ ಆಹ—

(ಭಾಷ್ಯಾರ್ಥ)

"ಅದು ತಿಳಿಯಲ್ಪಡತಕ್ಕದ್ದಕ್ಕಿಂತಲೂ ಬೇರೆಯೇ, ಮತ್ತು ತಿಳಿಯಲ್ಪಡದೆ ಇರುವದಕ್ಕಿಂತಲೂ ಬೇರೆಯೇ" (೪) ಎಂಬೀ (ವಾಕ್ಯ)ದಿಂದ (ತನ್ನ) ಆತ್ಮನೇ ಬ್ರಹ್ಮವು ಎಂದು ಹೇಳಿದ್ದರಿಂದ ಕೇಳುವ (ಶಿಷ್ಯ)ನಿಗೆ (ಈ) ಆಶಂಕೆಯುಂಟಾಯಿತು :— "ಆತ್ಮನೇ ಬ್ರಹ್ಮವೆಂಬುದು ಹೇಗೆ (ಸರಿಯಾದೀತು)? ಆತ್ಮನೆಂದರೆ ಕರ್ಮಕ್ಕೂ ಉಪಾಸನೆಗೂ ಅಧಿಕಾರಿಯಾಗಿರುವ ಸಂಸಾರಿಯು, ಸಾಧನವಾದ ಕರ್ಮವನ್ನೋ ಉಪಾಸನೆಯನ್ನೋ ಮಾಡಿ **ಬ್ರಹ್ಮನೇ** ಮೊದಲಾದ ದೇವತೆಗಳನ್ನೋ **ಸ್ವರ್ಗ**ವನ್ನೋ ಪಡೆಯುವದಕ್ಕೆ ಇಚ್ಛಿಸುತ್ತಾನೆ ಆದ್ದರಿಂದ ಬ್ರಹ್ಮವು ಅವನಿಗಿಂತ ಬೇರೆಯಾಗಿದ್ದು ಉಪಾಸನೆಮಾಡಲ್ಪಡತಕ್ಕ **ವಿಷ್ಣುವೋ ಈಶ್ವರನೋ ಇಂದ್ರನೋ ಪ್ರಾಣನೋ** ಆಗಿರಬಹುದೇ ಹೊರತು (ಅವನ) ಆತ್ಮನೇ ಆಗಿರಲಾರದು. ಏಕೆಂದರೆ (ಆತ್ಮನೇ ಬ್ರಹ್ಮವೆಂಬುದು) ಲೋಕದ ತಿಳಿವಳಿಕೆಗೆ ವಿರುದ್ಧವಾಗಿರುತ್ತದೆ (ವೇದಾಂತಿಗಳಿಗಿಂತ) ಬೇರೆಯಾಗಿರುವ **ತಾರ್ಕಿಕರು**[1] ಆತ್ಮನು ಈಶ್ವರನಿಗಿಂತ ಬೇರೆ ಎಂದು ಹೇಳುತ್ತಿರುವರೋ ಹಾಗೆಯೇ **ಕರ್ಮಿಗಳೂ**[2] "ಈ (ದೇವತೆಗೆ) ಯಾಗ ಮಾಡು, ಈ (ದೇವತೆಗೆ) ಯಾಗಮಾಡು" (ಬೃ. ೧-೪-೬) ಎಂದು (ಆತ್ಮನಿಗಿಂತಲೂ) ಬೇರೆಯಾದ ದೇವತೆಗಳನ್ನೇ ಉಪಾಸನೆಮಾಡುತ್ತಾರೆ. ಆದ್ದರಿಂದ ಯಾವದು ತಿಳಿಯಲ್ಪಡತಕ್ಕದ್ದಾಗಿ ಉಪಾಸ್ಯವಾಗಿರುವದೋ ಅದೇ ಬ್ರಹ್ಮವಾಗಿರಬೇಕು, (ಅದನ್ನು) ಉಪಾಸನೆಮಾಡುವ (ಆತ್ಮ)ನು ಅದಕ್ಕಿಂತ ಬೇರೆಯಾಗಿರಬೇಕು." ಹೀಗೆಂಬ ಈ ಆಶಂಕೆಯನ್ನು ಶಿಷ್ಯನ (ಮುಖ) ಚಿಹ್ನೆಯಿಂದಲೋ ಅಥವಾ ಅವನು ಹೇಳಿದ್ದರಿಂದಲೋ ಕಂಡುಕೊಂಡು (ಗುರು) ಹೇಳುತ್ತಾನೆ :—

1. ನೈಯಾಯಿಕರು, ವೈಶೇಷಿಕರು, ಸೇಶ್ವರಸಾಂಖ್ಯರು—ಮುಂತಾದವರು.

2. ಸೇಶ್ವರಮೀಮಾಂಸಕರು. ನಿರೀಶ್ವರಮೀಮಾಂಸಕರ ಮತದಲ್ಲಿ ಚೇತನರೂಪವಾದ ದೇವತೆಯೂ ಇಲ್ಲ. ಜೈ. ಸೂ ಶಾ. ಭಾ. ೯-೧-೯ ನೋಡಿರಿ. ಇಲ್ಲಿ ಜೀವೇಶ್ವರಭೇದವನ್ನು ಹೇಳುವ ವೇದಾಂತಿಗಳನ್ನು ಉದಾಹರಿಸಿಲ್ಲವಾದ್ದರಿಂದ ಆಚಾರ್ಯರ ಕಾಲಕ್ಕೆ ಅಂಥ ವೇದಾಂತಿಗಳು ಇರಲಿಲ್ಲವೆಂದು ತೋರುತ್ತದೆ.

**ಯದ್ ವಾಚಾನಭ್ಯುದಿತಂ**
**ಯೇನ ವಾಗಭ್ಯುದ್ಯತೇ ।**
**ತದೇವ ಬ್ರಹ್ಮತ್ವಂ ವಿದ್ಧಿ**
**ನೇದಂ ಯದಿದಮುಪಾಸತೇ ॥ ೫ ॥**

೫. ಯಾವದು ವಾಕ್ಕಿನಿಂದ ಹೇಳಲ್ಪಡುವದಿಲ್ಲವೋ ಯಾವದರಿಂದ ವಾಕ್ಕು ತಿಳಿಸಲ್ಪಡುವದೋ ಅದನ್ನೇ ಬ್ರಹ್ಮವೆಂದು ನೀನು ತಿಳಿ. ಯಾವದನ್ನು ಇದೆಂದು ಉಪಾಸನೆಮಾಡುತ್ತಾರೋ ಇದಲ್ಲ.

(ಭಾಷ್ಯ)

೩೧. ಮೈವಂ ಶಙ್ಕಿಷ್ಠಾಃ । ಯತ್ ಚೈತನ್ಯಮಾತ್ರಸತ್ತಾಕಮ್ ವಾಚಾ ವಾಕ್ ಇತಿ ಜಿಹ್ವಾಮೂಲಾದಿಷು ಅಷ್ಟಸು ಸ್ಥಾನೇಷು ವಿಷಕ್ತಮ್ ಆಗ್ನೇಯಂ ವರ್ಣಾನಾಮ್ ಅಭಿವ್ಯಞ್ಜಕಂ ಕರಣಮ್ । ವರ್ಣಾಶ್ಚ ಅರ್ಥಸಙ್ಕೇತಪರಿಚ್ಛಿನ್ನಾ ಏತಾವನ್ತ ಏವಂಕ್ರಮಪ್ರಯುಕ್ತಾ ಇತ್ಯೇವಂ ತದಭಿವ್ಯಙ್ಗ್ಯಃ ಶಬ್ದಃ ಪದಂ ವಾಕ್ ಇತ್ಯುಚ್ಯತೇ । "ಅಕಾರೋ ವೈ ಸರ್ವಾ ವಾಕ್ ಸೈಷಾ ಸ್ಪರ್ಶಾನ್ತಸ್ಥೋಷ್ಮಭಿರ್ವ್ಯಜ್ಯಮಾನಾ ಬಹ್ವೀ ನಾನಾರೂಪಾ ಭವತಿ" (ಐ. ಆ. ೨-೩-೬) ಇತಿ ಶ್ರುತೇಃ । ಮಿತಮ್ ಅಮಿತಂ ಸ್ವರಃ ಸತ್ಯಾನೃತೇ ಏವ ವಿಕಾರೋ ಯಸ್ಯಾಃ ತಯಾ ವಾಚಾ ಪದತ್ವೇನ ಪರಿಚ್ಛಿನ್ನಯಾ ಕರಣಗುಣವತ್ಯಾ ಅನಭ್ಯುದಿತಮ್ ಅಪ್ರಕಾಶಿತಮ್, ಅನಭ್ಯುಕ್ತಮ್ । ಯೇನ ಬ್ರಹ್ಮಣಾ ವಿವಕ್ಷಿತೇ ಅರ್ಥೇ ಸಕರಣಾ ವಾಕ್ ಅಭ್ಯುದ್ಯತೇ ಚೈತನ್ಯಜ್ಯೋತಿಷಾ ಪ್ರಕಾಶ್ಯತೇ । ಪ್ರಯುಜ್ಯತೇ ಇತ್ಯೇತತ್ । "ಯದ್ವಾಚೋ ಹ ವಾಕ್" (೧-೨) ಇತ್ಯುಕ್ತಮ್ । "ವದನ್ ವಾಕ್" (ಬೃ ೧-೪-೭) "ಯೋ ವಾಚಮನ್ತರೋಯಮಯತಿ" (ಬೃ. ೩-೭-೧೦) ಇತ್ಯಾದಿ ಚ **ವಾಜಸನೇಯಕೇ** । "ಯಾ ವಾಕ್ ಪುರುಷೇಷು ಸಾ ಘೋಷೇಷು ಪ್ರತಿಷ್ಠಿತಾ ಕಶ್ಚಿತ್ ತಾಂ ವೇದ ಬ್ರಾಹ್ಮಣಃ" ಇತಿ ಪ್ರಶ್ನಮ್ ಉತ್ಪಾದ್ಯ ಪ್ರತಿವಚನಮುಕ್ತಮ್ "ಸಾ ವಾಗ್ ಯಯಾ ಸ್ವಪ್ನೇ ಭಾಷತೇ" (?) ಇತಿ । ಸಾ ಹಿ ವಕ್ತುರ್ವಕ್ತಿಃ ನಿತ್ಯಾ ವಾಕ್ ಚೈತನ್ಯಜ್ಯೋತಿಃಸ್ವರೂಪಾ । "ನ ಹಿ ವಕ್ತುರ್ವಕ್ತೇರ್ವಿಪರಿಲೋಪೋ ವಿದ್ಯತೇ" (ಬೃ. ೪-೩-೨೬) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಹೀಗೆಂದು ಶಂಕಿಸಬೇಡ ಚೈತನ್ಯಮಾತ್ರವಾದ ಇರವಿನ[1] ಯಾವದು ವಾಕ್ಕಿನಿಂದ—ವಾಕ್ಕು ಎಂದರೆ **ನಾಲಗೆಯ ಬುಡವೇ ಮುಂತಾದ ಎಂಟು ಸ್ಥಾನಗ**

---

1. ಬ್ರಹ್ಮಸ್ವರೂಪವೇ ವಾಕ್ಕಿಗೆ ನಿಜವಾದ ಇರವು.

ಳಲ್ಲಿ[1] ಸೇರಿಕೊಂಡು ವರ್ಣಗಳನ್ನು ತೋರುವಂತೆ ಮಾಡುತ್ತಾ[2] ಇರುವ ಅಗ್ನಿ ದೇವತಾಕವಾದ[3] ಕರಣವು. ಮತ್ತು ಅರ್ಥಸಂಕೇತದಿಂದ[4] ಗೊತ್ತಾಗಿ ಇಂತಿಷ್ಟು ವರ್ಣಗಳು ಈ ಕ್ರಮದಲ್ಲಿರಬೇಕು-ಎಂಬೀ ಪರಿಯಾಗಿ[5] ಆ ಕರಣದಿಂದ ವ್ಯಕ್ತ ವಾಗುವ ಶಬ್ದವಾದ ಪದವೂ ವಾಕ್ಕು ಎನಿಸುತ್ತದೆ.'' ಅಕಾರವೇ ಎಲ್ಲಾ ವಾಕ್ಕು, ಆ ಈ (ವಾಕ್ಕು) ಸ್ಪರ್ಶಗಳು[6] ಅಂತಸ್ಥಗಳು, ಊಷ್ಮಗಳು—ಇವುಗಳಿಂದ ವ್ಯಕ್ತವಾಗಿ ಬಹುವಾಗಿಯೂ ನಾನಾರೂಪವಾಗಿಯೂ ಆಗುತ್ತದೆ.'' (ಐ. ಆ. ೨-೩-೬) ಎಂಬ **ಶ್ರುತಿಯು** ಇದಕ್ಕೆ ಪ್ರಮಾಣವು. ಮಿತ,[7] ಅಮಿತ, ಸ್ವರ, ಸತ್ಯ, ಅನೃತ-ಎಂಬುದು ಯಾವದರ ವಿಕಾರವೋ, ಆ ಪದರೂಪದಿಂದ ಪರಿಚ್ಛಿನ್ನವಾದ ಕರಣಗುಣದಿಂದೊಡ ಗೂಡಿರುವ[8] ವಾಕ್ಕಿನಿಂದ (ಯಾವ ಬ್ರಹ್ಮವು) ಹೇಳಲ್ಪಡುವದಿಲ್ಲವೋ, ಬೆಳಗಲ್ಪಡು ವದಿಲ್ಲವೋ, ಇಂಥದ್ದೆಂದು ತಿಳಿಸಲ್ಪಡುವದಿಲ್ಲವೋ; ಯಾವ ಬ್ರಹ್ಮದಿಂದ ಹೇಳ ಬೇಕೆಂದೆಳಸಿರುವ ವಿಷಯದಲ್ಲಿ ಕರಣಸಹಿತವಾದ ವಾಕ್ಕು ಹೇಳಲ್ಪಡುವದೋ ಎಂದರೆ

---

1. ಎದೆ, ಕೊರಳು, ತಲೆ, ನಾಲಗೆಯ ಬುಡ, ಹಲ್ಲು, ಮೂಗು, ತುಟಿ, ದವಡೆ— ಎಂಬ ಎಂಟು (ಟೀ||). ಛಾ. ೭-೨-೧ ನೋಡಿ ಈ ಎರಡು ಕಡೆಯಲ್ಲಿಯೂ ಜಿಹ್ವಾಮೂಲಾದಿ ಎಂದೇ ಇದೆ. ಆದಕ್ಕೆ ಮೂಲವು ಬೇರೆ ಯಾವದೋ ಒಂದು ವಾಕ್ಯವಾಗಿರಬೇಕೆಂದು ತೋರುತ್ತದೆ.

2. ''ತದಭಿವ್ಯಂಗ್ಯ'' ಎಂದರೆ ವರ್ಣಗಳಿಂದ ತೋರುವ ಸ್ಫೋಟವೆಂದು (ಟೀ||) ವ್ಯಾಖ್ಯಾನಮಾಡಿರುವದು ಈ ಭಾಷ್ಯಕ್ಕೂ ಸೂ. ಭಾ. ೧-೩-೨೮ಕ್ಕೂ ವಿರುದ್ಧವಾಗಿದೆ.

3 ಅಗ್ನಿಯೇ ವಾಕ್ಕಿಗೆ ದೇವತೆಯೆಂದು ವೈದಿಕಪ್ರಸಿದ್ಧಿ.

4. ಈ ಮಾತಿನ ಅರ್ಥವು ಸ್ಪಷ್ಟವಾಗಿರುವದಿಲ್ಲ.

5. ಇಂತಿಷ್ಟು ವರ್ಣಗಳು ಈ ಕ್ರಮದಲ್ಲಿದ್ದರೆ ಇಂಥ ವಸ್ತುವನ್ನು ಹೇಳುವ ಶಬ್ದವಾಗು ವದು ಎಂಬ ನಿಯಮವಿದೆ.

6. ಸ್ಪರ್ಶಗಳು ಕಾದಿವರ್ಗೀಯವ್ಯಂಜನಗಳು, ಅಂತಸ್ಥಗಳೆಂದರೆ ಯ ರ ಲ ವಗಳು, ಊಷ್ಮಗಳೆಂದರೆ ಶ ಷ ಸ ಹಗಳು (ಟೀ||). ಇಲ್ಲಿ ಕೊಟ್ಟಿರುವ ಐತರೇಯಾರಣ್ಯಕಶ್ರುತಿಯಲ್ಲಿ ಸೈಷಾ ಸ್ಪರ್ಶೋಷ್ಮಭಿರ್ವ್ಯಜ್ಯಮಾನಾ ಎಂದಿಷ್ಟೇ ಇದೆ 'ಅನ್ತಸ್ಥ'' ಎಂಬ ಮಾತಿಲ್ಲ. ಇದೂ ಇರಬೇಕೆಂದು ಆಚಾರ್ಯರು ಅರ್ಥಕ್ಕಾಗಿ ಇಲ್ಲಿ ಬರೆದುಕೊಂಡಿರುವರೋ, ಬರೆದವರು ಸೇರಿ ಸಿರುವರೋ ತಿಳಿಯದು. ಸ್ಪರ್ಶಾದಿಗಳ ಸಂಬಂಧದಿಂದ ಅಕಾರರೂಪವಾದ ವಾಕ್ಕೇ ಬಹು ವಾಗುವದು, ಆ ಅನೇಕ ವರ್ಣಗಳು ಒಂದಕ್ಕಿಂತ ಒಂದು ವಿಲಕ್ಷಣವಾಗಿರುವವು-ಎಂದು ಶ್ರುತಿಯ ತಾತ್ಪರ್ಯ.

7. ಮಿತವೆಂದರೆ ಪಾದಕ್ಕೆ ಇಷ್ಟು ಅಕ್ಷರಗಳೆಂದು ಗೊತ್ತಾಗಿರುವ ಋಕ್ಕು ಮುಂತಾ ದವು; ಅಮಿತವೆಂದರೆ ಅನಿಯತಾಕ್ಷರವುಳ್ಳ ಯಜುರಾದಿಗಳು; ಸಾಮವೂ ಸಾಮಸಂಧಿಯೂ ಸ್ವರವು; ಸತ್ಯವೆಂದರೆ ಓಂಕಾರವು; ಅನೃತವೆಂದರೆ ಇಲ್ಲವೆಂಬರ್ಥದ ನಕಾರವು. ಈ ಐದೂ ವಾಕ್ಕಿನ ವಿಕಾರವು. (ಐ ಆ. ೨-೩-೬)

೮. ವಾಕ್ಕು ವರ್ಣಾತ್ಮಕವಾಗಿರುವದಲ್ಲದೆ ಧ್ವನ್ಯಾತ್ಮಕವಾಗಿಯೂ ಇರುತ್ತದೆ. ಕರಣದ ಗುಣವೆಂದರೆ ವಾಗಿಂದ್ರಿಯದ ವಿಷಯವಾಗಿರುವ ಶಬ್ದ; ವಾಕ್ಕು ಶಬ್ದಾತ್ಮಕವಾಗಿಯೇ ಇರು ತ್ತದೆ.

ಚೈತನ್ಯದ ಬೆಳಕಿನಿಂದ ಬೆಳಗಲ್ಪಡುವದೋ, (ವ್ಯಾಪಾರವಾಡುವಂತೆ) ಪ್ರೇರಿಸಲ್ಪಡುವದೋ [1] ಎಂದರ್ಥ. "(ಅದು) ವಾಕ್ಕಿಗೂ ವಾಕ್ಕಾಗಿರುವದರಿಂದ" (೧-೨) ಎಂದು ಹಿಂದೆಯೇ ಹೇಳಿರುತ್ತದೆ. "ಮಾತನಾಡುವಾಗ ವಾಕ್ಕೆನಿಸುವನು" (ಬೃ. ೧-೪-೭), "ಯಾವನು ವಾಕ್ಕನ್ನು ಒಳಗಿದ್ದುಕೊಂಡು ಆಳವಿನಲ್ಲಿಟ್ಟುಕೊಂಡಿರುವನೋ" (ಬೃ. ೩-೭-೧೭) ಎಂದು ಮುಂತಾಗಿ **ವಾಜಸನೇಯಕ**ದಲ್ಲಿಯೂ ಇರುತ್ತದೆ. "ಪುರುಷನಲ್ಲಿ ಯಾವ ವಾಕ್ಕಿರುವದೋ ಅದು ಘೋಷಗಳಲ್ಲಿ [2] ನಿಂತಿರುವದು, ಅದನ್ನು ಯಾವ ಬ್ರಾಹ್ಮಣನು ಅರಿತಿರುವನು?" ಎಂದು ಪ್ರಶ್ನೆಯನ್ನು ಹಾಕಿಕೊಂಡು "ಯಾವದರಿಂದ ಸ್ವಪ್ನದಲ್ಲಿ ಮಾತನಾಡುವನೋ ಅದೇ ವಾಕ್ಕು" (?) [3] ಎಂದು ಉತ್ತರವನ್ನು ಹೇಳಿರುತ್ತದೆ. ಏಕೆಂದರೆ ಮಾತನಾಡುವವನ ಆ ವಾಕ್ಕು[4] ಚೈತನ್ಯಜ್ಯೋತಿಯ ಸ್ವರೂಪವಾಗಿರುವದರಿಂದ ನಿತ್ಯವಾಗಿರುತ್ತದೆ. "ಮಾತನಾಡುವಾತನ ವಾಕ್ಕಿಗೆ ಲೋಪವೆಂಬುದು ಇಲ್ಲವೇ ಇಲ್ಲ" (ಬೃ. ೪-೩-೨೬) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು.

(ಭಾಷ್ಯ)

೩೨. ತದೇವ ಆತ್ಮಸ್ವರೂಪಂ ಬ್ರಹ್ಮ ನಿರತಿಶಯಂ ಭೂಮಾಖ್ಯಂ ಬೃಹತ್ತ್ವಾದ್ ಬ್ರಹ್ಮ ಇತಿ ವಿದ್ಧಿ ವಿಜಾನೀಹಿ ತ್ವಮ್ । ಯೈ ರ್ವಾಗಾದ್ಯುಪಾಧಿಭಿಃ 'ವಾಚೋ ಹ ವಾಕ್' 'ಚಕ್ಷುಷಶ್ಚಕ್ಷುಃ' 'ಶ್ರೋತ್ರಸ್ಯ ಶ್ರೋತ್ರಮ್' 'ಮನಸೋ ಮನಃ' 'ಕರ್ತಾ' 'ಭೋಕ್ತಾ' 'ವಿಜ್ಞಾತಾ' 'ನಿಯನ್ತಾ' 'ಪ್ರಶಾಸಿತಾ' 'ವಿಜ್ಞಾನಮಾನನ್ದಂ ಬ್ರಹ್ಮ'–ಇತ್ಯೇವಮಾದಯಃ ಸಂವ್ಯವಹಾರಾ ಅಸಂವ್ಯವಹಾರ್ಯೇ ನಿರ್ವಿಶೇಷೇ ಪರೇ ಸಾಮ್ಯೇ ಬ್ರಹ್ಮಣಿ ಪ್ರವರ್ತನ್ತೇ ತಾನ್ ವ್ಯುದಸ್ಯ ಆತ್ಮಾನಮೇವ ನಿರ್ವಿಶೇಷಂ ಬ್ರಹ್ಮ ವಿದ್ಧಿ–ಇತಿ ಏವಶಬ್ದಾರ್ಥಃ ॥

(ಭಾಷ್ಯಾರ್ಥ)

ಆ ಆತ್ಮಸ್ವರೂಪವೇ ಬ್ರಹ್ಮವು, (ತನಗೆ) ಮಿಗಿಲಿಲ್ಲದ **ಭೂಮಾ** [5] ಎಂಬ ಹೆಸರಿನ (ತತ್ತ್ವವು), (ಎಲ್ಲಕ್ಕಿಂತಲೂ) ದೊಡ್ಡದಾದ್ದರಿಂದ ಬ್ರಹ್ಮವು–ಎಂದು ನೀನು

---

1 ಈ ಮಂತ್ರದಿಂದ ಹಿಡಿದು ೯ನೆಯ ಮಂತ್ರವು ಮುಗಿಯುವವರೆಗೂ ಆತ್ಮನಿಂದ ಕರಣವು ಹೇಳಲ್ಪಡುತ್ತದೆ, ಅರಿಯಲ್ಪಡುತ್ತದೆ, ನೋಡಲ್ಪಡುತ್ತದೆ, ಕೇಳಲ್ಪಡುತ್ತದೆ ಎಂದು ಮುಂತಾಗಿ ಹೇಳಿರುವದಕ್ಕೆ ಆತ್ಮಚೈತನ್ಯಕ್ಕೆ ವಿಷಯವಾಗಿರುತ್ತದೆ ಎಂದಿಷ್ಟೇ ಅರ್ಥ.

2 ವರ್ಣಗಳಲ್ಲಿ.

3. ಇದು ಯಾವ ಶ್ರುತಿಯೆಂಬುದು ತಿಳಿಯದು. ಐ. ಭಾ. ೨-೧ರಲ್ಲಿ ಇಂಥ ಒಂದು ಶ್ರುತಿಯನ್ನು ಉದಾಹರಿಸಿದೆ.

4. ವಾಕ್ಕಿನ ತಿರುಳು. ಇಲ್ಲಿ ಮಾತನಾಡುವವನೂ ಅವನ ವಾಕ್ಕೂ ಎರಡೂ ಚೈತನ್ಯರೂಪವೆಂದೇ ತಿಳಿಯಬೇಕು. ಸೂರ್ಯನಿಗೂ ಅವನ ಬೆಳಕಿಗೂ ಅಭೇದವಿರುವಂತೆ ಇವೆರಡಕ್ಕೂ ಅಭೇದವಿರುತ್ತದೆ.

5. ಛಾ. ೭-೨೪-೧.

ತಿಳಿ, ಅರಿತುಕೊ. ಯಾವ ವಾಕ್ಕೇ ಮುಂತಾದ ಉಪಾಧಿಗಳಿಂದ 'ವಾಕ್ಕಿಗೆ ವಾಕ್ಕು', 'ಚಕ್ಷುಸ್ಸಿಗೆ ಚಕ್ಷುಸ್ಸು', 'ಶ್ರೋತ್ರಕ್ಕೆ ಶ್ರೋತ್ರವು', 'ಮನಸ್ಸಿಗೆ ಮನಸ್ಸು' 'ಕರ್ತನು', 'ಭೋಕ್ತನು', 'ವಿಜ್ಞಾತನು', 'ಕಟ್ಟಿನಲ್ಲಿಡುವಾತನು, 'ಆಳುವವನು', 'ವಿಜ್ಞಾನವೂ ಆನಂದವೂ ಆಗಿರುವ ಬ್ರಹ್ಮವು'–ಎಂದು ಮುಂತಾದ ವ್ಯವಹಾರಗಳು[1] ಯಾವ ವ್ಯವಹಾರಕ್ಕೂ ವಿಷಯವಲ್ಲದ ಯಾವ ವಿಶೇಷಗಳೂ ಇಲ್ಲದ, ಹೆಚ್ಚಿನ ಸಮತಾರೂಪವಾದ ಬ್ರಹ್ಮದಲ್ಲಿ ಉಂಟಾಗುತ್ತಿರುವವೋ ಆ (ಉಪಾಧಿಗಳನ್ನು) ತಳ್ಳಿಹಾಕಿ ನಿರ್ವಿಶೇಷನಾದ ಆತ್ಮನನ್ನೇ ಬ್ರಹ್ಮವೆಂದು ತಿಳಿ ಎಂಬುದು ಏವ ಎಂಬ (ಅವಧಾರಣೆಯ) ಶಬ್ದದ ಅರ್ಥವು.

(ಭಾಷ್ಯ)

೩೩. ನೇದಂ ಬ್ರಹ್ಮ ಯದ್ 'ಇದಮ್' ಇತಿ ಉಪಾಧಿಭೇದವಿಶಿಷ್ಟಮ್ ಅನಾತ್ಮ ಈಶ್ವರಾದಿ ಉಪಾಸತೇ ಧ್ಯಾಯನ್ತಿ । "ತದೇವ ಬ್ರಹ್ಮ ತ್ವಂ ವಿದ್ಧಿ" ಇತ್ಯುಕ್ತೇಽಪಿ 'ನೇದಂ ಬ್ರಹ್ಮ' ಇತ್ಯನಾತ್ಮನೋಽಬ್ರಹ್ಮತ್ವಂ ಪುನರುಚ್ಯತೇ ನಿಯಮಾರ್ಥಮ್, ಅನ್ಯಬ್ರಹ್ಮಬುದ್ಧಿಪರಿಸಙ್ಖ್ಯಾನಾರ್ಥಂ ವಾ ॥

(ಭಾಷ್ಯಾರ್ಥ)

ಯಾವದನ್ನು 'ಇದು' ಎಂದು[2] ಬೇರೆಬೇರೆ ಉಪಾಧಿಗಳಿಂದೊಡಗೂಡಿದ ಆತ್ಮನಲ್ಲದ **ಈಶ್ವರನೇ** ಮುಂತಾದದ್ದನ್ನು (ಜನರು) ಉಪಾಸನೆ ಮಾಡುತ್ತಾರೋ (ಆ) ಇದು ಬ್ರಹ್ಮವಲ್ಲ.[3] 'ಅದನ್ನೇ ಬ್ರಹ್ಮವೆಂದು ತಿಳಿ' ಎಂದು ಹೇಳಿದ ಮೇಲೂ 'ಇದು ಬ್ರಹ್ಮವಲ್ಲ' ಎಂದು ಆತ್ಮನಲ್ಲದ್ದನ್ನು ಬ್ರಹ್ಮವಲ್ಲವೆಂದು ಮತ್ತೂ ಹೇಳಿರುವದು ನಿಯಮಮಾಡುವದಕ್ಕೆ[4], ಅಥವಾ ಮತ್ತೊಂದು ಬ್ರಹ್ಮವೆಂಬ ಬುದ್ಧಿಯನ್ನು ತೆಗೆದುಹಾಕುವದಕ್ಕೆ.[5] ॥ ೫ ॥

---

1. ಆತ್ಮನನ್ನು ವಾಕ್ಕು, ಚಕ್ಷುಸ್ಸು–ಎಂದು ಮುಂತಾಗಿ ಕರೆಯುವದು ಆಯಾ ಉಪಾಧಿಯಿಂದಲೇ; ವಿಜ್ಞಾನ, ಆನಂದ' ಎಂದು ವಿಧಿರೂಪವಾಗಿ ಕರೆದಿರುವದೂ ಉಪಾಧಿಯಿಂದಲೇ ನಿರುಪಾಧಿಕವಾದ ಆತ್ಮರೂಪವೇ ಬ್ರಹ್ಮದ ನಿಜವಾದ ಸ್ವರೂಪವು.

2. ಇದು ಎಂದು ವಿಷಯವಾಗಿ ಮಾಡಿಕೊಂಡು ಎಂದರ್ಥ.

3. ಬ್ರಹ್ಮದ ನಿಜವಾದ ಸ್ವರೂಪವಲ್ಲ ಎಂದರ್ಥ.

4. ಅದು ಬ್ರಹ್ಮವು, ಇದು ಬ್ರಹ್ಮವಲ್ಲ–ಎಂದು ಎರಡನ್ನೂ ವಿಂಗಡಿಸಿಹೇಳುವದಕ್ಕೆ ಶ್ರುತಿ ಬಂದಿರುವದಿಲ್ಲ. ಏಕೆಂದರೆ ಅದು ಬ್ರಹ್ಮವು ಎಂದರೆ ಮತ್ತೊಂದಲ್ಲ ಎಂಬುದು ತಾನೇ ಏರ್ಪಡುತ್ತದೆ. ಯಾವ ಕರಣಕ್ಕೂ ವಿಷಯವಲ್ಲದೆ ಆತ್ಮನೇ ಬ್ರಹ್ಮವೆಂದು ತಿಳಿ ಎಂದು ನಿಯಮವಾಗಿ ಹೇಳುವದೇ ಇಲ್ಲಿ ಬೇಕಾಗಿರುವದು.

5 ಆತ್ಮನೂ ಬ್ರಹ್ಮವು ಆತ್ಮನಲ್ಲದ್ದೂ ಬ್ರಹ್ಮವು ಎಂದು ತಿಳಿಯಬಾರದು ಎಂದು ಅನಾತ್ಮದಲ್ಲಿ ಬ್ರಹ್ಮಬುದ್ಧಿಯನ್ನು ತೊಲಗಿಸುವದಕ್ಕೆ.

**ಯನ್ಮನಸಾ ನ ಮನುತೇ**
**ಯೇನಾಹುರ್ಮನೋ ಮತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿ**
**ನೇದಂ ಯದಿದಮುಪಾಸತೇ ॥ ೬ ॥**

೬. ಯಾವದನ್ನು ಮನಸ್ಸಿನಿಂದ ಮನನಮಾಡುವದಿಲ್ಲವೋ, ಯಾವದರಿಂದ ಮನಸ್ಸು ಮನನಮಾಡಲ್ಪಡುವದೆಂದು ಹೇಳುವರೋ, ಅದೇ ಬ್ರಹ್ಮವೆಂದು ನೀನು ತಿಳಿ. ಯಾವದನ್ನು ಇದೆಂದು ಉಪಾಸನೆಮಾಡುತ್ತಾರೋ ಇದು ಬ್ರಹ್ಮವಲ್ಲ.

(ಭಾಷ್ಯ)

೩೪. ' ಯನ್ಮನಸಾ ನ ಮನುತೇ ' । ಮನ ಇತ್ಯನ್ತಃಕರಣಂ ಬುದ್ಧಿಮನಸೋರೇಕತ್ವೇನ ಗೃಹ್ಯತೇ । ಮನುತೇಽನೇನೇತಿ ಮನಃ ಸರ್ವಕರಣಸಾಧಾರಣಮ್ । ಸರ್ವವಿಷಯವ್ಯಾಪಕತ್ವಾತ್ । " ಕಾಮಃ ಸಙ್ಕಲ್ಪೋ ವಿಚಿಕಿತ್ಸಾ ಶ್ರದ್ಧಾಶ್ರದ್ಧಾ ಧೃತಿರಧೃತಿರ್ಹ್ರೀರ್ಧೀರ್ಭೀರಿತ್ಯೇವಂ ಸರ್ವಂ ಮನ ಏವ " (ಬೃ. ೧-೫-೩) ಇತಿ ಶ್ರುತೇಃ ಕಾಮಾದಿವೃತ್ತಿಮನ್ಮನಃ । ತೇನ ಮನಸಾ ಯತ್ ಚೈತನ್ಯಜ್ಯೋತಿರ್ಮನಸೋಽವಭಾಸಕಂ ನ ಮನುತೇ ನ ಸಙ್ಕಲ್ಪಯತಿ ನಾಪಿ ನಿಶ್ಚಿನೋತಿ ಲೋಕಃ । ಮನಸೋಽವಭಾಸಕತ್ವೇನ ನಿಯನ್ತೃತ್ವಾತ್ । ಸರ್ವವಿಷಯಂ ಪ್ರತಿ ಪ್ರತ್ಯಗೇವ ಇತಿ ಸ್ವಾತ್ಮನಿ ನ ಪ್ರವರ್ತತೇಽನ್ತಃಕರಣಮ್ । ಅನ್ತಸ್ಥೇನ ಹಿ ಚೈತನ್ಯಜ್ಯೋತಿಷಾ ಅವಭಾಸಿತಸ್ಯ ಮನಸೋ ಮನನಸಾಮರ್ಥ್ಯಮ್ ॥

(ಭಾಷ್ಯಾರ್ಥ)

" ಯಾವದನ್ನು ಮನಸ್ಸಿನಿಂದ ಮನನಮಾಡುವದಿಲ್ಲವೋ " : (ಇಲ್ಲಿ) ಮನಸ್ಸು ಎಂದರೆ ಬುದ್ಧಿ, ಮನಸ್ಸು ಈ ಎರಡನ್ನೂ [1] ಒಂದುಗೂಡಿಸಿದ **ಅಂತಃಕರಣ**ವನ್ನು ತೆಗೆದುಕೊಳ್ಳಬೇಕು ಯಾವದರಿಂದ ಮನನಮಾಡುತ್ತಾರೋ ಅದು ಮನಸ್ಸು, (ಈ ಮನಸ್ಸು) ಎಲ್ಲಾ ಕರಣಗಳಿಗೂ ಸಮಾನವಾಗಿರುವದು, ಏಕೆಂದರೆ (ಇದು) ಎಲ್ಲಾ ವಿಷಯುಗಳನ್ನೂ ವ್ಯಾಪಿಸಿಕೊಂಡಿರುತ್ತದೆ. [2] " ಕಾಮ, ಸಂಕಲ್ಪ, ಸಂಶಯ, ಶ್ರದ್ಧೆ, ಅಶ್ರದ್ಧೆ, ಧೈರ್ಯ, ಅಧೈರ್ಯ, ನಾಚಿಕೆ, ಹೆದರಿಕೆ–ಇವೆಲ್ಲವೂ ಮನಸ್ಸೇ " (ಬೃ. ೧-೫-೩) ಎಂಬ ಶ್ರುತಿಯ ಪ್ರಮಾಣದಿಂದ ಮನಸ್ಸು ಕಾಮವೇ

---

1. ನಿಶ್ಚಯವೃತ್ತಿಗೆ ಬುದ್ಧಿ ಎಂದೂ ಸಂಕಲ್ಪವೃತ್ತಿಗೆ ಮನಸ್ಸೆಂದೂ ಹೆಸರು. ಈ ಎರಡೂ ಸೇರಿದ ಅಂತಃಕರಣವನ್ನೇ ಇಲ್ಲಿ ಮನಸ್ಸೆಂದು ಕರೆದಿದೆ.

2. ಅಂತಃಕರಣದ ಸಂಬಂಧವಿಲ್ಲದೆ ಯಾವ ಇಂದ್ರಿಯವೂ ತನ್ನ ವಿಷಯವನ್ನು ಬೆಳಗಲಾರದು.

**ಯಚ್ಛ್ರೋತ್ರೇಣ ನ ಶೃಣೋತಿ**
**ಯೇನ ಶ್ರೋತ್ರಮಿದಗ್ಂ ಶ್ರುತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿ**
**ನೇದಂ ಯದಿದಮುಪಾಸತೇ ॥ ೮ ॥**

೮. ಯಾವದನ್ನು ಶ್ರೋತ್ರದಿಂದ ಕೇಳುವದಿಲ್ಲವೋ ಯಾವದರಿಂದ ಈ ಶ್ರೋತ್ರವು ಕೇಳಲ್ಪಡುವದೋ ಅದನ್ನೇ ಬ್ರಹ್ಮವೆಂದು ತಿಳಿ; ಯಾವದನ್ನು ಇದೆಂದು ಉಪಾಸನೆಮಾಡುತ್ತಾರೋ ಇದು ಬ್ರಹ್ಮವಲ್ಲ.

(ಭಾಷ್ಯ)

೩೭. ಯತ್ ಶ್ರೋತ್ರೇಣ ನ ಶೃಣೋತಿ ದಿಗ್ದೇವತಾಧಿಷ್ಠಿತೇನ ಆಕಾಶಕಾರ್ಯೇಣ ಮನೋವೃತ್ತಿಸಂಯುಕ್ತೇನ ನ ವಿಷಯೀಕರೋತಿ ಲೋಕಃ । ಯೇನ ಶ್ರೋತ್ರಮಿದಂ ಯತ್ಪ್ರಸಿದ್ಧಂ ಚೈತನ್ಯಾತ್ಮಜ್ಯೋತಿಷಾ ವಿಷಯೀಕೃತಮ್ । ತದೇವೇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಯಾವದನ್ನು ಶ್ರೋತ್ರದಿಂದ ಕೇಳುವದಿಲ್ಲವೋ, ದಿಕ್ಕೆಂಬ ಅಭಿಮಾನದೇವತೆಯಿಂದ ಆಳಲ್ಪಟ್ಟು[1] ಆಕಾಶದ ಕಾರ್ಯವಾಗಿ ಮನಸ್ಸಿನ ವೃತ್ತಿಯಿಂದೊಡಗೂಡಿರುವ (ಶ್ರೋತ್ರೇಂದ್ರಿಯದಿಂದ) ಜನರು ವಿಷಯೀಕರಿಸಲಾರರೋ, ಈ ಪ್ರಸಿದ್ಧವಾದ ಶ್ರೋತ್ರವು ಯಾವ ಚೈತನ್ಯರೂಪವಾದ ಬೆಳಕಿನಿಂದ ವಿಷಯೀಕರಿಸಲ್ಪಡುತ್ತಿರುವದೋ (ಎಂದರ್ಥ). "ಅದನ್ನೇ (ಬ್ರಹ್ಮವೆಂದು ತಿಳಿ)" ಎಂದು ಮುಂತಾದ್ದನ್ನು ಹಿಂದಿನಂತೆಯೇ (ವ್ಯಾಖ್ಯಾನಮಾಡಿಕೊಳ್ಳಬೇಕು).

**ಯತ್ ಪ್ರಾಣೇನ ನ ಪ್ರಾಣಿತಿ**
**ಯೇನ ಪ್ರಾಣಃ ಪ್ರಣೀಯತೇ ।**
**ತದೇವ ಬ್ರಹ್ಮ ತ್ವಂ ವಿದ್ಧಿ**
**ನೇದಂ ಯದಿದಮುಪಾಸತೇ ॥ ೯ ॥**

೯. ಯಾವದನ್ನು ಪ್ರಾಣದಿಂದ ಮೂಸುವದಿಲ್ಲವೋ ಯಾವದರಿಂದ ಪ್ರಾಣವು ಕಳುಹಿಸಲ್ಪಡುವದೋ ಅದನ್ನೇ ಬ್ರಹ್ಮವೆಂದು ನೀನು ತಿಳಿ; ಯಾವದನ್ನು ಇದೆಂದು ಉಪಾಸನೆಮಾಡುತ್ತಾರೋ ಇದು ಬ್ರಹ್ಮವಲ್ಲ.

---

1. ಪ್ರತಿಯೊಂದು ಇಂದ್ರಿಯಕ್ಕೂ ಅದರದರ ವ್ಯಾಪಾರವನ್ನು ಆಳುವ ಒಂದೊಂದು ದೇವತೆಯಿರುತ್ತದೆ. ಪ್ರತಿಯೊಂದು ಇಂದ್ರಿಯವೂ ತನತನಗೆ ವಿಷಯವಾಗಿರುವ ಭೂತದ ಕಾರ್ಯವೇ ಆಗಿರುವದು; ಪ್ರತಿಯೊಂದು ಇಂದ್ರಿಯಕ್ಕೂ ಅಂತಃಕರಣದ ಸಹಾಯವು ಬೇಕಾಗಿರುವದು-ಎಂಬುದನ್ನು ಇಲ್ಲಿರುವ ವರ್ಣನೆಯಿಂದ ತಿಳಿದುಕೊಳ್ಳಬೇಕು.

(ಭಾಷ್ಯ)

೩೮. ಯತ್ ಪ್ರಾಣೇನ ಘ್ರಾಣೇನ ಪಾರ್ಥಿವೇನ ನಾಸಿಕಾಪುಟಾನ್ತರವಸ್ಥಿತೇನ ಅನ್ತಃಕರಣಪ್ರಾಣವೃತ್ತಿಭ್ಯಾಂ ಸಹಿತೇನ ನ ಪ್ರಾಣಿತಿ ಗನ್ಧವತ್ ನ ವಿಷಯೀಕರೋತಿ, ಯೇನ ಚೈತನ್ಯಾತ್ಮಜ್ಯೋತಿಷಾ ಅವಭಾಸ್ಯತ್ವೇನ ಸ್ವವಿಷಯಂ ಪ್ರತಿ ಪ್ರಾಣಃ ಪ್ರಣೀಯತೇ । ತದೇವೇತ್ಯಾದಿ ಸರ್ವಂ ಸಮಾನಮ್ ॥

(ಭಾಷ್ಯಾರ್ಥ)

ಯಾವದನ್ನು ಪ್ರಾಣದಿಂದ ಅಂದರೆ ಪೃಥ್ವಿಯ ಕಾರ್ಯವಾಗಿಯೂ, ಮೂಗಿನ ಸೊಳ್ಳೆಯೊಳಗೆ ಇರುವದಾಗಿಯೂ ಅಂತಃಕರಣ, ಪ್ರಾಣ–ಇವೆರಡರ[1] ವೃತ್ತಿಗಳಿಂದೊಡಗೂಡಿದ್ದಾಗಿಯೂ ಇರುವ ಘ್ರಾಣೇಂದ್ರಿಯದಿಂದ ಮೂಸಲಾಗುವದಿಲ್ಲವೋ ಅಂದರೆ ವಾಸನೆಯನ್ನು (ವಿಷಯೀಕರಿಸು)ವಂತೆ ವಿಷಯೀಕರಿಸುವದಾಗುವದಿಲ್ಲವೋ; ಯಾವ ಚೈತನ್ಯರೂಪವಾದ ಬೆಳಕಿನಿಂದ ಬೆಳಗಲ್ಪಡುವದರಿಂದ (ಈ) ಪ್ರಾಣವು ತನ್ನ ವಿಷಯದ ಕಡೆಗೆ ಕಳುಹಿಸಲ್ಪಡುತ್ತಿರುವದೋ (ಎಂದರ್ಥ). "ಅದೇ (ಬ್ರಹ್ಮವೆಂದು ನೀನು ತಿಳಿ)" ಎಂದು ಮುಂತಾಗಿರುವದೆಲ್ಲವೂ (ಹಿಂದಿನ ಮಂತ್ರಗಳಿಗೂ ಈ ಮಂತ್ರಕ್ಕೂ) ಸಮಾನವಾಗಿರುತ್ತದೆ.[2]



1. ಘ್ರಾಣೇಂದ್ರಿಯದ ಕೆಲಸಕ್ಕೆ ಅಂತಃಕರಣದ ಮತ್ತು ಪ್ರಾಣದ ಸಹಾಯವು ಬೇಕೆಂಬುದು ಅನುಭವಸಿದ್ಧವು.

2. "ಅದೇ ಬ್ರಹ್ಮವು ಇದು ಎಂದು ಉಪಾಸನೆಮಾಡುವದು ಬ್ರಹ್ಮವಲ್ಲ"-ಎಂಬುದು ಈ ಎಲ್ಲಾ ಮಂತ್ರಗಳಿಗೂ ಸಮಾನವಾಗಿರುತ್ತದೆ. ವಿಷಯವಾದದ್ದು ಯಾವದೂ ಬ್ರಹ್ಮವಲ್ಲ; ಅಂತಃಕರಣವೇ ಮುಂತಾದದ್ದೆಲ್ಲವನ್ನೂ ತನ್ನ ಚೈತನ್ಯದಿಂದ ಬೆಳಗುತ್ತಿರುವ ಆತ್ಮನೇ ಬ್ರಹ್ಮವು ಎಂಬುದು ಈ ಪ್ರಕರಣದ ಒಟ್ಟರ್ಥವು.

# ಎರಡನೆಯ ಖಂಡ

## ಬ್ರಹ್ಮವು ಜ್ಞಾನಕ್ಕೂ ವಿಷಯವಲ್ಲ

(ಭಾಷ್ಯ)

೩೯. ಏವಂ ಹೇಯೋಪಾದೇಯವಿಪರೀತಸ್ತ್ವಮ್ ಆತ್ಮಾ ಬ್ರಹ್ಮ–ಇತಿ ಪ್ರತ್ಯಾಯಿತಃ ಶಿಷ್ಯಃ "ಅಹಮೇವ ಬ್ರಹ್ಮೇತಿ ಸುಷ್ಠು ವೇದಾಹಮ್" ಇತಿ ಮಾ ಗೃಹ್ಣೀಯಾತ್ ಇತ್ಯಾಶಯಾದಾಹಾಚಾರ್ಯಃ ಶಿಷ್ಯಬುದ್ಧಿವಿಚಾಲನಾರ್ಥಮ್-ಯದೀತ್ಯಾದಿ ||

(ಭಾಷ್ಯಾರ್ಥ)

ಹೀಗೆ "ಬಿಡತಕ್ಕದ್ದೂ ತೆಗೆದುಕೊಳ್ಳತಕ್ಕದ್ದೂ ಅಲ್ಲದ ಆತ್ಮನಾದ ನೀನು ಬ್ರಹ್ಮವು" ಎಂದು ತಿಳಿಸಿಕೊಟ್ಟದ್ದರಿಂದ ಶಿಷ್ಯನು "ನಾನೇ ಬ್ರಹ್ಮವೆಂದು ನಾನು ಚೆನ್ನಾಗಿ ಅರಿತುಕೊಂಡೆನು" ಎಂದು ತಿಳಿದುಕೊಳ್ಳದೆ ಇರಲಿ ಎಂಬ ಅಭಿಪ್ರಾಯದಿಂದ[1] ಆಚಾರ್ಯನು ಶಿಷ್ಯನ ಬುದ್ಧಿಯನ್ನು ಅಲುಗಾಡಿಸುವದಕ್ಕಾಗಿ 'ಯದಿ' ಎಂದು ಮುಂತಾಗಿರುವ (ಮುಂದಿನ ವಾಕ್ಯವನ್ನು) ಆಡಿರುತ್ತಾನೆ.

(ಭಾಷ್ಯ)

೪೦. ನನ್ವಿಷ್ಟೈವ "ಸುವೇದಾಹಮ್" ಇತಿ ನಿಶ್ಚಿತಾ ಪ್ರತಿಪತ್ತಿಃ। ಸತ್ಯಮ್ ಇಷ್ಟಾ ನಿಶ್ಚಿತಾ ಪ್ರತಿಪತ್ತಿಃ, ನ ಹಿ ಸುವೇದಾಹಮ್ ಇತಿ। ಯದ್ ಹಿ ವೇದ್ಯಂ ವಸ್ತು ವಿಷಯೀಭವತಿ ತತ್ ಸುಷ್ಠು ವೇದಿತುಂ ಶಕ್ಯಮ್ ದಾಹ್ಯಮಿವ ದಗ್ಧುಮ್ ಅಗ್ನೇರ್ದಗ್ಧುಃ ನ ತ್ವಗ್ನೇಃ ಸ್ವರೂಪಮೇವ। ಸರ್ವಸ್ಯ ಹಿ ವೇದಿತುಃ ಸ್ವಾತ್ಮಾ ಬ್ರಹ್ಮ ಇತಿ ಸರ್ವವೇದಾನ್ತಾನಾಂ ಸುನಿಶ್ಚಿತೋಽರ್ಥಃ। ಇಹ ಚ ತದೇವ ಪ್ರತಿಪಾದಿತಂ ಪ್ರಶ್ನಪ್ರತಿವಚನೋಕ್ತ್ಯಾ "ಶ್ರೋತ್ರಸ್ಯ ಶ್ರೋತ್ರಮ್" (೧-೨) ಇತ್ಯಾದ್ಯಯಾ। "ಯದ್ವಾಚಾನಭ್ಯುದಿತಮ್" (೧-೫) ಇತಿ ಚ ವಿಶೇಷತೋಽವಧಾರಿತಮ್। ಬ್ರಹ್ಮವಿತ್ಸಂಪ್ರದಾಯನಿಶ್ಚಯಶ್ಚೋಕ್ತಃ-"ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ" (೧-೪) ಇತಿ। ಉಪನ್ಯಸ್ತಮುಪಸಂಹರಿಷ್ಯತಿ ಚ "ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್" ಇತಿ। ತಸ್ಮಾದ್ ಯುಕ್ತಮೇವ ಶಿಷ್ಯಸ್ಯ 'ಸುವೇದ' ಇತಿ

---

1. ಇಲ್ಲಿ ನಾವು ಕೊಟ್ಟಿರುವದು (ವಾ||) ಪಾಠವು. ಅಹಮೇವ ಬ್ರಹ್ಮೇತಿ ಸುಷ್ಠು ವೇದಾಹಂ ಮಾಮ್ ಇತಿ ಗೃಹ್ಣೀಯಾತ್ ಇತ್ಯಾಶಙ್ಕ್ಯಾಚಾರ್ಯಃ ಶಿಷ್ಯಬುದ್ಧಿವಿಚಾಲನಾರ್ಥಂ ಯದೀತ್ಯಾಹ-ಎಂಬ (ಆ||) ಪಾಠದಲ್ಲಿ "ನಾನೇ ಬ್ರಹ್ಮವೆಂದು ನನ್ನನ್ನು ನಾನು ಚೆನ್ನಾಗಿ ಅರಿತುಕೊಂಡೆನು ಎಂದುಕೊಂಡಾನೆಂದು ಯೋಚಿಸಿ... .." ಎಂದು ಕನ್ನಡಿಸಬೇಕು.

ಬುದ್ಧಿಂ ನಿರಾಕರ್ತುಮ್ । ನ ಹಿ ವೇದಿತಾ ವೇದಿತುರ್ವೇದಿತುಂ ಶಕ್ಯಃ, ಅಗ್ನಿರಿವ ದಗ್ಧುಮಗ್ನೇಃ । ನ ಚಾನ್ಯೋ ವೇದಿತಾ ಬ್ರಹ್ಮಣೋಽಸ್ತಿ ಯಸ್ಯ ವೇದ್ಯಮ್ ಅನ್ಯತ್ ಸ್ಯಾದ್ಬ್ರಹ್ಮ । "ನಾನ್ಯದತೋಽಸ್ತಿ ವಿಜ್ಞಾತೃ" (ಬೃ. ೩-೮-೧೧) ಇತ್ಯನ್ಯೋ ವಿಜ್ಞಾತಾ ಪ್ರತಿಷಿಧ್ಯತೇ । ತಸ್ಮಾತ್ ಸುಷ್ಠು ವೇದಾಹಂ ಬ್ರಹ್ಮೇತಿ ಪ್ರತಿಪತ್ತಿರ್ಮಿಥ್ಯೈವ । ತಸ್ಮಾದ್ ಯುಕ್ತಮೇವಾಹಾಚಾರ್ಯೋ ಯದೀತ್ಯಾದಿ ॥

(ಭಾಷ್ಯಾರ್ಥ)

(ಆಕ್ಷೇಪ) —ನಾನು "ಚೆನ್ನಾಗಿ ಅರಿತುಕೊಂಡಿರುವೆನು" ಎಂದು ನಿಶ್ಚಿತವಾದ[1] ತಿಳಿವಳಿಕೆಯು ಆಗಬೇಕೆಂಬುದು (ಸಿದ್ಧಾಂತಕ್ಕೂ) ಇಷ್ಟವಲ್ಲವೆ?

(ಪರಿಹಾರ) —ನಿಜ ನಿಶ್ಚಿತವಾದ ತಿಳಿವಳಿಕೆಯಾಗಬೇಕೆಂಬುದು ಇಷ್ಟವೇ. ಆದರೆ "ನಾನು (ಬ್ರಹ್ಮವನ್ನು) ಚೆನ್ನಾಗಿ ಅರಿತುಕೊಂಡೆನು" ಎಂದು (ತಿಳಿವಳಿಕೆಯಾಗ)ಬಾರದು. ಯಾವ ವಸ್ತು ತಿಳಿಯತಕ್ಕದ್ದಾಗಿದ್ದು (ಅರಿವಿಗೆ) ವಿಷಯವಾಗುತ್ತದೆಯೋ ಅದನ್ನು ಚೆನ್ನಾಗಿ[2] ಅರಿಯುವದಕ್ಕೆ ಆಗುತ್ತದೆ, ಸುಡಬಹುದಾದ ವಸ್ತುವನ್ನು ಸುಡುವ ಬೆಂಕಿಯು ಸುಡುವದಕ್ಕೆ ಆಗುವಂತೆಯೇ (ಇದು). ಆದರೆ ಬೆಂಕಿಯ ಸ್ವರೂಪವನ್ನೇ (ಆ ಬೆಂಕಿಯು ಸುಡ)ಲಾರದು.[3] **ಅರಿಯುವಾತನಾದ ಪ್ರತಿಯೊಬ್ಬನಿಗೂ ಬ್ರಹ್ಮವು ತನ್ನ ಆತ್ಮನೇ ಆಗಿರುವದೆಂಬುದು ಸಕಲ ಉಪನಿಷತ್ತುಗಳಲ್ಲಿಯೂ ಸುನಿಶ್ಚಿತವಾದ ವಿಷಯವಾಗಿದೆ.** ಪ್ರಶ್ನೋತ್ತರರೂಪವಾದ ವಾಕ್ಯಗಳಿಂದ "ಶ್ರೋತ್ರಕ್ಕೆ ಶ್ರೋತ್ರವು" (೧-೨) ಎಂದು ಮುಂತಾಗಿರುವ ಶ್ರುತಿಯಿಂದ ಇಲ್ಲಿಯೂ ಆದನ್ನೇ ಹೇಳಿರುತ್ತದೆ. "ಯಾವದು ವಾಕ್ಕಿನಿಂದ ಹೇಳಲ್ಪಡುವದಿಲ್ಲವೋ" (೧-೫) ಎಂದು ವಿಶೇಷವಾಗಿ ಇದನ್ನೇ ಒತ್ತಿ[4] ಹೇಳಿರುತ್ತದೆ. "ಅದು ತಿಳಿಯಲ್ಪಟ್ಟದ್ದಕ್ಕಿಂತಲೂ ಬೇರೆಯೇ ಮತ್ತು ತಿಳಿಯಲ್ಪಡದೆ ಇರುವದಕ್ಕಿಂತಲೂ (ಬೇರೆಯೇ)" (೧-೪) ಎಂದು ಬ್ರಹ್ಮಜ್ಞಾನಿಗಳ ಸಂಪ್ರದಾಯದ ನಿಶ್ಚಯವನ್ನೂ[5] ಹೇಳಿದ್ದಾಗಿದೆ ಹೀಗೆ ಉಪಕ್ರಮವಾಗಿರುವದನ್ನು (ಮುಂದೆ) ಉಪ

1. ಸಂಶಯವಿಪರ್ಯಯಗಳಿಲ್ಲದ 'ಚೆನ್ನಾಗಿ ಅರಿತೆನು' ಎಂಬಲ್ಲಿ 'ಚೆನ್ನಾಗಿ' ಎಂಬ ಮಾತಿಗೆ ಇದೇ ಅಭಿಪ್ರಾಯವೆಂದು ಪೂರ್ವಪಕ್ಷಿಯ ಭಾವ.

2. 'ಜ್ಞಾನಕ್ಕೆ ವಿಷಯವಾಗಿ ಅರಿತುಕೊಂಡೆನು'' ಎಂಬುದೇ ಚೆನ್ನಾಗಿ'' ಎಂಬುದರ ಅಭಿಪ್ರಾಯವೆಂದು ಸಿದ್ಧಾಂತಿಯ ಭಾವ.

3. ಆದರಂತೆ ನಮ್ಮ ಆತ್ಮನಾದ ಬ್ರಹ್ಮವನ್ನು ನಾವೇ ವಿಷಯೀಕರಿಸಿ ಅರಿತುಕೊಳ್ಳುವದು ಆಗಲಾರದು-ಎಂದು ಭಾವ.

4. ವಾಕ್ಕು ಮುಂತಾದವುಗಳಿಗೆ ವಿಷಯವಾಗಿರುವದು ಬ್ರಹ್ಮವಲ್ಲ. ನಿತ್ಯವಿಷಯಿಯಾದ ಆತ್ಮನೇ ಬ್ರಹ್ಮವು ಎಂದು ಒತ್ತಿ ಹೇಳಿರುತ್ತದೆ

5. ಬ್ರಹ್ಮವು ನಮ್ಮ ಆತ್ಮನೇ ಆಗಿರುವದರಿಂದ ಅರಿವಿಗೆ ವಿಷಯವಲ್ಲವೆಂಬುದೇ ಸಂಪ್ರದಾಯದ ನಿಶ್ಚಯವು.

ಸಂಹಾರದಲ್ಲಿಯೂ [3] "ಅರಿಯುವವರಿಗೆ ತಿಳಿಯದೆ ಇರುವದು, ಅರಿಯದವರಿಗೆ ತಿಳಿದಿರುವದು" (೨-೩) ಎಂದು ಹೇಳಿರುತ್ತದೆ. ಆದ್ದರಿಂದ 'ಚೆನ್ನಾಗಿ' ಅರಿತುಕೊಂಡಿರುವೆನು ಎಂಬ ಶಿಷ್ಯನ ತಿಳಿವಳಿಕೆಯನ್ನು ಕಳೆಯುವದು ಯುಕ್ತವೇ. ಬೆಂಕಿಯನ್ನು ಸುಡುವದು ಬೆಂಕಿಗೆ ಹೇಗೆ (ಆಗಲಾರದೋ) ಹಾಗೆ ಅರಿಯುವಾತನನ್ನು ಅರಿಯುವದು ಅರಿಯುವಾತನಿಗೆ ಆಗಲೇ ಆರದು. ಬ್ರಹ್ಮಕ್ಕಿಂತ ಬೇರೆಯಾಗಿ ಅರಿಯುವಾತನೆಂಬುವನೂ ಇರುವದಿಲ್ಲ; ಹಾಗೆ ಇದ್ದಿದ್ದರೆ ಆತನಿಗೆ (ತನಗಿಂತ) ಬೇರೆಯಾದ ಬ್ರಹ್ಮವು ಅರಿಯತಕ್ಕ (ವಿಷಯ)ವಾಗಬಹುದಾಗಿತ್ತು "ಇದಕ್ಕಿಂತ ಬೇರೆಯಾಗಿ ಅರಿಯುವದು ಇಲ್ಲ" (ಬೃ. ೩-೮-೧೧) ಎಂದು (ಶ್ರುತಿಯಲ್ಲಿ ಬ್ರಹ್ಮಕ್ಕಿಂತ) ಬೇರೆಯಾದ ಅರಿಯುವಾತನು ಇಲ್ಲವೆಂದು ಹೇಳಿರುತ್ತದೆ ಆದ್ದರಿಂದ ನಾನು ಬ್ರಹ್ಮವನು ಚೆನ್ನಾಗಿ ಅರಿತುಕೊಂಡಿರುವೆನು" ಎಂಬ ತಿಳಿವಳಿಕೆಯು ತಪ್ಪೇ. ಆದಕಾರಣ 'ಯದಿ' ಎಂದು ಮುಂತಾಗಿರುವ ವಾಕ್ಯವನ್ನು ಹೇಳಿರುವದು ಯುಕ್ತವೇ:

**ಯದಿ ಮನ್ಯಸೇ ಸುವೇದೇತಿ ದಭ್ರನೇವಾಪಿ ನೂನಂ**
**ತ್ವಂ ವೇತ್ಥ ಬ್ರಹ್ಮಣೋ ರೂಪಂ ಯದಸ್ಯ ತ್ವಂ**
**ಯದಸ್ಯ ದೇವೇಷ್ವಥ ನು ಮೀಮಾಂಸ್ಯಮೇವ ತೇ**
**ಮನ್ಯೇ ವಿದಿತಮ್ ॥ ೧ ॥**

೧. (ಇದನ್ನು) ಚೆನ್ನಾಗಿ ಅರಿತುಕೊಂಡಿರುವೆನೆಂದು ನೀನು ಎಣಿಸುವೆಯಾದರೆ ನೀನು ಅರಿತಿರುವ ಈ (ಅಧ್ಯಾತ್ಮ ಬ್ರಹ್ಮದ) ಮತ್ತು ದೇವತೆಗಳಲ್ಲಿರುವ (ಬ್ರಹ್ಮದ) ರೂಪವು ನಿಜವಾಗಿಯೂ ಅಲ್ಪವೇ. ಆದ್ದರಿಂದ ನೀನು ಅರಿತಿರುವದು (ಇನ್ನು) ವಿಚಾರಿಸತಕ್ಕದ್ದೇ (ಆಗಿರುವದು) ಎಂದು ಎಣಿಸುವೆನು.*

(ಭಾಷ್ಯ)

೪೧. ಯದಿ ಕದಾಚಿತ್ ಮನ್ಯಸೇ ಸುವೇದ ಇತಿ ಸುಷ್ಠು ವೇದಾಹಂ ಬ್ರಹ್ಮ ಇತಿ । ಕದಾಚಿತ್ ಯಥಾಶ್ರುತಂ ದುರ್ವಿಜ್ಞೇಯಮಪಿ ಕ್ಷೀಣದೋಷಃ ಸುಮೇಧಾಃ

---

3. ಉಪಕ್ರಮದಲ್ಲಿ ಬ್ರಹ್ಮವು ಜ್ಞಾನಕ್ಕೆ ವಿಷಯವಲ್ಲವೆಂದು ಹೇಳಿರುವಂತೆಯೇ ಮುಂದೆ ಉಪಸಂಹಾರದಲ್ಲಿಯೂ ಹೇಳಲಾಗುವದು. ಆದ್ದರಿಂದಲೂ 'ಚೆನ್ನಾಗಿ' ಎಂಬ ಮಾತಿಗೆ ವಿಷಯವಾಗಿ ಎಂಬುದೇ ಅರ್ಥವೆಂದು ನಿಶ್ಚಯವಾಗುತ್ತದೆ.

* "ಮನ್ಯೇ ವಿದಿತಮ್" ಈ ವಾಕ್ಯವನ್ನು ಶಿಷ್ಯನ ಉತ್ತರವೆಂದು ಭಾವಿಸಿದರೆ: "ಅಥ ನು ಮೀಮಾಂಸ್ಯಮೇವ ತೇ" ಎಂಬುದಕ್ಕೆ "ಆದ್ದರಿಂದ ನಿನ್ನ (ಬ್ರಹ್ಮವು) ಇನ್ನೂ ವಿಚಾರಿಸತಕ್ಕದ್ದೇ'' ಎಂದು ಕನ್ನಡಿಸಿ "(ಶಿಷ್ಯ): ತಿಳಿಯಿತೆಂದು ಎಣಿಸುತ್ತೇನೆ'' ಎಂದು ಕನ್ನಡಿಸಬೇಕು.

ಕಶ್ಚಿತ್ ಪ್ರತಿಪದ್ಯತೇ ಕಶ್ಚಿನ್ನ-ಇತಿ ಸಾಶಙ್ಕಮಾಹ-'ಯದಿ' ಇತ್ಯಾದಿ। ದೃಷ್ಟಂ ಚ "ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದಮೃತ ಮಭಯಮೇತದ್ಬ್ರಹ್ಮ" (ಛಾ. ೮-೭-೪) ಇತ್ಯುಕ್ತೇ ಪ್ರಾಜಾಪತ್ಯಃ ಪಣ್ಡಿತೋಽಪಿ **ಅಸುರರಾಡ್ವಿರೋಚನಃ** ಸ್ವಭಾವದೋಷವಶಾತ್ ಅನುಪಪದ್ಯಮಾನಮಪಿ ಶರೀ ರಮ್ ಆತ್ಮೇತಿ ಪ್ರತಿಪನ್ನಃ। ತಥಾ ಇನ್ದ್ರೋ **ದೇವರಾಟ್** ಸಕೃದ್ ದ್ವಿಸ್ತ್ರಿರುಕ್ತಂ ಚಾಪ್ರತಿಪದ್ಯಮಾನಃ ಸ್ವಭಾವದೋಷಕ್ಷಯಮ್ ಅಪೇಕ್ಷ್ಯ ಚತುರ್ಥೇ ಪರ್ಯಾಯೇ ಪ್ರಥಮೋಕ್ತಮೇವ ಬ್ರಹ್ಮ ಪ್ರತಿಪನ್ನವಾನ್। ಲೋಕೇಽಪಿ ಏಕಸ್ಮಾದ್ ಗುರೋಃ ಶೃಣ್ವತಾಂ ಕಶ್ಚಿದ್ ಯಥಾವತ್ ಪ್ರತಿಪದ್ಯತೇ, ಕಶ್ಚಿದ್ ಅಯಥಾವತ್, ಕಶ್ಚಿದ್ ವಿಪರೀತಮ್, ಕಶ್ಚಿನ್ನ ಪ್ರತಿಪದ್ಯತೇ। ಕಿಮು ವಕ್ತವ್ಯಮ್ ಅತೀನ್ದ್ರಿಯಮ್ ಆತ್ಮ ತತ್ತ್ವಮ್। ಅತ್ರ ಹಿ ವಿಪ್ರತಿಪನ್ನಾಃ ಸದಸದ್ವಾದಿನಸ್ತಾರ್ಕಿಕಾಃ ಸರ್ವೇ। ತಸ್ಮಾತ್ ವಿದಿತಂ ಬ್ರಹ್ಮ-ಇತಿ ಸುನಿಶ್ಚಿತೋಕ್ತಮಪಿ ವಿಷಮಪ್ರತಿಪತ್ತಿತ್ವಾತ್, "ಯದಿ ಮನ್ಯಸೇ" ಇತ್ಯಾದಿ ಸಾಶಙ್ಕಂ ವಚನಂ ಯುಕ್ತಮೇವಾಚಾರ್ಯಸ್ಯ॥

(ಭಾಷ್ಯಾರ್ಥ)

ಒಂದು ವೇಳೆ ಚೆನ್ನಾಗಿ ಅರಿತುಕೊಂಡಿರುವೆನು ಎಂದು, ಬ್ರಹ್ಮವನ್ನು ಸ್ಪಷ್ಟ ವಾಗಿ ಅರಿತುಕೊಂಡಿರುವೆನು ಎಂದು, ನೀನು ಎಣಿಸುವೆಯಾದರೆ. ತಿಳಿಯುವದಕ್ಕೆ ಕಷ್ಟವಾಗಿದ್ದರೂ ಒಂದೊಂದುವೇಳೆ (ಅಂತಃಕರಣದ) ದೋಷಗಳೆಲ್ಲ ಕಳೆದಿರುವ ಒಳ್ಳೆಯ ಜಾಣನಾದ ಯಾವನಾದರೊಬ್ಬ (ಶಿಷ್ಯನು) (ತಾನು) ಶ್ರವಣಮಾಡಿದಂತೆಯೇ ತಿಳಿದುಕೊಂಡುಬಿಡುತ್ತಾನೆ, ಮತ್ತೊಬ್ಬನು ತಿಳಿದುಕೊಳ್ಳುವದಿಲ್ಲ; ಆದ್ದರಿಂದ "ಎಣಿಸುವೆಯಾದರೆ" ಎಂದು ಮುಂತಾಗಿ ಸಂಶಯದಿಂದ[1] ಹೇಳಿರುತ್ತಾನೆ. "ಯಾವ ಈ ಪುರುಷನು ಕಣ್ಣಿನಲ್ಲಿ ಕಾಣುತ್ತಿರುವನೋ ಇವನೇ ಆತ್ಮನು[2]; ಇದೇ ಅಮೃ ತವು, ಅಭಯವು, ಇದೇ ಅಮೃತವು, ಅಭಯವು, ಇದೇ ಬ್ರಹ್ಮವು" (ಛಾ. ೮-೭-೪) ಎಂದು ಹೇಳಲಾಗಿ **ಪ್ರಜಾಪತಿಯ ವಂಶದವನೂ** ಪಂಡಿತನೂ ಆಗಿದ್ದರೂ ಅಸುರರಾಜನಾದ[3] **ವಿರೋಚನನು** (ತನ್ನ) ಸ್ವಭಾವದೋಷಕ್ಕೆ ವಶನಾದ್ದರಿಂದ[4]

1 ತಪ್ಪಾಗಿ ತಿಳಿದುಕೊಳ್ಳುವದೂ ಉಂಟು; ಆದ್ದರಿಂದ ಗುರು 'ಎಣಿಸುವೆಯಾದರೆ' ಎಂದು ಸಂಶಯಸೂಚಕವಾದ ಮಾತನ್ನು ಆಡಿರುತ್ತಾನೆ.

2 ಇಲ್ಲಿ ಶ್ರುತಿಯಲ್ಲಿ ಇತಿ ಹೋವಾಚ ಎಂಬ ಮಾತುಗಳಿದ್ದರೂ ಪ್ರಕೃತಕ್ಕೆ ಹೊಂದು ವದಿಲ್ಲವಾದ್ದರಿಂದ ಅವನ್ನು ಕನ್ನಡಿಸಿಲ್ಲ.

3 ಅಸುರರು, ದೇವತೆಗಳು-ಇಬ್ಬರೂ ಪ್ರಜಾಪತಿ ಬ್ರಹ್ಮನ ವಂಶದವರೇ.

4 ಈ ದೋಷವನ್ನೇ ಗೀತೆಯಲ್ಲಿ ಅಸುರಸಂಪತ್ತೆಂದು ಕರೆದಿರುತ್ತದೆ. ಇದಕ್ಕೆ ವಿರುದ್ಧವಾದ ದೈವಸಂಪತ್ತನ್ನು ಸಂಪಾದಿಸಿಕೊಂಡವರಿಗೆ ಜ್ಞಾನಪ್ರಾಪ್ತಿಯಾಗುವದೆಂದು ತಿಳಿ ಸುವದಕ್ಕಾಗಿ ಈ ಉದಾಹರಣೆಯನ್ನು ಇಲ್ಲಿ ಕೊಟ್ಟಿರುತ್ತದೆ.

(ಅನುಭವಕ್ಕೆ) ಹೊಂದದೆ ಇದ್ದರೂ[1] ಶರೀರವೇ ಆತ್ಮನೆಂದು ತಪ್ಪುವಿಷಯವನ್ನೇ ತಿಳಿದುಕೊಂಡನು. ಮತ್ತು ದೇವರಾಜನಾದ **ಇಂದ್ರನು** ಒಂದು, ಎರಡು, ಮೂರು ಸಲ ಹೇಳಿದ್ದನ್ನು ತಿಳಿದುಕೊಳ್ಳದೆ (ತನ್ನ) ಸ್ವಭಾವದೋಷವು ಸವೆದಕಾರಣ ದಿಂದ[2] ನಾಲ್ಕನೆಯ ಸಲಕ್ಕೆ ಮೊದಲು ಹೇಳಿದ ಬ್ರಹ್ಮವನ್ನೇ[3] ತಿಳಿದುಕೊಂಡನು. ಲೋಕದಲ್ಲಿಯೂ ಒಬ್ಬನೇ ಗುರುವಿನಿಂದ (ಸಾಮಾನ್ಯ ವಿಷಯಗಳನ್ನು ಕುರಿತು) ಶ್ರವಣಮಾಡುವವರಲ್ಲಿ ಒಬ್ಬನು (ಗುರು) ಹೇಳಿದಂತೆ ತಿಳಿದುಕೊಳ್ಳುತ್ತಾನೆ, ಒಬ್ಬನು ಸರಿಯಾಗಿ ತಿಳಿದುಕೊಳ್ಳುವದಿಲ್ಲ,[4] ಒಬ್ಬನು ತಪ್ಪಾಗಿ ತಿಳಿದುಕೊಳ್ಳುತ್ತಾನೆ, ಒಬ್ಬನು ತಿಳಿದುಕೊಳ್ಳುವದೇ ಇಲ್ಲ.[5] (ಹೀಗಿರುವಲ್ಲಿ) ಅತೀಂದ್ರಿಯವಾದ ಆತ್ಮತತ್ತ್ವವನ್ನು ಎಲ್ಲರೂ ಒಂದೇ ಸಮನಾಗಿ ತಿಳಿದುಕೊಳ್ಳಲಾರರೆಂದು ಹೇಳತಕ್ಕದ್ದೇನಿದೆ ? ಏಕೆಂದರೆ ಇದರ ವಿಷಯದಲ್ಲಿ ಸದ್ವಾದಿಗಳೂ ಅಸದ್ವಾದಿಗಳೂ ಆದ **ತಾರ್ಕಿಕರೆಲ್ಲರೂ**[6] ಒಬ್ಬರಿಗೊಬ್ಬರು ವಿರುದ್ಧವಾಗಿ ಅಭಿಪ್ರಾಯವುಳ್ಳವರಾಗಿರುತ್ತಾರೆ. ಆದ್ದರಿಂದ 'ಬ್ರಹ್ಮವನ್ನು ಅರಿತುಕೊಂಡೆನು' ಎಂದು ಅತ್ಯಂತ ನಿಶ್ಚಿತವಾಗಿ ಹೇಳಿದರೂ ನಿಜವಾಗಿಯೂ ಸರಿಯಾಗಿ ತಿಳಿದುಕೊಳ್ಳುವದು ಕಷ್ಟವಾಗಿರುವದರಿಂದ ಆಚಾರ್ಯನು ಸಂಶಯಪೂರ್ವಕವಾಗಿ 'ಎಣಿಸುವೆಯಾದರೆ' ಎಂದು ಮುಂತಾಗಿ ಹೇಳಿರುವದು ಯುಕ್ತವೇ ಆಗಿರುತ್ತದೆ.

(ಭಾಷ್ಯ)

೪೨. ದಭ್ರಮ್ ಅಲ್ಪಮೇವಾಪಿ ನೂನಂ ತ್ವಂ ವೇತ್ಥ ಜಾನೀಷೇ ಬ್ರಹ್ಮಣೋ ರೂಪಮ್ । ಕಿಮ್ ಅನೇಕಾನಿ ಬ್ರಹ್ಮಣೋ ರೂಪಾಣಿ ಮಹಾನ್ತಿ ಅರ್ಭಕಾಣಿ ಚ ಯೇನಾಹ "ದಭ್ರಮೇವ" ಇತ್ಯಾದಿ ? ಬಾಢಮ್ । ಅನೇಕಾನಿ ಹಿ ನಾಮರೂಪೋಪಾಧಿಕೃತಾನಿ ಬ್ರಹ್ಮಣೋ ರೂಪಾಣಿ ನ ಸ್ವತಃ । ಸ್ವತಸ್ತು "ಅಶಬ್ದಮಸ್ಪರ್ಶಮ

---

1 ಶರೀರವು ಬೇರೆ ನಾವು ಬೇರೆ ಎಂಬುದು ಅನುಭವದಲ್ಲಿದೆ.

2. ಬ್ರಹ್ಮಚರ್ಯವೇ ಮುಂತಾದ ಸಾಧನಗಳಿಂದ ಸ್ವಭಾವದೋಷವು ತೊಲಗುವದೆಂಬುದನ್ನು ಈ ಉದಾಹರಣೆಯು ಸೂಚಿಸುತ್ತದೆ.

3 ಪ್ರಜಾಪತಿಯು ಒಂದೊಂದು ಸಲಕ್ಕೂ ಒಂದೊಂದು ಬೇರೆಯ ವಿಷಯವನ್ನೇ ತಿಳಿಸಿರುತ್ತಾನೆಂದು ಕೆಲವರು ಈ ಶ್ರುತಿಗೆ ಅರ್ಥವನ್ನು ಮಾಡಿದ್ದರು. ಅವರ ಅಭಿಪ್ರಾಯವು ತಪ್ಪೆಂಬುದನ್ನು ಛಾಂದೋಗ್ಯಭಾಷ್ಯ (೮-೧೨-೧) ಮತ್ತು ಸೂತ್ರಭಾಷ್ಯ (೧-೪-೧೯)-ಇವುಗಳಲ್ಲಿ ಆಚಾರ್ಯರು ತೋರಿಸಿಕೊಟ್ಟಿರುತ್ತಾರೆ.

4. ಸಂಶಯವುಳ್ಳವನಾಗಿರುತ್ತಾನೆ.

5. ಅತ್ಯಂತ ಮೂಢನಾಗಿರುತ್ತಾನೆ.

6. ಸತ್ಕಾರ್ಯವಾದಿಗಳಾದ ಸಾಂಖ್ಯರೂ ಅಸತ್ಕಾರ್ಯವಾದಿಗಳಾದ ವೈಶೇಷಿಕರೇ ಮುಂತಾದವರೂ. ಮಾ. ಕಾ. ಭಾ. ೪-೮೪.

ರೂಪಮವ್ಯಯಂ ತಥಾರಸಂ ನಿತ್ಯಮಗನ್ಧವಚ್ಚ ಯತ್" (ಕ. ೧-೩-೧) ಇತಿ ಶಬ್ದಾದಿಭಿಃ ಸಹ ರೂಪಾಣಿ ಪ್ರತಿಷಿಧ್ಯನ್ತೇ । ನನು ಯೇನೈವ ಧರ್ಮೇಣ ಯದ್ ರೂಪ್ಯತೇ ತದೇವ ತಸ್ಯ ಸ್ವರೂಪಮಿತಿ ಬ್ರಹ್ಮಣೋಽಪಿ ಯೇನ ವಿಶೇಷೇಣ ನಿರೂಪಣಮ್ ತದೇವ ತಸ್ಯ ಸ್ವರೂಪಂ ಸ್ಯಾತ್ । ಅತ ಉಚ್ಯತೇ ಚೈತನ್ಯಂ ಪೃಥಿವ್ಯಾದೀನಾಮನ್ಯತಮಸ್ಯ ಸರ್ವೇಷಾಂ ವಿಪರಿಣತಾನಾಂ ವಾ ಧರ್ಮೋ ನ ಭವತೀತಿ ಬ್ರಹ್ಮಣೋ ರೂಪಮಿತಿ । ಬ್ರಹ್ಮ ರೂಪ್ಯತೇ ಚೈತನ್ಯೇನ । ತಥಾಚೋಕ್ತಮ್-"ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೭), 'ವಿಜ್ಞಾನಘನ ಏವ' (ಬೃ. ೨-೪-೧೨), "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧), "ಪ್ರಜ್ಞಾನಂ ಬ್ರಹ್ಮ" (ಐ ೩-೧) ಇತಿ ಚ ಬ್ರಹ್ಮಣೋ ರೂಪಂ ನಿರ್ದಿಷ್ಟಂ ಶ್ರುತಿಷು । ಸತ್ಯಮೇವಮ್ । ತಥಾಪಿ ತದನ್ತಃಕರಣದೇಹೇನ್ದ್ರಿಯೋಪಾಧಿದ್ವಾರೇಣೈವ ವಿಜ್ಞಾನಾದಿಶಬ್ದೈರ್ನಿರ್ದಿಶ್ಯತೇ, ತದನುಕಾರಿತ್ವಾದ್ ದೇಹಾದಿವೃದ್ಧಿಸಙ್ಕೋಚಚ್ಛೇದಾದಿಷು ನಾಶೇಷು ಚ, ನ ಸ್ವತಃ । ಸ್ವತಸ್ತು "ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್" (೨-೩) ಇತಿ ಸ್ಥಿತಂ ಭವಿಷ್ಯತಿ ॥

(ಭಾಷ್ಯಾರ್ಥ)

(ಮೂಲದಲ್ಲಿರುವ) ದಭ್ರಂ (ಎಂಬ ಮಾತಿಗೆ) ಅಲ್ಪವೇ (ಎಂದರ್ಥ). ನೀನು ನಿಜವಾಗಿ (ಅಲ್ಪವಾದ) ಬ್ರಹ್ಮದ ರೂಪವನ್ನೇ ಅರಿತಿರುವೆ ತಿಳಿದುಕೊಂಡಿರುವೆ (ಎಂದರ್ಥ).

(ಆಕ್ಷೇಪ) —ಹಾಗಾದರೆ ಬ್ರಹ್ಮಕ್ಕೆ ದೊಡ್ಡವುಗಳು ಅಲ್ಪವಾದವುಗಳು ಎಂದು ಅನೇಕ ರೂಪಗಳಿವೆಯೇನು? ಅಲ್ಪ(ವಾದ ರೂಪ)ವನ್ನೇ (ಅರಿತಿರುವೆ) ಎಂದು ಹೇಳಿರುವದನ್ನು ನೋಡಿದರೆ (ಹಾಗೆಂದಾಗುವದಿಲ್ಲವೆ?)

(ಪರಿಹಾರ).—ನಿಜ. ನಾಮರೂಗಳಿಂದಾಗಿರುವ ರೂಪಗಳು ಬ್ರಹ್ಮಕ್ಕೆ ಅನೇಕವಾಗಿಯೇ ಇರುತ್ತವೆ. (ಆದರೆ) ಅದರ ಸ್ವರೂಪದಿಂದಲೇ (ಅನೇಕರೂಪ) ಗಳಿರುವದಿಲ್ಲ. ಸ್ವರೂಪದಿಂದ ನೋಡಿದರೆ "ಅದು ಯಾವಾಗಲೂ ಶಬ್ದವಿಲ್ಲದ್ದು, ಸ್ಪರ್ಶವಿಲ್ಲದ್ದು, ರೂಪವಿಲ್ಲದ್ದು, ನಾಶರಹಿತವಾದದ್ದು, ಮತ್ತು ಸವಿಯಿಲ್ಲದ್ದು, ವಾಸನೆಯಿಲ್ಲದ್ದು" (ಕ. ೧-೩-೧) ಎಂದು ಶಬ್ದಾದಿಗಳೊಡನೆ ರೂಪಗಳನ್ನೂ (ಶ್ರುತಿಯಲ್ಲಿ) ಇಲ್ಲವೆಂದಿರುತ್ತದೆ.

(ಭಾಷ್ಯಾರ್ಥ)

(ಆಕ್ಷೇಪ) :—ಯಾವ ಧರ್ಮದಿಂದಲೇ ಯಾವದು ಗೊತ್ತಾಗುವದೋ ಅದೇ ಅದರ ಸ್ವರೂಪವು ; ಆದ್ದರಿಂದ ಬ್ರಹ್ಮವೂ ಯಾವ ವಿಶೇಷ (ಧರ್ಮದಿಂದ) ಗೊತ್ತಾಗುವದೋ ಅದೇ ಅದರ ರೂಪವಾಗಬೇಕು. ಆದ್ದರಿಂದ ಚೈತನ್ಯವು ಪೃಥಿವಿ

ಮುಂತಾದವುಗಳಲ್ಲಿ ಯಾವದೊಂದರ ಧರ್ಮವೂ ಅಲ್ಲ; ಇವೆಲ್ಲವೂ (ಸೇರಿ) ಪರಿಣಾಮವಾಗಿರುವ (ದೇಹದ) ಧರ್ಮವೂ ಅಲ್ಲ; ಇದರಂತೆ ಶ್ರೋತ್ರಾದಿಗಳ ಅಥವಾ ಅಂತಃಕರಣದ ಧರ್ಮವೂ ಅಲ್ಲ; ಆದ್ದರಿಂದ (ಅದು) ಬ್ರಹ್ಮದ ರೂಪವೆಂದು ಹೇಳಬಹುದು. (ಏಕೆಂದರೆ) ಬ್ರಹ್ಮವು ಚೈತನ್ಯ(ರೂಪ)ದಿಂದ ಗೊತ್ತಾಗುತ್ತದೆ.[1] "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು" (ಬೃ. ೩-೯-೭), "ವಿಜ್ಞಾನದ ಗಟ್ಟಿಯೇ" (ಬೃ. ೨-೪-೧೨), "ಸತ್ಯವೂ ಜ್ಞಾನವೂ ಅನಂತವೂ ಆದದ್ದು ಬ್ರಹ್ಮವು" (ತೈ. ೨-೧), "ಪ್ರಜ್ಞಾನವು ಬ್ರಹ್ಮವು" (ಐ. ೩-೧) ಎಂದು ಬ್ರಹ್ಮದ ರೂಪವನ್ನು ಶ್ರುತಿಯಲ್ಲಿ ತಿಳಿಸಿಯೂ ಕೊಟ್ಟಿದೆಯಲ್ಲ?[2]

(ಪರಿಹಾರ):—ನಿಜ, ಹಾಗೆಯೇ ಸರಿ. ಹಾಗಿದ್ದರೂ ಅಂತಃಕರಣ, ದೇಹ, ಇಂದ್ರಿಯಗಳು-ಎಂಬ ಉಪಾಧಿಗಳ ಮೂಲಕವೇ ಆ (ಬ್ರಹ್ಮವು) ವಿಜ್ಞಾನವೇ ಮುಂತಾದ ಶಬ್ದಗಳಿಂದ ಹೇಳಲ್ಪಡುತ್ತದೆ, ಏಕೆಂದರೆ (ಅದು) ದೇಹಾದಿಗಳ ಹಿಗ್ಗುವಿಕೆ, ಕುಗ್ಗುವಿಕೆ, ಕತ್ತರಿಸಿಹೋಗುವಿಕೆ-ಮುಂತಾದವುಗಳಲ್ಲಿಯೂ (ಅವುಗಳ) ನಾಶದಲ್ಲಿಯೂ[3] ಅವುಗಳನ್ನೇ ಅನುಸರಿಸುತ್ತಿರುತ್ತದೆ. (ಇಷ್ಟೇ ಹೊರತು) ಸ್ವರೂಪದಿಂದಲೇ (ಅದು ಆ ಶಬ್ದಗಳಿಂದ ಹೇಳಲ್ಪಡು)ವದಿಲ್ಲ.[4] ಸ್ವರೂಪದಿಂದಲೋ ಎಂದರೆ "ಅರಿಯುವವರಿಗೆ ತಿಳಿಯದೆ ಇರುವದು, ಅರಿಯದವರಿಗೆ ತಿಳಿದಿರುವದು" (೨-೩) ಎಂದು ಮುಂದೆ ನಿರ್ಣಯಮಾಡಲಾಗುವದು.

(ಭಾಷ್ಯ)

೪೩. "ಯದಸ್ಯ ಬ್ರಹ್ಮಣೋ ರೂಪಮ್" ಇತಿ ಪೂರ್ವೇಣ ಸಮ್ಬನ್ಧಃ | ನ ಕೇವಲಮ್ ಅಧ್ಯಾತ್ಮೋಪಾಧಿಪರಿಚ್ಛಿನ್ನಸ್ಯ ಅಸ್ಯ ಬ್ರಹ್ಮಣೋ ರೂಪಂ ತ್ವಮ್ ಅಲ್ಪಂ ವೇತ್ಥ, ಯದಪ್ಯಧಿದೈವತೋಪಾಧಿಪರಿಚ್ಛಿನ್ನಸ್ಯ ಅಸ್ಯ ಬ್ರಹ್ಮಣೋ ರೂಪಂ ದೇವೇಷು

---

1. ಈ ಕಾರಣದಿಂದ ಚೈತನ್ಯವೇ ಬ್ರಹ್ಮದ ರೂಪವೆಂದು, ಏಕೆ ಹೇಳಬಾರದು?- ಎಂದು ಪೂರ್ವಪಕ್ಷಿಯ ಪ್ರಶ್ನೆ.

2. ತಥಾಚೋಕ್ತಮ್ ಎಂಬ ಮೂಲವನ್ನು ನಾವು ಕನ್ನಡಿಸಿಲ್ಲ. 'ತಥಾ ಚ' ಎಂದಿಷ್ಟೇ ಇದ್ದಿದ್ದರೆ 'ಇದಕ್ಕನುಗುಣವಾಗಿ' ಎಂದು ಕನ್ನಡಿಸಿ ಹೇಗೋ ಅನ್ವಯಮಾಡಬಹುದಾಗುವದು.

3. ನಾಶೇಷು ಎಂದು ಬಹುವಚನವನ್ನು ಏತಕ್ಕೆ ಪ್ರಯೋಗಿಸಿದೆಯೋ ತಿಳಿಯದು. ಈ ಭಾಷ್ಯಪಂಕ್ತಿಯು ಏನೋ ಸ್ವಲ್ಪ ಹೆಚ್ಚುಕಡಿಮೆಯಾಗಿರುವಂತೆ ತೋರುತ್ತದೆ.

4 ಸೋಪಾಧಿಕಬ್ರಹ್ಮವು ವಾಚ್ಯವಾಗಿದ್ದರೂ ನಿರುಪಾಧಿಕವಾದ ಬ್ರಹ್ಮವು ವಿಜ್ಞಾನ, ಆನಂದ-ಮುಂತಾದ ಶಬ್ದಗಳಿಗೆ ವಾಚ್ಯವಲ್ಲ; ಅವುಗಳಿಗೆ ಅದು ಲಕ್ಷ್ಯವಾಗಿರುತ್ತದೆ. ತೈ ಭಾ. ೨-೧ ನೋಡಿ. ನಿಷೇಧವಚನಗಳಿಗೂ ಅದು ವಾಚ್ಯವಲ್ಲ. ಮಾಂ. ಕಾ. ಭಾ. ೨-೩೨ ನೋಡಿ.

ವೇತ್ಥ ತ್ವಮ್ ತದಪಿ ನೂನಂ ದಭ್ರಮೇವ ವೇತ್ಥ ಇತಿ ಮನ್ಯೇಽಹಮ್ । ತದಪಿ ಚ ದೇವೇಷು ಉಪಾಧಿಪರಿಚ್ಛಿನ್ನತ್ವಾದ್ ದಭ್ರತ್ವಾನ್ನ ನಿವರ್ತತೇ । ಯತ್ತು ವಿಧ್ವಸ್ತಸರ್ವೋಪಾಧಿವಿಶೇಷಂ ಶಾನ್ತಮನನ್ತಮೇಕಮದ್ವೈತಂ ಭೂಮಾಖ್ಯಂ ನಿತ್ಯಂ ಬ್ರಹ್ಮ ನ ತತ್ ಸುವೇದ್ಯಮ್ ಇತ್ಯಭಿಪ್ರಾಯಃ । ಯತ ಏವಮ್ ಅಥ ನು ತಸ್ಮಾತ್ ಮನ್ಯೇ ಅದ್ಯಾಪಿ ಮೀಮಾಂಸ್ಯಂ ವಿಚಾರ್ಯಮೇವ ತೇ ತವ ಬ್ರಹ್ಮ ॥

(ಭಾಷ್ಯಾರ್ಥ)

"ಯದಸ್ಯ ಬ್ರಹ್ಮಣೋ ರೂಪಮ್" ಎಂದು ('ಯದಸ್ಯ' ಎಂಬ ಮಾತುಗಳನ್ನು 'ಬ್ರಹ್ಮಣೋ ರೂಪಮ್' ಎಂಬುದರ) ಹಿಂದಕ್ಕೆ ಜೋಡಿಸಿಕೊಳ್ಳಬೇಕು. ಅಧ್ಯಾತ್ಮದ ಉಪಾಧಿಯಿಂದ ಕಟ್ಟುವಡೆದಿರುವ ಈ ಬ್ರಹ್ಮದ ರೂಪವನ್ನು ನೀನು ಅರಿತುಕೊಂಡಿರುವದು ಅಲ್ಪವೇ ಎಂಬುದಿಷ್ಟೇ ಅಲ್ಲ, ಅಧಿದೈವತವಾದ ಉಪಾಧಿಯಿಂದ ಕಟ್ಟುವಡೆದಿರುವ ಈ ಬ್ರಹ್ಮದ ದೇವತೆಗಳಲ್ಲಿರುವ ರೂಪವನ್ನು ನೀನು ಅರಿತಿರುವೆಯಷ್ಟೆ, ಅದನ್ನು ನೀನರಿತಿರುವದೂ ನಿಜವಾಗಿ ಸ್ವಲ್ಪವೇ[1] ಎಂದು ನಾನು ಎಣಿಸುತ್ತೇನೆ. ದೇವತೆಗಳಲ್ಲಿರುವ ಅದೂ[2] ಉಪಾಧಿಗಳಿಂದ ಕಟ್ಟುವಡೆದಿರುವದರಿಂದ ಅಲ್ಪತೆಯನ್ನು ಬಿಟ್ಟು ಹೋಗಲಾರದು. ಆದರೆ ಯಾವದೊಂದು ಉಪಾಧಿಯ ವಿಶೇಷವೂ ಇಲ್ಲದೆ ಶಾಂತವೂ ಅನಂತವೂ ಏಕವೂ ಅದ್ವಿತೀಯವೂ ಆಗಿರುವ **ಭೂಮ**ವೆಂಬ ನಿತ್ಯವಾದ ಬ್ರಹ್ಮವಿದೆಯಲ್ಲ, ಅದು (ಮಾತ್ರ) 'ಚೆನ್ನಾಗಿ' ಅರಿಯಲ್ಪಡತಕ್ಕದ್ದಲ್ಲ[3]-ಎಂದಭಿಪ್ರಾಯ.

ಹೀಗಿರುವದರಿಂದ ನಿನ್ನ ಬ್ರಹ್ಮವು ಇನ್ನೂ ಮೀಮಾಂಸ್ಯವೇ, ಎಂದರೆ ವಿಚಾರ ಮಾಡಿ (ಗೊತ್ತುಪಡಿಸ)ತಕ್ಕದ್ದೇ[4] ಎಂದು ನನ್ನ ಅಭಿಪ್ರಾಯವು. ॥೧॥

---

1. ಅಧ್ಯಾತ್ಮದ ಉಪಾಧಿಯಿಂದ ಪರಿಚ್ಛಿನ್ನವಾದ ಬ್ರಹ್ಮದ ರೂಪವನ್ನೂ ಅಧಿದೈವತವಾದ ಉಪಾಧಿಯಿಂದ ಪರಿಚ್ಛಿನ್ನವಾದ ಬ್ರಹ್ಮದರೂಪವನ್ನೂ ನೀನು ಸ್ವಲ್ಪವೇ ತಿಳಿದುಕೊಂಡಿದ್ದೀಯೆ. ಪೂರ್ಣವಾಗಿ ಅವೆರಡನ್ನೂ ತಿಳಿದುಕೊ-ಎಂಬುದು ಆಚಾರ್ಯನ ಅಭಿಪ್ರಾಯವಲ್ಲ. ಈ ಎರಡು ಉಪಾಧಿಗಳಿಂದ ಕೂಡಿರುವದೇ ಬ್ರಹ್ಮವು, ಅದನ್ನು ನಾನು ಅರಿತುಕೊಂಡಿದ್ದೇನೆ—ಎಂದು ತಿಳಿದಿರುವೆಯಾದರೆ ಬ್ರಹ್ಮದ ಸ್ವರೂಪವನ್ನು ನೀನು ಸರಿಯಾಗಿ ತಿಳಿದುಕೊಂಡಂತೆ ಆಗಲಿಲ್ಲ ಎಂಬುದೇ ಅಭಿಪ್ರಾಯವು.

2. 'ತದಪಿ ಚ ದೇವೇಷು' ಎಂದಿಷ್ಟೇ ಇಟ್ಟುಕೊಂಡಿದೆ. ಇದರ ಹಿಂದೆ 'ಯದಧ್ಯಾತ್ಮಂ ಯದಪಿ ದೇವೇಷು' (ಆ॥) "ಯದಧ್ಯಾತ್ಮಂ ಯದಧಿದೈವಂ" (ಅ॥) "ಯದಧ್ಯಾತ್ಮಮ್" (ಮೈ॥)-ಎಂದು ಬಗೆಬಗೆಯಾದ ಪಾಠಗಳಿವೆ; ಅವು ಯಾವವೂ ಪ್ರಕೃತಕ್ಕೆ ಹೊಂದುವದಿಲ್ಲವಾಗಿ ಲೇಖಕರ ಪ್ರಮಾದವೆಂದೆಣಿಸಿ ಕೈಬಿಟ್ಟಿರುತ್ತದೆ.

3. ವಿಷಯವಲ್ಲವೇ ಅಲ್ಲ

4. ಬ್ರಹ್ಮದ ಅರಿವು ನಿನಗೆ ಇನ್ನೂ ಸರಿಯಾಗಿ ಆಗಿಲ್ಲ.

(ಭಾಷ್ಯ)

ೱೱ ಏವಮ್ ಆಚಾರ್ಯೋಕ್ತಃ ಶಿಷ್ಯಃ ಏಕಾನ್ತೇ ಉಪವಿಷ್ಟಃ ಸಮಾಹಿತಃ ಸ್ಸ ಯಥೋಕ್ತಮಾಚಾರ್ಯೇಣ ಆಗಮಮ್ ಅರ್ಥತೋ ವಿಚಾರ್ಯ, ತರ್ಕತಶ್ಚ ನಿರ್ಧಾರ್ಯ ಸ್ವಾನುಭವಂ ಕೃತ್ವಾ ಆಚಾರ್ಯಸಕಾಶಮುಪಗಮ್ಯೋವಾಚ ಮನ್ಯೇಽಹಮಥೇದಾನೀಂ ವಿದಿತಂ ಬ್ರಹ್ಮೇತಿ । ಕಥಮಿತಿ? ಶೃಣುತ—

(ಭಾಷ್ಯಾರ್ಥ)

ಹೀಗೆಂದು ಆಚಾರ್ಯನು ಹೇಳಲು ಶಿಷ್ಯನು ಏಕಾಂತದಲ್ಲಿ ಕುಳಿತು ಮನಸ್ಸನ್ನು ಸಮಾಧಾನಗೊಳಿಸಿಕೊಂಡು [1] ಆಚಾರ್ಯನು ಹಿಂದೆ ಹೇಳಿದ ಆಗಮಾರ್ಥವನ್ನು [2] ವಿಚಾರಮಾಡಿ, ತರ್ಕದಿಂದಲೂ ನಿಶ್ಚಯಿಸಿ, ತನ್ನ ಅನುಭವಕ್ಕೆ ತಂದುಕೊಂಡು [3] ಆಚಾರ್ಯನ ಬಳಿಗೆ ಬಂದು "ಈಗ ನನಗೆ ಬ್ರಹ್ಮವು ತಿಳಿಯಿತೆಂದು ತೋರುತ್ತದೆ" ಎಂದನು.* (ಆಚಾರ್ಯನು) "ಅದು ಹೇಗೆ" (ಎನ್ನಲು ಹೇಳುತ್ತಾನೆ:) ಕೇಳಿರಿ:—

**ನಾಹಂ ಮನ್ಯೇ ಸುವೇದೇತಿ**
**ನೋ ನ ವೇದೇತಿ ವೇದ ಚ ।**
**ಯೋ ನಸ್ತದ್ವೇದ ತದ್ವೇದ**
**ನೋ ನ ವೇದೇತಿ ವೇದ ಚ ॥ ೨ ॥**

೨. ನಾನು ಚೆನ್ನಾಗಿ ಅರಿತುಕೊಂಡಿರುವೆನೆಂದು ಎಣಿಸಿರುವದಿಲ್ಲ, ಅರಿತುಕೊಂಡಿಲ್ಲವೆಂದೂ (ಎಣಿಸಿರುವ)ದಿಲ್ಲ, ಅರಿತೂ ಇರುತ್ತೇನೆ "ಅರಿತುಕೊಂಡಿಲ್ಲವೆಂದೂ (ಎಣಿಸಿರುವ)ದಿಲ್ಲ, ಅರಿತೂ ಇರುತ್ತೇನೆ." ಎಂಬಿದನ್ನು ನಮ್ಮಲ್ಲಿ ಯಾವನು ಬಲ್ಲನೋ (ಅವನೇ) ಅದನ್ನು ಬಲ್ಲನು.

---

1. ಮನಸ್ಸಿನಲ್ಲಿ ವಿಕ್ಷೇಪವಿಲ್ಲದೆ ಇರುವಾಗಲೇ ತತ್ತ್ವವು ಹೊಳೆಯುವದು; ಆದ್ದರಿಂದ ಸಮಾಧಾನವೆಂಬುದು ಒಂದು ಅಂತರಂಗಸಾಧನವು.

2. ೧-೪ರಲ್ಲಿ ಹೇಳಿದ್ದ ಅನುಭವಿಗಳ ಉಪದೇಶದ ಅರ್ಥವನ್ನು

3. ಆಗಮದಿಂದ ಕೇಳಿ ತಿಳಿದುಕೊಳ್ಳುವದು, ಯುಕ್ತಿಯಿಂದ ಮನನಮಾಡುವದು, ತನ್ನ ಅನುಭವಕ್ಕೆ ಹೊಂದಿಸಿಕೊಳ್ಳುವದು-ಈ ಮೂರೂ ಒಂದಾಗಿ ಸೇರಿದರೇ ತತ್ತ್ವದ ಅರಿವಾಗುವದು. ಶ್ರವಣಮನನನಿದಿಧ್ಯಾಸನಗಳನ್ನು ಆತ್ಮದರ್ಶನಕ್ಕೆ ಸಾಧನವೆಂದು ಶಾಸ್ತ್ರದಲ್ಲಿ ಹೇಳಿರುವದು ಈ ಕಾರಣದಿಂದಲೇ ಎಂದು ಭಾವ.

(ಭಾಷ್ಯ)

೪೫. ನಾಹಂ ಮನ್ಯೇ ಸುವೇದೇತಿ ನೈವಾಹಂ ಮನ್ಯೇ ಸುವೇದ ಬ್ರಹ್ಮ-ಇತಿ । 'ನೈವ ತರ್ಹಿ-ವಿದಿತಂ ತ್ವಯಾ ಬ್ರಹ್ಮ' ಇತ್ಯುಕ್ತ ಆಹ 'ನೋ ನ ವೇದೇತಿ ವೇದ ಚ' । 'ವೇದ ಚ' ಇತಿ ಚಶಬ್ದಾತ್ ನ ವೇದ ಚ ॥ .

'ನಾನು ಚೆನ್ನಾಗಿ ಅರಿತುಕೊಂಡಿರುವೆನೆಂದು ಎಣಿಸಿರುವದಿಲ್ಲ' ಎಂದರೆ ಬ್ರಹ್ಮನನ್ನು ಚೆನ್ನಾಗಿ ಅರಿತಿರುವೆನೆಂದು ನಾನು ಎಣಿಸಿರುವದೇ ಇಲ್ಲ. "ಹಾಗಾದರೆ ನಿನಗೆ ಬ್ರಹ್ಮವು ತಿಳಿದೇ ಇಲ್ಲವೆಂದಾಯಿತಲ್ಲ!" ಎಂದರೆ ಅದಕ್ಕೆ ಹೇಳುತ್ತಾನೆ: "(ನಾನು) ಅರಿತುಕೊಂಡಿಲ್ಲವೆಂದೂ (ಎಣಿಸಿರುವ)ದಿಲ್ಲ, ಅರಿತೂ ಇರುತ್ತೇನೆ." ವೇದ ಚ ಎಂದು ಚಶಬ್ದವನ್ನು ಉಪಯೋಗಿಸಿರುವದರಿಂದ 'ಅರಿತೂ ಇಲ್ಲ' (ಎಂದು ಸೇರಿಸಿಕೊಳ್ಳಬೇಕು).

(ಭಾಷ್ಯ)

೪೬. ನನು ವಿಪ್ರತಿಷಿದ್ಧಂ ನಾಹಂ ಮನ್ಯೇ ಸುವೇದೇತಿ ನೋ ನ ವೇದೇತಿ ವೇದ ಚೇತಿ (ಚ) । ಯದಿ ನ ಮನ್ಯಸೇ ಸುವೇದೇತಿ ಕಥಂ ಮನ್ಯಸೇ ವೇದ ಚೇತಿ? ಅಥ ಮನ್ಯಸೇ ವೇದೈವೇತಿ ಕಥಂ ನಮನ್ಯಸೇ ಸುವೇದೇತಿ? ಏಕಂ ವಸ್ತು ಯೇನ ಜ್ಞಾಯತೇ ತೇನೈವ ತದೇವ ವಸ್ತು ನ ಸುವಿಜ್ಞಾಯತ ಇತಿ ವಿಪ್ರತಿಷಿದ್ಧಂ ಸಂಶಯವಿಪರ್ಯಯೌ ವರ್ಜಯಿತ್ವಾ । ನ ಚ ಬ್ರಹ್ಮ ಸಂಶಯಿತತ್ವೇನ ಜ್ಞೇಯಂ ವಿಪರೀತತ್ವೇನ ವಾ-ಇತಿ ನಿಯನ್ತುಂ ಶಕ್ಯಮ್ । ಸಂಶಯವಿಪರ್ಯಯೌ ಹಿ ಸರ್ವತ್ರಾನರ್ಥಕರತ್ವೇನೈವ ಪ್ರಸಿದ್ಧೌ ॥ ಏವಮಾಚಾರ್ಯೇಣ ವಿಚಾಲ್ಯಮಾನೋಽಪಿ ಶಿಷ್ಯೋ ನ ವಿಚಚಾಲ । "ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ" (೧-೪) ಇತ್ಯಾಚಾರ್ಯೋಕ್ತಾಗಮಸಮ್ಪ್ರದಾಯಬಲಾತ್ । ಉಪಪತ್ತ್ಯನುಭವಬಲಾಚ್ಚ । ಜಗರ್ಜ ಚ ಬ್ರಹ್ಮವಿದ್ಯಾಯಾಂ ದೃಢನಿಶ್ಚಯತಾಂ ದರ್ಶಯನ್ ಆತ್ಮನಃ ॥

(ಭಾಷ್ಯಾರ್ಥ)

(ಆಕ್ಷೇಪ) :—"ನಾನು ಚೆನ್ನಾಗಿ ಅರಿತುಕೊಂಡಿರುವೆನೆಂದು ಎಣಿಸಿರುವದಿಲ್ಲ" ಎಂದೂ "ಅರಿತಿಲ್ಲವೆಂದೂ ಇಲ್ಲ, ಅರಿತೂ ಇದ್ದೇನೆ" ಎಂದೂ ಹೇಳುವದು (ಒಂದಕ್ಕೊಂದು) ವಿರುದ್ಧವಲ್ಲವೆ? ಚೆನ್ನಾಗಿ ಅರಿತುಕೊಂಡಿರುವೆನೆಂದು ನೀನು ಎಣಿಸಿಲ್ಲವಾದರೆ 'ಅರಿತೂ ಇದ್ದೇನೆ' ಎಂದು ಎಣಿಸಿರುವದು ಹೇಗೆ? ಹಾಗಿಲ್ಲದೆ ಅರಿತೇ ಇರುವೆನೆಂದು ಎಣಿಸಿರುವೆಯಾದರೆ ಚೆನ್ನಾಗಿ ಅರಿತಿರುವೆನೆಂದು ಎಣಿಸಿಲ್ಲವೆಂಬುದು ಹೇಗೆ? ಒಂದು ವಸ್ತು ಯಾವನಿಗೆ ತಿಳಿದಿರುವದೋ ಅವನಿಗೇ ಅದೇ ವಸ್ತು ಚೆನ್ನಾಗಿ

---

* ಇಲ್ಲಿಯವರೆಗಿನ ಭಾಷ್ಯವನ್ನು ಹಿಂದಿನ ಮಂತ್ರದ "ಮನ್ಯೇ ವಿದಿತಮ್" ಎಂಬುದರ ವಿವರಣೆಯೆಂದೂ ಭಾವಿಸಬಹುದಾಗಿದೆ. ಆ ಮಂತ್ರದ ಅನುವಾದಕ್ಕೆ ಕೊಟ್ಟಿರುವ ಟಿಪ್ಪಣಿಯನ್ನು ನೋಡಿ.

ತಿಳಿದಿಲ್ಲವೆಂಬುದು—ಸಂಶಯ ವಿಪರೀತ ಜ್ಞಾನಗಳಿದ್ದ ಹೊರತು—ವಿರುದ್ಧವಾದದ್ದು. ಬ್ರಹ್ಮವನ್ನು ಸಂಶಯವಾಗಿಯೇ ತಿಳಿಯತಕ್ಕದ್ದೆಂದಾಗಲಿ ವಿರುದ್ಧವಾಗಿಯೇ ತಿಳಿದು ಕೊಳ್ಳತಕ್ಕದ್ದೆಂದಾಗಲಿ ನಿಯಮವನ್ನು ಹೇಳುವದಕ್ಕೆ ಬರುವದಿಲ್ಲ. ಏಕೆಂದರೆ ಸಂಶಯ, ವಿಪರ್ಯಯ[1]-ಈ ಎರಡೂ ಅನರ್ಥಕ್ಕೆ ಕಾರಣವಾಗಿರುವವೆಂದೇ ಎಲ್ಲೆಲ್ಲಿಯೂ ಪ್ರಸಿದ್ಧವಾಗಿರುತ್ತದೆ.

ಹೀಗೆಂದು ಆಚಾರ್ಯನು (ಬುದ್ಧಿಯನ್ನು) ಕದಲಿಸಿದರೂ ಶಿಷ್ಯನು (ಸ್ವಲ್ಪವೂ) ಕದಲಲಿಲ್ಲ; ಏಕೆಂದರೆ (ಅವನಿಗೆ) "ಅದು ತಿಳಿಯಲ್ಪಟ್ಟದ್ದಕ್ಕಿಂತಲೂ ಬೇರೆಯೇ, ಮತ್ತು ತಿಳಿಯಲ್ಪಡದೆ ಇರುವದಕ್ಕಿಂತಲೂ ಬೇರೆಯೇ" (೧-೪) ಎಂದು (ಹಿಂದೆ) ಆಚಾರ್ಯನು ಹೇಳಿಕೊಟ್ಟಿದ್ದ **ಆಗಮಸಂಪ್ರದಾಯದ** ಬಲವಿತ್ತು, ಯುಕ್ತ್ಯನುಭವಗಳ ಬಲವೂ ಇತ್ತು. (ಆದ್ದರಿಂದ) ತನಗೆ **ಬ್ರಹ್ಮವಿದ್ಯೆ**ಯಲ್ಲಿ ದೃಢವಾದ ನಿಶ್ಚಯವಿದೆಯೆಂಬುದನ್ನು ತೋರಿಸುವದಕ್ಕಾಗಿ (ಹೀಗೆಂದು) ಗರ್ಜಿಸಿದನು.

(ಭಾಷ್ಯ)

೪೭. ಕಥಮಿತಿ? ಉಚ್ಯತೇ । ಯೋ ಯಃ ಕಶ್ಚಿತ್ ನಃ ಅಸ್ಮಾಕಂ ಸಬ್ರಹ್ಮಚಾರಿಣಾಂ ಮಧ್ಯೇ ತತ್ ಉಕ್ತಂ ವಚನಂ ತತ್ತ್ವತೋ ವೇದ ಸಃ ತತ್ ಬ್ರಹ್ಮ ವೇದ । ಕಿಂ ಪುನಸ್ತದ್ವಚನಮ್? ಇತ್ಯತ ಆಹ-"ನೋ ನ ವೇದೇತಿ ವೇದ ಚ" ಇತಿ । ಯದೇವ "ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ" (೧-೪) ಇತ್ಯುಕ್ತಮ್, ತದೇವ ವಸ್ತು ಅನುಮಾನಾನುಭವಾಭ್ಯಾಂ ಸಂಯೋಜ್ಯ ನಿಶ್ಚಿತಂ ವಾಕ್ಯಾನ್ತರೇಣ "ನೋ ನ ವೇದೇತಿ ವೇದ ಚ" ಇತ್ಯವೋಚತ್, ಆಚಾರ್ಯಬುದ್ಧಿಸಂವಾದಾರ್ಥಂ ಮನ್ದಬುದ್ಧಿಗ್ರಹಣವ್ಯಪೋಹಾರ್ಥಂ ಚ । ತಥಾ ಚ ಗರ್ಜಿತಮುಪಪನ್ನಂ ಭವತಿ "ಯೋ ನ ಸ್ತದ್ವೇದ ತದ್ವೇದ" ಇತಿ ॥

(ಭಾಷ್ಯಾರ್ಥ)

ಹೇಗೆ ಗರ್ಜಿಸಿದನು?-ಎಂದರೆ ಕೇಳಿರಿ. ನಮ್ಮಗಳಲ್ಲಿ ಎಂದರೆ ಜೊತೆಯ ಬ್ರಹ್ಮಚಾರಿಗಳಾದ ನಮ್ಮಗಳೊಳಗೆ ಯಾವನು ಯಾವನೇ ಆಗಲಿ ಈ (ನಾನು) ಹೇಳಿದ ಮಾತನ್ನು ಸರಿಯಾಗಿ ತಿಳಿದುಕೊಳ್ಳಬಲ್ಲನೋ ಅವನೇ ಆ ಬ್ರಹ್ಮವನ್ನು ಬಲ್ಲನು. ಆ ವಚನವಾದರೂ ಯಾವದು?-ಎಂದರೆ ಹೇಳುತ್ತಾನೆ: "ಅರಿತಿಲ್ಲವೆಂದೂ ಇಲ್ಲ, ಅರಿತೂ ಇರುತ್ತೇನೆ" "ಅದು ತಿಳಿಯಲ್ಪಟ್ಟದ್ದಕ್ಕಿಂತಲೂ ಬೇರೆಯೇ,

1. ಸಂಶಯ, ಮಿಥ್ಯಾಜ್ಞಾನ-ಇವೆರಡೂ ಅಜ್ಞಾನದಂತೆಯೇ ಜ್ಞಾನಬಾಧ್ಯವಾಗಿರುತ್ತವೆ. ಅವುಗಳಿರುವವರೆಗೆ ವಸ್ತುವಿನ ಪರಮಾರ್ಥಜ್ಞಾನವಿಲ್ಲದಿರುವದಿಲ್ಲ, ಅನರ್ಥವೂ ಆಗುತ್ತದೆ.

ಮತ್ತು ತಿಳಿಯಲ್ಪಡದೆ ಇರುವದಕ್ಕಿಂತಲೂ ಬೇರೆಯೇ" (೧-೪) ಎಂದು ಯಾವದನ್ನು ಹಿಂದೆ ಹೇಳಿತ್ತೋ ಅದೇ ವಸ್ತುವನ್ನೇ **ಅನುಮಾನ, ಅನುಭವ**-ಈ ಎರಡನ್ನೂ ಜೋಡಿಸಿಕೊಂಡು ನಿಶ್ಚಯಿಸಿ "ಅರಿತಿಲ್ಲವೆಂದೂ ಇಲ್ಲ, ಅರಿತೂ ಇರುತ್ತೇನೆ" ಎಂದು ಬೇರೆಯ ಮಾತಿನಿಂದ ಹೇಳಿರುತ್ತಾನೆ. (ಇದು) ಆಚಾರ್ಯರ ತಿಳಿವಳಿಕೆಗೆ ಹೊಂದಿಕೆಯಾಗುವದಕ್ಕೆ[1], ಮತ್ತು ಅಲ್ಪಬುದ್ಧಿಯವರು ತಿಳಿದುಕೊಂಡಿರುವದನ್ನು ಪರಿಹರಿಸುದದಕ್ಕೆ.[2] ಹೀಗೆಂದು ಇಟ್ಟುಕೊಂಡರೇ "ಇದನ್ನು ನಮ್ಮಗಳಲ್ಲಿ ಯಾವನು ಬಲ್ಲನೋ ಅವನೇ ಇದನ್ನು ಬಲ್ಲನು" ಎಂದು ಗರ್ಜಿಸಿರುವದು ಯುಕ್ತವಾಗುತ್ತದೆ.[3]

(ಭಾಷ್ಯ)

೪೮. ಶಿಷ್ಯಾಚಾರ್ಯಸಂವಾದಾತ್ ಪ್ರತಿನಿವೃತ್ಯ ಸ್ವೇನ ರೂಪೇಣ ಶ್ರುತಿಃ ಸಮಸ್ತಸಂವಾದನಿರ್ವೃತ್ತಮರ್ಥಮೇವ ಬೋಧಯತಿ-'ಯಸ್ಯಾಮತಮ್' ಇತ್ಯಾದಿನಾ ||

(ಭಾಷ್ಯಾರ್ಥ)

ಶಿಷ್ಯಾಚಾರ್ಯರ ಸಂವಾದ (ರೂಪವನ್ನು) ಬಿಟ್ಟು ಶ್ರುತಿಯು ತನ್ನ ರೂಪದಿಂದಲೇ[4] ಒಟ್ಟು ಸಂವಾದದಿಂದ ಏರ್ಪಟ್ಟಿರುವ ವಿಷಯವನ್ನೇ[5] "ಯಸ್ಯಾಮತಮ್" ಎಂದು ಮುಂತಾಗಿ ತಿಳಿಸಿಕೊಡುತ್ತದೆ :

**ಯಸ್ಯಾಮತಂ ತಸ್ಯ ಮತಂ**
**ಮತಂ ಯಸ್ಯ ನ ವೇದ ಸಃ ।**
**ಅವಿಜ್ಞಾತಂ ವಿಜಾನತಾಂ**
**ವಿಜ್ಞಾತಮವಿಜಾನತಾಮ್ ॥ ೩ ॥**

೩. ಯಾವನಿಗೆ (ಅದು) ತಿಳಿಯದಿರುವದೋ ಅವನಿಗೆ ತಿಳಿದಿರುವದು. ಯಾವನಿಗೆ ತಿಳಿದಿರುವದೋ ಅವನು ಅರಿಯನು. ಅರಿಯುವವರಿಗೆ ತಿಳಿಯದೆ ಇರುತ್ತದೆ, ಅರಿಯದವರಿಗೆ ತಿಳಿದಿರುತ್ತದೆ.

---

1 ಗುರುವು ಹೇಳಿದ್ದನ್ನು ತಾನು ತಿಳಿದುಕೊಂಡಿರುವೆನೆಂದು ತಿಳಿಸುವದಕ್ಕೆ.

2 ಆತ್ಮನು ವಿಷಯನಲ್ಲದಿದ್ದರೆ ಅವನನ್ನು ಅರಿಯುವದಕ್ಕೇ ಅಗಲಾರದೆಂದು ಎಣಿಸುವ ಸಾಮಾನ್ಯಬುದ್ಧಿಯ ಜನರ ತಪ್ಪುತಿಳಿವಳಿಕೆಯನ್ನು ಕಳೆಯುವದಕ್ಕೆ

3. ಹಾಗಿಲ್ಲದಿದ್ದರೆ ಯಾರೊಬ್ಬರಿಗೂ ಅದನ್ನು ಅರಿಯಲೇ ಆರರು ಎನ್ನಬೇಕಾಗುತ್ತಿತ್ತೆಂದು ಭಾವ. ಆತ್ಮಜ್ಞಾನದ ಸ್ವಭಾವದ ವಿಷಯಕ್ಕೆ ಬೃ ಭಾ ೧-೪-೧೦, ೪-೪-೨೦ ನೋಡಿರಿ.

4. ಶ್ರುತಿಯೇ ಗುರುಶಿಷ್ಯರಾಗಿ ಸಂವಾದರೂಪವಾಗಿ ಹೇಳಿ ಈಗ ಶ್ರುತಿಯ ರೂಪದಿಂದ ಉಪಸಂಹಾರಮಾಡುತ್ತದೆ.

5 ಬ್ರಹ್ಮವು ಯಾವ ಜ್ಞಾನಕ್ಕೂ ವಿಷಯವಲ್ಲವೆಂಬುದನ್ನೇ ಇನ್ನೊಂದು ಸಲ ಹೇಳಿದರೂ ಪುನರುಕ್ತಿಯಿಲ್ಲ.

(ಭಾಷ್ಯ)

೪೯. ಯಸ್ಯ ಬ್ರಹ್ಮವಿದಃ ಅಮತಮ್ ಅವಿಜ್ಞಾತಮ್ ಅವಿದಿತಂ ಬ್ರಹ್ಮೇತಿ ಮತಮ್ ಅಭಿಪ್ರಾಯಃ ನಿಶ್ಚಯಃ ತಸ್ಯ ಮತಂ ಜ್ಞಾತಂ ಸಮ್ಯಗ್ ಬ್ರಹ್ಮ-ಇತ್ಯಭಿಪ್ರಾಯಃ । ಯಸ್ಯ ಪುನಃ ಮತಂ ವಿದಿತಂ ಮಯಾ ಬ್ರಹ್ಮ-ಇತಿ ನಿಶ್ಚಯಃ ನ ವೇದೈವ ಸಃ ನ ಬ್ರಹ್ಮ ವಿಜಾನಾತಿ ಸಃ ॥

(ಭಾಷ್ಯಾರ್ಥ)

ಯಾವ ಬ್ರಹ್ಮಜ್ಞಾನಿಗೆ (ಅದು) ತಿಳಿಯದಿರುವದೋ ಎಂದರೆ ಬ್ರಹ್ಮವು ಅರಿಯಲ್ಪಡತಕ್ಕದ್ದಲ್ಲ, ತಿಳಿದುಕೊಳ್ಳತಕ್ಕ (ವಿಷಯ)ವಲ್ಲ ಎಂದು ಮತವಿರುವದೋ, (ಹೀಗೆಂಬ) ಅಭಿಪ್ರಾಯವಿರುವದೋ ನಿಶ್ಚಯವಿರುವದೋ ಅವನಿಗೆ ತಿಳಿದಿರುವದು, ಬ್ರಹ್ಮವು ಸರಿಯಾಗಿ ತಿಳಿಯಬಂದಿರುವದು ಎಂದು ಅಭಿಪ್ರಾಯ. ಹಾಗಿಲ್ಲದೆ ಯಾವನಿಗೆ ತಿಳಿದಿರುವದೋ, ಎಂದರೆ (ಯಾವನಿಗೆ) ನಾನು ಬ್ರಹ್ಮವನ್ನು ತಿಳಿದುಕೊಂಡಿರುವೆನು ಎಂಬ ನಿಶ್ಚಯವಾಗಿರುವದೋ ಅವನು ಅರಿಯಲೇ ಇಲ್ಲ, ಅವನು ಬ್ರಹ್ಮವನ್ನು ತಿಳಿದಿರುವದಿಲ್ಲ

(ಭಾಷ್ಯ)

೫೦. ವಿದ್ವದವಿದುಷೋರ್ಯಥೋಕ್ತೌ ಪಕ್ಷೌ ಅವಧಾರಯತಿ-"ಅವಿಜ್ಞಾತಂ ವಿಜಾನತಾಮ್" ಇತಿ[1] । ಅವಿಜ್ಞಾತಮ್ ಅಮತಮ್ ಅವಿದಿತಮೇವ ಬ್ರಹ್ಮ ವಿಜಾನತಾಮ್ ಸಮ್ಯಗ್ವಿದಿತವತಾಮ್ ಇತ್ಯೇತತ್ । ವಿಜ್ಞಾತಂ ವಿದಿತಂ ಬ್ರಹ್ಮ ಅವಿಜಾನತಾಮ್ ಅಸಮ್ಯಗ್ದರ್ಶಿನಾಮ್, ಇನ್ದ್ರಿಯಮನೋಬುದ್ಧಿಷ್ವೇವಾತ್ಮದರ್ಶಿನಾಮ್ ಇತ್ಯರ್ಥಃ । ನ ತ್ವತ್ಯನ್ತಮೇವಾವ್ಯುತ್ಪನ್ನಬುದ್ಧೀನಾಮ್ । ನ ಹಿ ತೇಷಾಂ "ವಿಜ್ಞಾತಮ್ ಅಸ್ಮಾಭಿರ್ಬ್ರಹ್ಮ" ಇತಿ ಮತಿರ್ಭವತಿ । ಇನ್ದ್ರಿಯಮನೋಬುದ್ಧ್ಯುಪಾಧಿಷ್ವಾತ್ಮದರ್ಶಿನಾಂ ತು ಬ್ರಹ್ಮೋಪಾಧಿವಿವೇಕಾನುಪಲಮ್ಭಾತ್ಬುದ್ಧ್ಯಾದ್ಯುಪಾಧೇಶ್ಚ ವಿಜ್ಞಾತತ್ವಾತ್ "ವಿದಿತಂ ಬ್ರಹ್ಮ" ಇತ್ಯುಪಪದ್ಯತೇ ಭ್ರಾನ್ತಿಃ । ಇತ್ಯತಃ ಅಸಮ್ಯಗ್ದರ್ಶನಂ ಪೂರ್ವಪಕ್ಷತ್ವೇನೋಪನ್ಯಸ್ಯತೇ "ವಿಜ್ಞಾತಮವಿಜಾನತಾಮ್" ಇತಿ । ಅಥವಾ ಹೇತ್ವರ್ಥ ಉತ್ತರಾರ್ಧಃ "ಅವಿಜ್ಞಾತಮ್" ಇತ್ಯಾದಿಃ ॥

(ಭಾಷ್ಯಾರ್ಥ)

"ಅವಿಜ್ಞಾತಂ ವಿಜಾನತಾಮ್" (ಎಂಬ ಉತ್ತರಾರ್ಧದಲ್ಲಿ) ಮೇಲೆ ಹೇಳಿರುವ ಜ್ಞಾನಿ, ಅಜ್ಞಾನಿ-ಈ ಇಬ್ಬರ ಪಕ್ಷಗಳನ್ನು ನಿರ್ಣಯಿಸಿ ಹೇಳಿರುತ್ತದೆ.

---

1. ಅವಿಜ್ಞಾತಂ ವಿಜಾನತಾಮ್ ಇತಿ ಎಂಬುದು (ವಾ॥) ಪಾಠದಲ್ಲಿ ಮಾತ್ರ ಇದೆ.

ಅರಿಯುವವರಿಗೆ (ತತ್ತ್ವವನ್ನು) ಸರಿಯಾಗಿ ಬಲ್ಲವರಿಗೆ ಬ್ರಹ್ಮವು ತಿಳಿಯದೆ ಇರುತ್ತದೆ, ತಿಳಿಯತಕ್ಕದ್ದಲ್ಲದೆ ತಿಳಿವಿಗೆ ವಿಷಯವೇ ಅಲ್ಲದೆ ಇರುತ್ತದೆ ಎಂದಭಿಪ್ರಾಯ. ಅರಿಯದವರಿಗೆ ಎಂದರೆ ನಿಜವನ್ನು ಕಾಣದೆ ಇಂದ್ರಿಯ, ಮನಸ್ಸು, ಬುದ್ಧಿ–ಇವುಗಳಲ್ಲಿಯೇ ಆತ್ಮನನ್ನು ಕಾಣುವವರಿಗೆ ತಿಳಿದಿರುತ್ತದೆ, ಬ್ರಹ್ಮವು ತಿಳಿವಿಗೆ ವಿಷಯವಾಗಿರುತ್ತದೆ. (ಇಲ್ಲಿ ಅರಿಯದವರಿಗೆ ಎಂದರೆ ನಿಜವನ್ನರಿಯದವರಿಗೆ ಎಂದೇ ಅರ್ಥ), ಯಾವ ತಿಳಿವಳಿಕೆಯೂ ಇಲ್ಲದವರಿಗೆ ಎಂದರ್ಥವಲ್ಲ[1] ಏಕೆಂದರೆ ಅವರಿಗೆ "ನಾವು ಬ್ರಹ್ಮವನ್ನು ಅರಿತುಕೊಂಡಿರುವೆವು" ಎಂಬ ಅಭಿಪ್ರಾಯವುಂಟಾಗಿರುವದೇ ಇಲ್ಲ. ಇಂದ್ರಿಯ, ಮನಸ್ಸು, ಬುದ್ಧಿ–ಎಂಬ ಉಪಾಧಿಗಳನ್ನು ಆತ್ಮನೆಂದು ತಿಳಿದುಕೊಂಡವರಿಗೆ ಮಾತ್ರ ಬ್ರಹ್ಮದ (ಈ) ಉಪಾಧಿಗಳನ್ನು ವಿಂಗಡಿಸಿ ಅರಿತುಕೊಳ್ಳದೆ ಇರುವದರಿಂದಲೂ ಬುದ್ಧಿಯೇ ಮುಂತಾದ ಉಪಾಧಿಗಳನ್ನು[2] (ಆತ್ಮನೆಂದು) ತಿಳಿದುಕೊಂಡಿರುವದರಿಂದಲೂ "ಬ್ರಹ್ಮವನ್ನು ಅರಿತುಕೊಂಡಿರುವೆವು" ಎಂಬ ಭ್ರಾಂತಿಯುಂಟಾಗಬಹುದಾಗಿದೆ. ಆದ್ದರಿಂದ ಸರಿಯಲ್ಲದ (ಈ) ತಿಳಿವಳಿಕೆಯನ್ನೇ **ಪೂರ್ವಪಕ್ಷ**ವಾಗಿಟ್ಟುಕೊಂಡು[3] "ಅರಿಯುವವರಿಗೆ ತಿಳಿಯದೆ ಇರುತ್ತದೆ" ಎಂಬ ಮಾತನ್ನು ಹೇಳಿದೆ(ಯೆಂದು ತಿಳಿಯಬೇಕು). ಅಥವಾ "ಅರಿಯುವವರಿಗೆ ತಿಳಿಯದೆ ಇರುತ್ತದೆ" ಎಂದು ಮುಂತಾಗಿರುವ (ಮಂತ್ರದ) ಉತ್ತರಾರ್ಧವು (ಪೂರ್ವಾರ್ಧದಲ್ಲಿ ಹೇಳಿರುವ ವಿಷಯಕ್ಕೆ) ಕಾರಣವನ್ನು[4] ಹೇಳುವದಕ್ಕೆ (ಬಂದಿದೆ ಎಂದಾದರೂ ಇಟ್ಟುಕೊಳ್ಳಬಹುದು).

---

1. ಅರಿತವರೆಂದರೆ ಚೆನ್ನಾಗಿ ತಿಳಿದುಕೊಂಡಿರುವವರು, ಅರಿಯದವರೆಂದರೆ ಏನೇನೂ ತಿಳಿಯದವರು ಎಂದೇ ಸರಳವಾಗಿ ಏಕೆ ಅರ್ಥವನ್ನು ಮಾಡಿಬಿಡಬಾರದು ?–ಎಂಬ ಶಂಕೆಗೆ ಇದು ಸಮಾಧಾನ.

2. ಯಾವ ಪರಿಚ್ಛೇದವೂ ಇಲ್ಲದ ಆತ್ಮನಿಗೆ ಶರೀರ, ಪ್ರಾಣ, ಇಂದ್ರಿಯ, ಮನಸ್ಸು, ಬುದ್ಧಿ–ಎಂಬ ಉಪಾಧಿಗಳಿಂದಲೇ ಪರಿಚ್ಛೇದವುಂಟಾಗಿರುವದು ಎಂಬುದನ್ನರಿಯದೆ ಅವಿವೇಕಿಗಳು ಆ ಉಪಾಧಿಗಳನ್ನೇ ಆತ್ಮನೆಂದು ತಿಳಿದು ಮೋಸಹೋಗುವರು.

3. ಅವರ ಭಾವನೆಯನ್ನು ಪೂರ್ವಪಕ್ಷವಾಗಿಟ್ಟುಕೊಂಡು ಆತ್ಮನು ಅವಿಷಯನೆಂಬುದನ್ನು ತಿಳಿಸಿರುತ್ತದೆ ಎಂದು ಭಾವ.

4. ಬ್ರಹ್ಮವನ್ನು ಅರಿತವರಿಗೆ ಅಧ್ಯಸ್ತವಾದ ಜ್ಞೇಯತ್ವವು ಕಾಣುವದಿಲ್ಲ ಎಂದ ಟೀಕೆಯಲ್ಲಿದೆ. ನಿಜವನ್ನರಿತವನಿಗೆ ಬ್ರಹ್ಮವು ಎಂದಿಗೂ ವಿಷಯವಾಗಿರುವದಿಲ್ಲ ; ಆದ್ದರಿಂದ ಅವನ ಮತವೇ ಸರಿಯಾದ ಮತವು–ಎಂದು ಭಾಷ್ಯಕಾರರು ಮಂತ್ರವಾಕ್ಯವನ್ನು ಅನ್ವಯಿಸಿರುವಂತೆ ತೋರುತ್ತದೆ.

## ಬ್ರಹ್ಮವನ್ನು ಹೇಗೆ ಅರಿಯಬೇಕು?

(ಭಾಷ್ಯ)

೫೧. "ಅವಿಜ್ಞಾತಂ ವಿಜಾನತಾಮ್" ಇತ್ಯವಧೃತಮ್। ಯದಿ ಬ್ರಹ್ಮ ಅತ್ಯನ್ತಮೇವ ಅವಿಜ್ಞಾತಮ್, ಲೌಕಿಕಾನಾಂ ಬ್ರಹ್ಮವಿದಾಂ ಚ ಅವಿಶೇಷಃ ಪ್ರಾಪ್ತಃ। "ಅವಿಜ್ಞಾತಂ ವಿಜಾನತಾಮ್" ಇತಿ ಚ ಪರಸ್ಪರವಿರುದ್ಧಮ್। ಕಥಂ ತು ತದ್ಬ್ರಹ್ಮ ಸಮ್ಯಗ್ವಿದಿತಂ ಭವತಿ? ಇತ್ಯೇವಮರ್ಥಮಾಹ—

(ಭಾಷ್ಯಾರ್ಥ)

"ಅರಿಯುವವರಿಗೆ ತಿಳಿಯದೆ ಇರುತ್ತದೆ" ಎಂದು ನಿರ್ಣಯಿಸಿದ್ದಾಯಿತು. ಬ್ರಹ್ಮವು ತೀರ ತಿಳಿಯದೆ ಇದ್ದರೆ ಸಾಮಾನ್ಯ ಜನರಿಗೂ ಬ್ರಹ್ಮಜ್ಞಾನಿಗಳಿಗೂ ಯಾವ ಹೆಚ್ಚುಕಡಿಮೆಯೂ ಇಲ್ಲವೆಂದಾಗುವದು. ಇದಲ್ಲದೆ "ಅರಿಯುವವರಿಗೆ ತಿಳಿಯದೆ ಇರುತ್ತದೆ" ಎಂಬುದು ಒಂದಕ್ಕೊಂದಕ್ಕೆ ವಿರುದ್ಧವಾದ (ಮಾತು). ಆ ಬ್ರಹ್ಮ ವನ್ನು ಹೇಗೆ (ಅರಿತರೆ) ಸರಿಯಾಗಿ ಅರಿತಂತೆ ಆಗುವದು?–ಎಂಬದನ್ನು (ತಿಳಿಸುವ)ದಕ್ಕಾಗಿ[1] (ಮಂತ್ರವು ಹೀಗೆಂದು) ಹೇಳುತ್ತದೆ:

**ಪ್ರತಿಬೋಧವಿದಿತಂ ಮತ-**
**ಮಮೃತತ್ವಂ ಹಿ ವಿನ್ದತೇ।**
**ಆತ್ಮನಾ ವಿನ್ದತೇ ವೀರ್ಯಂ**
**ವಿದ್ಯಯಾ ವಿನ್ದತೇಽಮೃತಮ್ ॥ ೪ ॥**

೪. ಪ್ರತಿ ಬೋಧದಲ್ಲಿಯೂ ತಿಳಿದರೆ (ಸರಿಯಾಗಿ) ತಿಳಿದಂತೆ ಆಯಿತು. ಏಕೆಂದರೆ (ಆಗ) ಅಮೃತತ್ವವನ್ನು ಪಡೆಯುತ್ತಾನೆ. ಆತ್ಮನಿಂದ ವೀರ್ಯವನ್ನು ಪಡೆಯುತ್ತಾನೆ, ವಿದ್ಯೆಯಿಂದ ಅಮೃತತ್ವವನ್ನು ಪಡೆಯುತ್ತಾನೆ.

(ಭಾಷ್ಯ)

೫೨. ಪ್ರತಿಬೋಧವಿದಿತಂ ಬೋಧಂ ಬೋಧಂ ಪ್ರತಿ ವಿದಿತಮ್। ಬೋಧಶಬ್ದೇನ ಬೌದ್ಧಾಃ ಪ್ರತ್ಯಯಾ ಉಚ್ಯನ್ತೇ। ಸರ್ವೇ ಪ್ರತ್ಯಯಾ ವಿಷಯೀಭವನ್ತಿ ಯಸ್ಯ ಸ ಆತ್ಮಾ ಸರ್ವಬೋಧಾನ್ ಪ್ರತಿಬುಧ್ಯತೇ ಸರ್ವಪ್ರತ್ಯಯದರ್ಶೀ ಚಿಚ್ಛಕ್ತಿಸ್ವರೂಪಮಾತ್ರಃ ಪ್ರತ್ಯಯೈರೇವ ಪ್ರತ್ಯಯೇಷ್ವವಿಶಿಷ್ಟತಯಾ ಲಕ್ಷ್ಯತೇ ನಾನ್ಯದ್

---

1. ಈ ಅಭಿಪ್ರಾಯವನ್ನು ಹಿಂದಿನ ಮಂತ್ರದ ಭಾಷ್ಯದಲ್ಲಿಯೇ ಹೇಳಿದೆಯಾದರೂ ಮಂತ್ರದಲ್ಲಿ ಅದು ಸ್ಪಷ್ಟವಾಗಿರುವದಿಲ್ಲ. ಅದನ್ನು ಈ ಮುಂದಿನ ಮಂತ್ರದಲ್ಲಿ ಸ್ಪಷ್ಟಗೊಳಿಸಲಾಗುತ್ತದೆ ಎಂದಭಿಪ್ರಾಯ.

ದ್ವಾರಮ್ ಅನ್ತರಾತ್ಮನೋ ವಿಜ್ಞಾನಾಯ । ಅತಃ ಪ್ರತ್ಯಯಪ್ರತ್ಯಗಾತ್ಮತಯಾ ವಿದಿತಂ ಬ್ರಹ್ಮ ಯದಾ ತದಾ ತತ್ ಮತಂ [1] ತತ್ಸಮ್ಯಗ್ದರ್ಶನಮ್ ಇತ್ಯರ್ಥಃ ॥

(ಭಾಷ್ಯಾರ್ಥ)

'ಪ್ರತಿ ಬೋಧದಲ್ಲಿಯೂ ತಿಳಿದರೆ' ಎಂದರೆ ಒಂದೊಂದು ಬೋಧದಲ್ಲಿಯೂ ತಿಳಿದರೆ ಎಂದರ್ಥ. ಇಲ್ಲಿ 'ಬೋಧ'ವೆಂಬ ಶಬ್ದವು ಬುದ್ಧಿಯ **ಪ್ರತ್ಯಯ**ಗಳನ್ನು ಹೇಳುತ್ತದೆ. ಎಲ್ಲಾ ಪ್ರತ್ಯಯಗಳೂ ಯಾವಾತನಿಗೆ ವಿಷಯವಾಗುವವೋ ಆ ಆತ್ಮನು [2] ಎಲ್ಲಾ ಬೋಧಗಳನ್ನೂ ಅರಿಯುತ್ತಾನೆ. ಎಲ್ಲಾ ಪ್ರತ್ಯಯಗಳನ್ನೂ ನೋಡುವ ಚೈತನ್ಯಶಕ್ತಿಯ ಸ್ವರೂಪವೇ ಆಗಿರುವ (ಆ ಆತ್ಮನು) ಪ್ರತ್ಯಯಗಳಿಂದಲೇ [3] (ಎಲ್ಲಾ) ಪ್ರತ್ಯಯಗಳಲ್ಲಿಯೂ ಸಮಾನವಾಗಿದ್ದುಕೊಂಡು [4] ತೋರುತ್ತಾನೆ; ಒಳಗಿರುವ ಆತ್ಮನನ್ನು ಅರಿಯುವದಕ್ಕೆ ಮತ್ತೊಂದು ದ್ವಾರವಿಲ್ಲ. ಆದ್ದರಿಂದ ಪ್ರತ್ಯಯಗಳ ಒಳ ಆತ್ಮನೆಂದು [5] ಯಾವಾಗ ಬ್ರಹ್ಮವನ್ನು ಅರಿಯುತ್ತೇವೆಯೋ ಆಗ ಅದನ್ನು ಅರಿತಂತಾಗುವದು. ಅದೇ ಸರಿಯಾದ ದರ್ಶನವು ಎಂದರ್ಥ.

(ಭಾಷ್ಯ)

೫೩. ಸರ್ವಪ್ರತ್ಯಯದರ್ಶಿತ್ವೇ ಚ ಉಪಜನಾಪಾಯವರ್ಜಿತದೃಕ್ಸ್ವರೂಪತಾ, ನಿತ್ಯತ್ವಂ, ವಿಶುದ್ಧಸ್ವರೂಪತ್ವಮ್, ಆತ್ಮತ್ವಂ, ನಿರ್ವಿಶೇಷತಾ, ಏಕತ್ವಂ ಚ ಸರ್ವಭೂತೇಷು ಸಿದ್ಧಂ ಭವೇತ್ । ಲಕ್ಷಣಭೇದಾಭಾವಾತ್ ವ್ಯೋಮ್ನ ಇವ ಘಟಗಿರಿಗುಹಾದಿಷು । ವಿದಿತಾವಿದಿತಾಭ್ಯಾಮ್ ಅನ್ಯದ್ ಬ್ರಹ್ಮ-ಇತ್ಯಾಗಮವಾಕ್ಯಾರ್ಥ ಏವಂ ಪರಿಶುದ್ಧ ಏವೋಪಸಂಹೃತೋ ಭವತಿ । "ದೃಷ್ಟೇರ್ದ್ರಷ್ಟಾ ಶ್ರುತೇಃ ಶ್ರೋತಾ ಮತೇರ್ಮನ್ತಾ ವಿಜ್ಞಾತೇರ್ವಿಜ್ಞಾತಾ" (ಬೃ. ೩-೪-೨) ಇತಿ ಹಿ ಶ್ರುತ್ಯನ್ತರಮ್ ॥

---

1. "ತದಾ ತತ್ಸಮ್ಯಗ್ದರ್ಶನಮ್" (ಅ॥) ಪಾಠ; ತದಾ ಇಲ್ಲದಿದ್ದರೂ ಸಾಗುತ್ತದೆ.

2. ಪ್ರತ್ಯಯಗಳನ್ನು ಪ್ರತ್ಯಯಗಳೇ ನೋಡಲಾರವು. ಆಯಾ ಪ್ರತ್ಯಯವು ತನ್ನನ್ನು ತಾನು ನೋಡಲಾರದೆಂಬುದು ಸಿದ್ಧವಷ್ಟೆ; ಅದೇ ಕಾಲದಲ್ಲಿ ಮತ್ತೊಂದು ಪ್ರತ್ಯಯವಿಲ್ಲದ್ದರಿಂದ ಮತ್ತೊಂದರಿಂದಲೂ ಅದು ನೋಡಲ್ಪಡಲಾರದು. ಎಲ್ಲಾ ಪ್ರತ್ಯಯಗಳ ಹುಟ್ಟು ಹೋಂದುಗಳನ್ನೂ ನೋಡುವವನು ಸಾಕ್ಷಿಯೇ.

3. ಪ್ರತ್ಯಯಗಳ ಮೂಲಕವೇ ಬ್ರಹ್ಮಾತ್ಮಸ್ವರೂಪವು ತಿಳಿಯಬರುತ್ತದೆ. ತೈ. ಭಾ. ೨-೬.

4. ಹಿಂದೆ ನೋಡಿದ ನಾನೇ ಈಗ ಕೇಳುತಿದ್ದೇನೆ ಎಂಬ ಅನುಭವಬಲದಿಂದ ಆತ್ಮನು ಎಲ್ಲಾ ಪ್ರತ್ಯಯಗಳಿಗೂ ಸಮಾನನಾಗಿರುತ್ತಾನೆಂದು ಏರ್ಪಡುತ್ತದೆ; ಅಹಂಕಾರವನ್ನು ಕೂಡ ನೋಡುತ್ತಿರುವ ಸಾಕ್ಷಿಯು ಎಲ್ಲಾ ಬುದ್ಧಿಗಳಿಗೂ ಸಾಕ್ಷಿಯೆಂದೂ ಏರ್ಪಡುತ್ತದೆ.

5. ಪ್ರತ್ಯಯಗಳನ್ನು ಬೆಳಗುವ ಪ್ರತ್ಯಯಗಳ ತಿರುಳಾದ ಆತ್ಮನೆಂದು.

(ಭಾಷ್ಯಾರ್ಥ)

(ಬ್ರಹ್ಮವು) ಎಲ್ಲಾ ಪ್ರತ್ಯಯಗಳನ್ನೂ ನೋಡುವದೆಂದು ಇಟ್ಟುಕೊಂಡರೆ (ಅದು)ಹುಟ್ಟುಹೊಂದುಗಳಿಲ್ಲದ[1] ದೃಕ್ಕಿನ ಸ್ವರೂಪವೆಂದೂ ನಿತ್ಯವೆಂದೂ ವಿಶುದ್ಧವಾದ ಸ್ವರೂಪವುಳ್ಳದ್ದೆಂದೂ ಆತ್ಮನೆಂದೂ ಯಾವ ವಿಶೇಷಗಳೂ ಇಲ್ಲದ್ದೆಂದೂ ಸರ್ವಪ್ರಾಣಿಗಳಲ್ಲಿಯೂ ಒಂದೇ[2] ಎಂದೂ ಸಿದ್ಧವಾಗುತ್ತದೆ. ಏಕೆಂದರೆ ಗಡಿಗೆ, ಬೆಟ್ಟದ ಗವಿ ಮುಂತಾದವುಗಳಲ್ಲಿರುವ ಆಕಾಶಕ್ಕೆ ಹೇಗೆ (ಸ್ವರೂಪದಲ್ಲಿ ಭೇದವಿರುವದಿಲ್ಲವೋ) ಹಾಗೆಯೇ (ಇಂಥ ಬ್ರಹ್ಮಕ್ಕೂ) ಸ್ವರೂಪದಲ್ಲಿ ಭೇದವಿರುವದಿಲ್ಲ. ಈ ರೀತಿಯಾಗಿ ಬ್ರಹ್ಮವು ಅರಿಯಲ್ಪಡತಕ್ಕದ್ದು, ಅರಿಯಲ್ಪಡತಕ್ಕದ್ದಲ್ಲದ್ದು–ಈ ಎರಡಕ್ಕಿಂತಲೂ ಬೇರೆಯೇ ಎಂಬ (೧-೪) **ಆಗಮ**ವಾಕ್ಯದ ಅರ್ಥವನ್ನೂ ಪರಿಶೋಧನೆಮಾಡಿಯೇ[3] ಉಪಸಂಹಾರಮಾಡಿದಂತಾಗುತ್ತದೆ. "ದೃಷ್ಟಿಯನ್ನು ನೋಡುವವನು, ಶ್ರುತಿಯನ್ನು ಕೇಳುವವನು, ಮತಿಯನ್ನು ಮನನಮಾಡುವವನು, ವಿಜ್ಞಾನವನ್ನು ಅರಿಯುವವನು"[4] (ಬೃ. ೩-೪-೨) ಎಂದಲ್ಲವೆ, ಮತ್ತೊಂದು ಶ್ರುತಿಯಲ್ಲಿದೆ?[5]

## ವ್ಯಾಖ್ಯಾನಾಂತರದಲ್ಲಿ ದೋಷ

(ಭಾಷ್ಯ)

೫೪. ಯದಾ ಪುನರ್ಬೋಧಕ್ರಿಯಾಕರ್ತಾ ಇತಿ ಬೋಧಕ್ರಿಯಾಲಕ್ಷಣೇನ ತತ್ಕರ್ತಾರಂ ವಿಜಾನಾತೀತಿ ಬೋಧಲಕ್ಷಣೇನ ವಿದಿತಂ ಪ್ರತಿಬೋಧವಿದಿತಮ್–ಇತಿ ವ್ಯಾಖ್ಯಾಯತೇ ಯಥಾ ಯೋ ವೃಕ್ಷಶಾಖಾಶ್ಚಾಲಯತಿ ಸ ವಾಯುರಿತಿ, ತದ್ವತ್ । ತದಾ ಬೋಧಕ್ರಿಯಾಶಕ್ತಿಮಾನ್ ಆತ್ಮಾ ದ್ರವ್ಯಮ್, ನ ಬೋಧಸ್ವರೂಪ ಏವ ।

---

1. ಆತ್ಮನಿಗೆ ಹುಟ್ಟುಹೊಂದುಗಳಿವೆಯೆಂಬುದು ನಿಸ್ಸಾಕ್ಷಿಕ.

2. ಕಾಲವೂ ವಿಷಯವಾಗಿರುವದರಿಂದ ಅದನ್ನು ನೋಡುವ ಸಾಕ್ಷಿಗೆ ಕಾಲಕೃತವಾದ ಅನಿತ್ಯತ್ವವಿಲ್ಲ. ಯಾವಾಗಲೂ ವಿಷಯಿಯಾಗಿರುವದರಿಂದ ಆತ್ಮನಿಗೆ ವಿಷಯದ ಸೋಂಕೆಂಬ ಅಶುದ್ಧಿ ಒಂದಿಷ್ಟೂ ಇರುವದಿಲ್ಲ. ಅಹಂಕಾರಕ್ಕೂ ಒಳಿತಿರುಳಾಗಿರುವದರಿಂದ ಈ ಸಾಕ್ಷಿಯೇ ಆತ್ಮನು. ಸಾಕ್ಷಿಗೆ ಕಾಲದೇಶಾದಿಸಂಬಂಧವಿಲ್ಲದ್ದರಿಂದ ಅವರಲ್ಲಿ ಸಜಾತೀಯವಿಜಾತೀಯ ಸ್ವಗತಭೇದಗಳೇನೂ ಇರಲಾರವಾಗಿ ಅದು ಒಂದೇ.

3. ವಿದಿತ, ಅವಿದಿತ-ಎಂಬಿವೆರಡೂ ಸೋಪಾಧಿಕರೂಪಗಳು, ಪ್ರತ್ಯಯಗಳಿಗೆ ಸಾಕ್ಷಿಯಾದದ್ದು ಆತ್ಮ, ಅದು ಅವೆರಡಕ್ಕಿಂತಲೂ ಬೇರೆ ಎಂಬುದನ್ನು ಪರಿಶುದ್ಧಿಮಾಡಿ ತಿಳಿಸಿದಂತಾಗುತ್ತದೆ.

4. ಇದು ಶ್ರುತಿಯ ಅರ್ಥವೇ ಹೊರತು ಯಥಾಕ್ಷರವಾಗಿ ಉದಾಹರಿಸಿದ ಶ್ರುತಿಯಲ್ಲ.

5. ನಾವು ಹೇಳಿದಂತೆ ಅರ್ಥಮಾಡಿದರೆ ಆ ಶ್ರುತಿಗೂ ಈ ಮಂತ್ರಕ್ಕೂ ಏಕವಾಕ್ಯತೆ ಬರುತ್ತದೆ ಎಂದು ಭಾವ.

ಬೋಧಸ್ತು ಜಾಯತೇ ವಿನಶ್ಯತಿ ಚ । ಯದಾ ಬೋಧೋ ಜಾಯತೇ ತದಾ ಬೋಧ ಕ್ರಿಯಯಾ ಸವಿಶೇಷಃ । ಯದಾ ಬೋಧೋ ನಶ್ಯತಿ ತದಾ ನಷ್ಟಬೋಧೋ ದ್ರವ್ಯ ಮಾತ್ರಂ ನಿರ್ವಿಶೇಷಃ । ತತ್ರ ಏವಂ ಸತಿ ವಿಕ್ರಿಯಾತ್ಮಕಃ ಸಾವಯವೋಽನಿತ್ಯೋಽ ಶುದ್ಧ ಇತ್ಯಾದಯೋ ದೋಷಾ ನ ಪರಿಹರ್ತುಂ ಶಕ್ಯನ್ತೇ ॥

(ಭಾಷ್ಯಾರ್ಥ)

ಇದನ್ನು ಬಿಟ್ಟು ಬೋಧಕ್ರಿಯೆಯ ಕರ್ತೃವೇ ಆತ್ಮನು[1], ಆದ್ದರಿಂದ ಬೋಧ ಕ್ರಿಯೆಯೆಂಬ ಹೆಗ್ಗುರುತಿನಿಂದ ಅದರ ಕರ್ತೃವನ್ನು ತಿಳಿದುಕೊಳ್ಳುತ್ತಾರೆ. ಆದ್ದ ರಿಂದ ಬೋಧವೆಂಬ ಹೆಗ್ಗುರುತಿನಿಂದ ತಿಳಿದದ್ದು ಪ್ರತಿಬೋಧದಿಂದ ತಿಳಿದದ್ದಾಗು ವದು–ಎಂದು ವ್ಯಾಖ್ಯಾನಮಾಡಿದರೆ, ಎಂದರೆ ‘ ಮರದ ಕೊಂಬೆಗಳನ್ನು ಯಾವದು ಅಲುಗಾಡಿಸುತ್ತಿರುವದೋ ಅದೇ ವಾಯು ’ ಎಂಬಂತೆ (ಯಾವನು ಅರಿಯುವದೆಂಬ ಕ್ರಿಯೆಯನ್ನು ಮಾಡುತ್ತಿರುವನೋ ಅವನೇ ಆತ್ಮನು–ಎಂದು ತಿಳಿದದ್ದು ಪ್ರತಿ ಬೋಧದಿಂದ ತಿಳಿದದ್ದಾಗುವದು) ಎಂದು ವ್ಯಾಖ್ಯಾನಮಾಡಿದರೆ[2] ಆಗ ಆತ್ಮನು ಬೋಧಕ್ರಿಯೆಯ ಶಕ್ತಿಯುಳ್ಳವನು, ದ್ರವ್ಯವು[3], ಅರಿವಿನ ಸ್ವರೂಪವೇ (ಆಗಿರುವವ) ನಲ್ಲ ಎಂದಾಗುವದು ಬೋಧವು ಮಾತ್ರ ಹುಟ್ಟುತ್ತಲೂ ನಾಶವಾಗುತ್ತಲೂ ಇರು ವದು. ಯಾವಾಗ ಬೋಧವು ಹುಟ್ಟುವದೋ ಆಗ ಅರಿಯುವದೆಂಬ ಕ್ರಿಯೆಯಿಂದ ವಿಶೇಷಸಹಿತನಾಗುತ್ತಾನೆ, ಯಾವಾಗ ಬೋಧವು ನಾಶವಾಗುವದೋ ಆಗ ಅರಿ ವನ್ನು ಕಳೆದುಕೊಂಡು ಯಾವ ವಿಶೇಷವೂ ಇಲ್ಲದ ಬರಿಯ ದ್ರವ್ಯವಾಗುತ್ತಾನೆ (ಎನ್ನ ಬೇಕಾಗುವದು). ಆಗ ಈ (ಪಕ್ಷದಲ್ಲಿ ಆತ್ಮನು) ಮಾರ್ಪಾಡುಗಳುಳ್ಳವನು, ಅವ ಯವಗಳಿಂದ ಕೂಡಿರುವವನು, ಅನಿತ್ಯನು, ಅಶುದ್ಧನು–ಎಂದು ಮುಂತಾಗಿ (ಉಂಟಾಗುವ) ದೋಷಗಳನ್ನು ಪರಿಹರಿಸುವದು (ಯಾರಿಂದಲೂ) ಆಗಲಾರದು.

(ಭಾಷ್ಯ)

೫೫. ಯದಪಿ **ಕಾಣಾದಾನಾಮ್** ಆತ್ಮಮನಃಸಂಯೋಗಜೋ ಬೋಧ ಆತ್ಮನಿ ಸಮವೈತಿ । ಅತ ಆತ್ಮನಿ ಬೋದ್ಧೃತ್ವಮ್, ನ ತು ವಿಕ್ರಿಯಾತ್ಮಕ ಆತ್ಮಾ ।

---

1. ಇದು ಭರ್ತೃಪ್ರಪಂಚರ ವ್ಯಾಖ್ಯಾನ; ಬೃ. ಭಾ. ೪-೪-೨ನ್ನು ನೋಡಿ.

2. ಅನುಮಾನಪ್ರಮಾಣದಿಂದ ಅರಿಯುವ ಪ್ರಯತ್ನವಿದು; ಆತ್ಮನನ್ನು ನೇರಾಗಿ ಅರಿ ತಂತೆ ಆಗುವದಿಲ್ಲವೆಂಬುದಲ್ಲದೆ ಅವಿಷಯನಾದ ಆತ್ಮನನ್ನು ವಿಷಯನನ್ನಾಗಿ ತಿಳಿಯುವದಕ್ಕೆ ಹೊರಡುವದೆಂಬ ದೋಷವೂ ಈ ಪಕ್ಷಕ್ಕೆ ಗಂಟುಬೀಳುತ್ತದೆ. ಐ. ಭಾ. ದ ೧ನೆಯ ಅಧ್ಯಾ ಯದ ಕೊನೆಯಲ್ಲಿರುವ ಚರ್ಚೆಯನ್ನು ನೋಡಿರಿ.

3. ಆತ್ಮನಲ್ಲಿ ದ್ರವ್ಯಗುಣಕ್ರಿಯೆಗಳ ಸ್ವಭಾವವನ್ನು ಕಲ್ಪಿಸುವದು ಅವನ ಚೈತನ್ಯ ಸ್ವರೂಪವನ್ನರಿಯದ್ದರ ಫಲವೆಂದು ಭಾವ.

ದ್ರವ್ಯಮಾತ್ರಸ್ತು ಭವತಿ ಘಟ ಇವ ರಾಗಸಮವಾಯಿ । ಅಸ್ಮಿನ್ ಪಕ್ಷೇಽಪಿ ಅಚೇತನಂ ದ್ರವ್ಯಮಾತ್ರಂ ಬ್ರಹ್ಮ-ಇತಿ "ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೭) ಇತ್ಯಾದ್ಯಾಃ ಶ್ರುತಯೋ ಬಾಧಿತಾಃ ಸ್ಯುಃ । ಆತ್ಮನೋ ನಿರವಯವತ್ವೇನ ಪ್ರದೇಶಾಭಾವಾತ್ ನಿತ್ಯಸಂಯುಕ್ತತ್ವಾಚ್ಚ ಮನಸಃ ಸ್ಮೃತ್ಯುತ್ಪತ್ತಿನಿಯಮಾನುಪಪತ್ತಿರಪರಿಹಾರ್ಯಾ ಸ್ಯಾತ್ । ಸಂಸರ್ಗಧರ್ಮಿತ್ವಂ ಚಾತ್ಮನಃ ಶ್ರುತಿಸ್ಮೃತಿನ್ಯಾಯವಿರುದ್ಧಂ ಕಲ್ಪಿತಂ ಸ್ಯಾತ್ । "ಅಸಙ್ಗೋ ನ ಹಿ ಸಜ್ಜತೇ" (ಬೃ. ೩-೯-೨೬, ೪-೫-೧೫) "ಅಸಕ್ತಂ ಸರ್ವಭೃತ್" (ಗೀ ೧೩-೧೪) ಇತಿ ಹಿ ಶ್ರುತಿಸ್ಮೃತೀ । ನ್ಯಾಯಶ್ಚ-ಗುಣವದ್ಗುಣವತಾ ಸಂಸೃಜ್ಯತೇ ನಾತುಲ್ಯಜಾತೀಯಮ್ । ಅತೋ ನಿರ್ಗುಣಂ ನಿರ್ವಿಶೇಷಂ ಸರ್ವವಿಲಕ್ಷಣಂ ಕೇನಚಿದಪ್ಯತುಲ್ಯಜಾತೀಯೇನ ಸಂಸೃಜ್ಯತೇ ಇತ್ಯೇತತ್ ನ್ಯಾಯವಿರುದ್ಧಂ ಭವೇತ್ । ತಸ್ಮಾತ್ ನಿತ್ಯಾಲುಪ್ತಜ್ಞಾನಸ್ವರೂಪಜ್ಯೋತಿರಾತ್ಮಾ ಬ್ರಹ್ಮ-ಇತ್ಯಯಮರ್ಥಃ ಸರ್ವಬೋಧಬೋದ್ಧೃತ್ವೇ ಆತ್ಮನಃ ಸಿಧ್ಯತಿ ನಾನ್ಯಥಾ । ತಸ್ಮಾತ್ 'ಪ್ರತಿಬೋಧವಿದಿತಂ ಮತಮ್' ಇತಿ ಯಥಾವ್ಯಾಖ್ಯಾತ ಏವಾರ್ಥೋಽಸ್ಮಾಭಿಃ ॥

(ಭಾಷ್ಯಾರ್ಥ)

ಇನ್ನು **ಕಾಣಾದರ ಮತ**ವನ್ನು (ನೋಡೋಣ). ಆತ್ಮ, ಮನಸ್ಸು,-ಈ ಎರಡರ **ಸಂಯೋಗ**ದಿಂದ ಉಂಟಾಗುವ ಅರಿವು ಆತ್ಮನಲ್ಲಿ **ಸಮವಾಯ**[1] ಸಂಬಂಧದಿಂದ ಸೇರಿಕೊಂಡಿರುತ್ತದೆ. ಆದರಿಂದ ಆತ್ಮನು ಅರಿಯುವಾತನಾಗುತ್ತಾನೆಯೇ ಹೊರತು (ಅವನು ನಿಜವಾಗಿ) ಮಾರ್ಪಾಡುಗಳುಳ್ಳವನೇನೋ ಅಲ್ಲ. ಆದರೆ ಕೆಂಪು ಗುಣವು ಸಮವಾಯದಿಂದ ಸೇರಿಕೊಂಡಿರುವ ಗಡಿಗೆಯಂತೆ ಬರಿಯ ದ್ರವ್ಯವಾಗಿರುತ್ತಾನೆ (ಎಂಬುದು ಅವರ ಮತವು). ಈ ಪಕ್ಷದಲ್ಲಿಯೂ ಬ್ರಹ್ಮವು ಅಚೇತನವಾದ ಬರಿಯ ದ್ರವ್ಯವೆಂದಾಗುವದರಿಂದ "ವಿಜ್ಞಾನವೂ ಆನಂದವೂ ಆಗಿರುವದು ಬ್ರಹ್ಮವು" (ಬೃ. ೩-೯-೭) ಮುಂತಾದ[2] ಶ್ರುತಿಗಳು ಬಾಧಿತವಾಗುವವು. ಆತ್ಮ

---

1. ಬೇರೆಬೇರೆಯಾಗಿರುವ ಎರಡು ವಸ್ತುಗಳಿಗೆ ಆಗುವ ಸೇರುವಿಕೆಯನ್ನು ಸಂಯೋಗವೆಂದೂ ದ್ರವ್ಯಗುಣಗಳಂತೆ ನಿತ್ಯವಾಗಿ ಸೇರಿಕೊಂಡಿರುವ ಪದಾರ್ಥಗಳ ಸೇರುವಿಕೆಯನ್ನು ಸಮವಾಯವೆಂದೂ ವೈಶೇಷಿಕರು ಕರೆಯುತ್ತಾರೆ. ಇದರ ಖಂಡನೆಯನ್ನು ಸೂ. ಭಾ. ೨-೨-೧೭ರಲ್ಲಿ ನೋಡಿ.

2. ಆತ್ಮನಲ್ಲಿ ಚೈತನ್ಯವಿಲ್ಲ, ಚೈತನ್ಯವು ಆತ್ಮನ ಗುಣ-ಎಂದು ತಾರ್ಕಿಕರು ಹೇಳುತ್ತಾರೆ. ಇತರಭಾಷ್ಯಕಾರರು ಆತ್ಮನು ಚೈತನ್ಯಸ್ವರೂಪನು, ಅವನಲ್ಲಿ ಚೈತನ್ಯಗುಣವೂ ಉಂಟು ಎನ್ನುತ್ತಾರೆ. ಗುಣದ ಮೂಲಕವಾಗಿ ಗುಣಿಯಾದ ಆತ್ಮನಲ್ಲಿ ವಿಕಾರವುಂಟಾಗುವದೆಂಬ ದೋಷವನ್ನು ಇಲ್ಲಿ ಆಚಾರ್ಯರು ಹೇಳಿರುತ್ತಾರೆ.

ನಲ್ಲಿ ಯಾವ ಅವಯವಗಳೂ ಇಲ್ಲದ್ದರಿಂದ ಅವನಲ್ಲಿ ಪ್ರದೇಶವೆಂಬುದಿಲ್ಲವಾದ್ದರಿಂದ[1] ಮನಸ್ಸಿನೊಡನೆ ಯಾವಾಗಲೂ **ಸಂಯೋಗ**ವಾಗಿಯೇ ಇರುವದರಿಂದಲೂ ಸ್ಮೃತಿಯು (ಇಂಥ ಕಾಲದಲ್ಲಿಯೇ) ಉಂಟಾಗಬೇಕೆಂಬ ನಿಯಮವು ಹೊಂದದೆ ಹೋಗುವದು[2] (ಎಂಬ ದೋಷವನ್ನು ಅವರು) ಪರಿಹರಿಸುವದು ಆಗಲಾರದು. **ಆತ್ಮನು ಮತ್ತೊಂದರೊಡನೆ ಸಂಬಂಧವಾಗಬಹುದಾದ ಧರ್ಮಿಯೆಂದು ಶ್ರುತಿಸ್ಮೃತಿಯುಕ್ತಿಗಳಿಗೆ ವಿರುದ್ಧವಾಗಿ ಕಲ್ಪಿಸಬೇಕಾಗುವದು.** "(ಆತ್ಮನು) ಅಸಂಗನಾಗಿರುತ್ತಾನೆ, ಏಕೆಂದರೆ ಆವನು ಏತಕ್ಕೂ ಅಂಟಿಕೊಳ್ಳುವದಿಲ್ಲ" (ಬೃ ೩-೯-೨೬, ೪-೬-೧೫), "(ಅದು) ಏತರೊಡನೆಯೂ ಸೇರಿರುವದಿಲ್ಲ, ಎಲ್ಲವನ್ನೂ ಧರಿಸಿರುವದು" (ಗೀ. ೧೩-೧೪) ಎಂದಲ್ಲವೆ, ಶ್ರುತಿಸ್ಮೃತಿಗಳೆರಡೂ (ಹೇಳುತ್ತವೆ)? ನ್ಯಾಯವೂ (ಇದಕ್ಕೆ ಅನುಗುಣವಾಗಿರುತ್ತದೆ). ಗುಣವುಳ್ಳದ್ದು ಗುಣವುಳ್ಳದ್ದರೊಡನೆ ಸೇರಿಕೊಳ್ಳುವದೇ ಹೊರತು ಬೇರೆಯ ಜಾತಿಯದು (ಸೇರಿಕೊಳ್ಳಲಾರದು), ಆದ್ದರಿಂದ ಯಾವ ಗುಣವೂ ಇಲ್ಲದೆ ಯಾವ ವಿಶೇಷವೂ ಇಲ್ಲದೆ ಎಲ್ಲಾ (ಪದಾರ್ಥಗಳಿಗಿಂತಲೂ) ಬೇರೆಯ ಸ್ವಭಾವದ (ವಸ್ತುವು) ಬೇರೆಯ ಜಾತಿಯ[3] ಯಾವದೋ ಒಂದು (ವಸ್ತುವಿನೊಡನೆ) ಸೇರಿಕೊಳ್ಳುವದೆಂಬುದು ಯುಕ್ತಿವಿರುದ್ಧವಾಗುವದು. ಆದ್ದರಿಂದ ಎಂದಿಗೂ ಲೋಪವಿಲ್ಲದ[4] ಜ್ಞಾನಸ್ವರೂಪದ ಬೆಳಕಾಗಿರುವ ಆತ್ಮನೇ ಬ್ರಹ್ಮವು ಎಂಬೀ ಅರ್ಥವು ಆತ್ಮನು ಸಕಲ ಪ್ರತ್ಯಯಗಳನ್ನೂ ಅರಿಯುವನೆಂದಾದರೇ ಸಿದ್ಧಿಸುವದೇಹೊರತು ಬೇರೆ ಯಾವ ರೀತಿಯಿಂದಲೂ (ಸಿದ್ಧಿಸು)ವದಿಲ್ಲ, ಆದ್ದರಿಂದ "ಪ್ರತಿಬೋಧದಲ್ಲಿಯೂ ತಿಳಿದರೆ (ಸರಿಯಾಗಿ) ತಿಳಿದಂತಾಯಿತು" ಎಂಬುದಕ್ಕೆ ನಾವು ವ್ಯಾಖ್ಯಾನಮಾಡಿದಂತೆಯೇ ಅರ್ಥ.

(ಭಾಷ್ಯ)

೨೬. ಯತ್ಪುನಃ ಸ್ವಸಂವೇದ್ಯತಾ 'ಪ್ರತಿಬೋಧವಿದಿತಮ್' ಇತ್ಯಸ್ಯ ವಾಕ್ಯಸ್ಯಾರ್ಥೋ ವರ್ಣ್ಯತೇ ತತ್ರ ಭವತಿ ಸೋಪಾಧಿಕತ್ವೇ ಆತ್ಮನೋ ಬುದ್ಧ್ಯುಪಾಧಿ

---

1. ಮರಕ್ಕೆ ಬುಡ, ಕೊನೆ-ಎಂಬ ಪ್ರದೇಶಗಳಿರುವದರಿಂದ "ಕೊನೆಯಲ್ಲಿ ಕಪಿಯ ಸಂಯೋಗವಿದೆ, ಬುಡದಲ್ಲಿಲ್ಲ" ಎಂದು ಹೇಳಬಹುದು; ಆತ್ಮನ ವಿಷಯದಲ್ಲಿ ಹೀಗೆ ಹೇಳುವದಕ್ಕೆ ಬರುವಂತಿಲ್ಲ.

2. ಅನುಭವವುಂಟಾದಬಳಿಕ ಸ್ಮೃತಿಯುಂಟಾಗಲು ಕಾರಣವೇನೆಂಬುದನ್ನು ಅವರು ಹೇಳಲಾರರು. ಮಾಂ. ಕಾ. ಭಾ. ೩-೫.

3. ಆತ್ಮನು ದ್ರವ್ಯಗುಣಕ್ರಿಯೆಗಳಲ್ಲದ್ದರಿಂದ ಅವನಲ್ಲಿ ಯಾವ ಜಾತಿಯೂ ಇಲ್ಲ; ಅಂಥ ಆತ್ಮನಿಗೂ ಅನಾತ್ಮಕ್ಕೂ ಸಂಯೋಗವು ಹೇಗಾದೀತು?

4. ಬೃ. ೪-೩-೩೦ರ ಸೂಚನೆ.

ಸ್ವರೂಪತ್ವೇನ ಭೇದಂ ಪರಿಕಲ್ಪ್ಯ “ಆತ್ಮನಾತ್ಮಾನಂ ವೇತ್ತಿ” ಇತಿ ಸಂವ್ಯವಹಾರಃ । “ಆತ್ಮನ್ಯೇವಾತ್ಮಾನಂ ಪಶ್ಯತಿ” (ಬೃ. ೪-೪-೨೩), “ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ” (ಗೀ. ೧೦-೧೫) ಇತಿ । ನ ತು ನಿರುಪಾಧಿಕಸ್ಯ ಆತ್ಮನ ಏಕತ್ವೇ ಸ್ವಸಂವೇದ್ಯತಾ ಪರಸಂವೇದ್ಯತಾ ವಾ ಸಮ್ಭವತಿ । ಯಥಾ ಪ್ರಕಾಶಸ್ಯ ಪ್ರಕಾಶಾನ್ತರಾಪೇಕ್ಷಯಾ ನ ಸಮ್ಭವಃ, ತದ್ವತ್ । **ಬೌದ್ಧಪಕ್ಷೇ** ಸ್ವಸಂವೇದ್ಯತಾಯಾಂ ತು ಕ್ಷಣಭಙ್ಗುರತ್ವಂ ನಿರಾತ್ಮಕತ್ವಂ ಚ ವಿಜ್ಞಾನಸ್ಯ ಸ್ಯಾತ್ । “ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾತ್” (ಬೃ. ೪-೩-೩೦), “ನಿತ್ಯಂ ವಿಭುಂ ಸರ್ವಗತಮ್” (ಮು ೧-೧-೬), “ಸ ವಾ ಏಷ ಮಹಾನಜ ಆತ್ಮಾಜರೋಽಮರೋಽಮೃತೋಽಭಯಃ” (ಬೃ. ೪-೪-೨೫) ಇತ್ಯಾದ್ಯಾಃ ಶ್ರುತಯೋ ಬಾಧ್ಯೇರನ್ ॥

(ಭಾಷ್ಯಾರ್ಥ)

“ಪ್ರತಿಬೋಧವಿದಿತಮ್” ಎಂಬ ವಾಕ್ಯಕ್ಕೆ (ಆತ್ಮನು) ತನ್ನನ್ನು ತಾನೇ ಅರಿಯುವನೆಂಬುದು ಅರ್ಥವೆಂದು **(ಕೆಲವರು)**[1] ವರ್ಣಿಸುತ್ತಾರಷ್ಟೆ; ಅವರ ಪಕ್ಷದಲ್ಲಿ (ಆತ್ಮನು) ಸೋಪಾಧಿಕನೆಂದಾದರೆ ಬುದ್ಧಿಯೆಂಬ ಉಪಾಧಿ, (ಆತ್ಮನ) ಸ್ವರೂಪ- ಇವೆರಡನ್ನೂ ಬೇರೆಬೇರೆ ಎಂದು ಕಲ್ಪಿಸಿಕೊಂಡು ತನ್ನಿಂದ ತನ್ನನ್ನು ಅರಿತುಕೊಳ್ಳುತ್ತಾನೆ ಎಂಬ ವ್ಯವಹಾರವು ಆಗಬಹುದು.[2] “ತನ್ನಲ್ಲಿಯೇ ಆತ್ಮನನ್ನು ಕಾಣುತ್ತಾನೆ” (ಬೃ. ೪-೪-೨೩), “ಎಲೈ ಪುರುಷೋತ್ತಮನೆ, ನೀನೇ ನಿನ್ನನ್ನು ನಿನ್ನಿಂದ ಅರಿತುಕೊಳ್ಳಬಲ್ಲೆ” (ಗೀ. ೧೦-೧೫) ಎಂದು (ಹೇಳುವ ಶ್ರುತಿಸ್ಮೃತಿಗಳಿಗೆ ಇದೇ ಅರ್ಥ).[3] ಆದರೆ ಯಾವ ಉಪಾಧಿಯೂ ಇಲ್ಲದ ಆತ್ಮನು ತಾನೊಬ್ಬನೇ ಆಗಿರುವಲ್ಲಿ ತನ್ನನ್ನು ತಾನೇ ತಿಳಿದುಕೊಳ್ಳುವದೆಂಬುದಾಗಲಿ ಮತ್ತೊಬ್ಬರು ತಿಳಿದುಕೊಳ್ಳುವದೆಂಬುದಾಗಲಿ ಆಗಲಾರದು. ಅರಿವಿನ ರೂಪವಾಗಿಯೇ ಇರುವದರಿಂದ, ಒಂದು ಬೆಳಕಿಗೆ ಮತ್ತೊಂದು ಬೆಳಕಿನ ಅಪೇಕ್ಷೆ ಹೇಗೆ ಇರುವದಿಲ್ಲವೋ ಅದರಂತೆ. (ಆತ್ಮನಿಗೆ) ಮತ್ತೊಂದು ಅರಿವಿನ ಅಪೇಕ್ಷೆಯೂ ಇರುವದಿಲ್ಲ **ಬೌದ್ಧರು** ಹೇಳುವಂತೆ (ಆತ್ಮನು) ತನ್ನನ್ನು ತಾನು ಅರಿಯುವನೆನ್ನುವದಾದರೆ (ವಿಜ್ಞಾನವು) ಒಂದೊಂದು

---

1. ಇವರು ಯಾರೆಂಬುದು ತಿಳಿಯದು. ಇದು ಬೌದ್ಧರ ಅಭಿಪ್ರಾಯವನ್ನೇ ಹೋಲುವದು; ಬೌದ್ಧರ ಪಕ್ಷವನ್ನು ಇದರ ಮುಂದೆಯೇ ಖಂಡಿಸಿರುವದಕ್ಕೆ ಇದೇ ಕಾರಣ.

2. ಬುದ್ಧಿ ಎಂಬ ಉಪಾಧಿಯು ಮುಖ್ಯವಾದಾಗ ಅರಿಯುವ ಕ್ರಿಯೆಗೆ ಕರ್ತೃ, ಉಪಹಿತನಾದ ಆತ್ಮನು ಮುಖ್ಯವಾದಾಗ ಆ ಕ್ರಿಯೆಗೆ ಕರ್ಮ ಎಂದು ಕಲ್ಪಿಸಿಕೊಂಡು ವ್ಯವಹರಿಸಬಹುದು.

3. ಬೌದ್ಧರು ಹೇಳುವ ಪಕ್ಷವು ಶ್ರುತಿವಿರುದ್ಧವಾದ್ದರಿಂದಲೂ ಆಸ್ತಿಕರು ಒಪ್ಪತಕ್ಕದ್ದಲ್ಲ.

ಕ್ಷಣದಲ್ಲಿಯೂ ನಾಶವಾಗುತ್ತಿರುವದೆಂದೂ ಅದಕ್ಕೆ ಯಾವ ಆತ್ಮನೂ ಇಲ್ಲವೆಂದೂ ಆಗುವದು. "ಅರಿಯುವಾತನ ಅರಿವಿಗೆ ಲೋಪವೆಂಬುದು ಇಲ್ಲವೇ ಇಲ್ಲ, ಏಕೆಂದರೆ ಅದು ನಾಶವಿಲ್ಲದ್ದು'' (ಬೃ. ೪-೩-೩೦), "ನಿತ್ಯನೂ ವ್ಯಾಪಕನೂ ಸರ್ವಗತನೂ'' (ಮು. ೧-೧-೬), "ಈ ಆತ್ಮನು ಆ ದೊಡ್ಡ (ಪರಮಾತ್ಮನೇ), ಹುಟ್ಟಿಲ್ಲದವನು, ಮುಪ್ಪಿಲ್ಲದವನು, ಸಾವಿಲ್ಲದವನು, ಅಮೃತಸ್ವರೂಪನು, ಹೆದರಿಕೆ ಇಲ್ಲದವನು" (ಬೃ. ೪-೪-೨೫), ಇವೇ ಮುಂತಾದ ಶ್ರುತಿಗಳು (ಅವರ ಪಕ್ಷದಲ್ಲಿ) ಬಾಧಿತವಾಗುವವು.

(ಭಾಷ್ಯ)

೫೮. ಯತ್ಪುನಃ ಪ್ರತಿಬೋಧಶಬ್ದೇನ ನಿರ್ನಿಮಿತ್ತೋ ಬೋಧಃ ಪ್ರತಿಬೋಧಃ, ಯಥಾ ಸುಪ್ತಸ್ಯ ಇತ್ಯರ್ಥಂ ಪರಿಕಲ್ಪಯನ್ತಿ । ಸಕೃದ್ವಿಜ್ಞಾನಂ ಪ್ರತಿಬೋಧ ಇತ್ಯಪರೇ । ನಿರ್ನಿಮಿತ್ತಃ ಸನಿಮಿತ್ತಃ ಸಕೃದ್ವಾ ಅಸಕೃದ್ವಾ ಪ್ರತಿಬೋಧ ಏವ ಹಿ ಸಃ ॥

(ಭಾಷ್ಯಾರ್ಥ)

ಇದಲ್ಲದೆ ಪ್ರತಿಬೋಧವೆಂದರೆ ಯಾವ ನಿಮಿತ್ತವೂ ಇಲ್ಲದೆ ನಿದ್ರೆಯಲ್ಲಿರುವಾತನಿಗೆ ಇರುವಂಥ ಅರಿವು ಎಂದು **ಕೆಲವರು** ಕಲ್ಪಿಸಿರುತ್ತಾರೆ. ಒಂದೇ ಸಲಕ್ಕೆ ಆಗುವ ಅರಿವು ಪ್ರತಿಬೋಧವು ಎಂದು **ಮತ್ತೆ ಕೆಲವರು**[1] (ಕಲ್ಪಿಸಿರುತ್ತಾರೆ). ನಿಮಿತ್ತವಿಲ್ಲದೆ ಆಗಿರಲಿ ನಿಮಿತ್ತದಿಂದ ಆಗಿರಲಿ, ಒಂದೇ ಸಲಕ್ಕೆ ಆಗಿರಲಿ, ಅನೇಕ ಸಲ ಆಗಿರಲಿ-(ಅದೆಲ್ಲವೂ) ಅರಿವೇ ಅಲ್ಲವೆ ?

## ಬ್ರಹ್ಮವನ್ನು ಸರಿಯಾಗಿ ತಿಳಿದುಕೊಂಡರೆ ಫಲ

(ಭಾಷ್ಯ)

೫೮. ಅಮೃತತ್ವಮ್ ಅಮರಣಭಾವಂ ಸ್ವಾತ್ಮನ್ಯವಸ್ಥಾನಂ ಮೋಕ್ಷಂ ಹಿ ಯಸ್ಮಾತ್ ವಿನ್ದತೇ ಲಭತೇ ಯಥೋಕ್ತಾತ್ ಪ್ರತಿಬೋಧವಿದಿತಾತ್ಮಕಾತ್ । ತಸ್ಮಾತ್ ಪ್ರತಿಬೋಧವಿದಿತಮೇವ ಮತಮ್ ಇತ್ಯಭಿಪ್ರಾಯಃ । ಬೋಧಸ್ಯ ಹಿ ಪ್ರತ್ಯಗಾತ್ಮವಿಷಯತ್ವಂ ಚ ಮತಮ್ ಅಮೃತತ್ವೇ ಹೇತುಃ । ನ ಹ್ಯಾತ್ಮನೋಽನಾತ್ಮತ್ವಮ್ ಅಮೃತತ್ವಂ ಭವತಿ । ಆತ್ಮತ್ವಾದಾತ್ಮನೋಽಮೃತತ್ವಂ ನಿರ್ನಿಮಿತ್ತಮೇವ । ಏವಂ ಮರ್ತ್ಯತ್ವಮಾತ್ಮನೋ ಯದವಿದ್ಯಯಾ ಅನಾತ್ಮತ್ವಪ್ರತಿಪತ್ತಿಃ ॥

(ಭಾಷ್ಯಾರ್ಥ)

ಏಕೆಂದರೆ ಅಮೃತತ್ವವನ್ನು ಎಂದರೆ ಸಾವಿಲ್ಲದಿರುವಿಕೆಯನ್ನು **ತನ್ನ ಸ್ವರೂಪದಲ್ಲಿಯೇ ನಿಲ್ಲುವದೆಂಬ ಮೋಕ್ಷವನ್ನು** ಹೊಂದುತ್ತಾನೆ; ಮೇಲೆ ಹೇಳಿದಂತೆ

---

1. ಇಲ್ಲಿ ಹೇಳಿರುವ ಪಕ್ಷಗಳು ಯಾರವೆಂಬ ಬಗ್ಗೆ ಸಂಶಯವಿದೆ. ಈ ವಿಷಯದಲ್ಲಿ ಪೀಠಿಕೆಯನ್ನು ನೋಡಿರಿ.

ಪ್ರತಿಬೋಧದಲ್ಲಿಯೂ ತಿಳಿಯುವ ರೂಪದ(ಪ್ರತಿಬೋಧ)ದಿಂದ ಪಡೆದುಕೊಳ್ಳುತ್ತಾನೆ. ಆದ್ದರಿಂದ ಪ್ರತಿಬೋಧದಲ್ಲಿಯೂ ತಿಳಿದರೆ (ಸರಿಯಾಗಿ) ತಿಳಿದಂತಾಯಿತು ಎಂದಭಿಪ್ರಾಯ. ಬೋಧವು ಪ್ರತ್ಯಗಾತ್ಮನ ವಿಷಯವೆಂತ[1] ತಿಳಿದುಕೊಂಡದ್ದೇ ಅಮೃತತ್ವಕ್ಕೆ ಕಾರಣವಾಗುವದು. ಏಕೆಂದರೆ ಆತ್ಮನಿಗೆ ಅನಾತ್ಮತ್ವ(ವುಂಟಾದರೆ) ಎಂದಿಗೂ ಅಮೃತತ್ವವುಂಟಾಗಲಾರದು. ಆತ್ಮನ ಸ್ವರೂಪವಾಗಿರುವದರಿಂದ ಅಮೃತತ್ವವು ಯಾವ ನಿಮಿತ್ತದಿಂದಲೂ ಆಗತಕ್ಕದ್ದಾಗಿರುವದಿಲ್ಲ. ಇದರಂತೆ ಆತ್ಮನಿಗೆ ಮರ್ತ್ಯತ್ವವೆಂಬುದು ಅವಿದ್ಯೆಯಿಂದ (ತಾನು) ಅನಾತ್ಮವೆಂದು ತಿಳಿದುಕೊಳ್ಳುವದೇ.[2]

(ಭಾಷ್ಯ)

೫೯. ಕಥಂ ಪುನರ್ಯಥೋಕ್ತಯಾ ಆತ್ಮವಿದ್ಯಯಾ ಅಮೃತತ್ವಂ ವಿನ್ದತೇ ? ಇತ್ಯತ ಆಹ–ಆತ್ಮನಾ ಸ್ವೇನ ರೂಪೇಣ ವಿನ್ದತೇ ಲಭತೇ ವೀರ್ಯಂ ಬಲಂ ಸಾಮರ್ಥ್ಯಮ್ । ಧನಸಹಾಯಮನ್ತ್ರೌಷಧತಪೋಯೋಗಕೃತಂ ವೀರ್ಯಂ ಮೃತ್ಯುಂ ನ ಶಕ್ನೋತ್ಯಭಿಭವಿತುಮ್ । ಅನಿತ್ಯವಸ್ತುಕೃತತ್ವಾತ್ । ಆತ್ಮವಿದ್ಯಾಕೃತಂ ತು ವೀರ್ಯಮ್ ಆತ್ಮನೈವ ವಿನ್ದತೇ ನಾನ್ಯೇನ । ಇತ್ಯತೋಽನನ್ಯಸಾಧನತ್ವಾತ್ ಆತ್ಮವಿದ್ಯಾವೀರ್ಯಸ್ಯ ತದೇವ ವೀರ್ಯಂ ಮೃತ್ಯುಂ ಶಕ್ನೋತ್ಯಭಿಭವಿತುಮ್ । ಯತ ಏವಮ್ ಆತ್ಮವಿದ್ಯಾಕೃತಂ ವೀರ್ಯಮ್ ಆತ್ಮನೈವ ವಿನ್ದತೇ, ಅತಃ ವಿದ್ಯಯಾ ಆತ್ಮವಿಷಯಯಾ ವಿನ್ದತೇ ಅಮೃತಮ್ ಅಮೃತತ್ವಮ್ । "ನಾಯಮಾತ್ಮಾ ಬಲಹೀನೇನ ಲಭ್ಯಃ" (ಮು. ೩-೨-೪) **ಇತ್ಯಾಥರ್ವಣೇ** । ಅತಃ ಸಮರ್ಥೋ ಹೇತುಃ 'ಅಮೃತತ್ವಂ ಹಿ ವಿನ್ದತೇ' ಇತಿ ॥

(ಭಾಷ್ಯಾರ್ಥ)

ಇನ್ನು ಮೇಲೆ ಹೇಳಿದ ಆತ್ಮವಿದ್ಯೆಯಿಂದ ಅಮೃತತ್ವವನ್ನು ಹೇಗೆ[3] ಪಡೆದುಕೊಳ್ಳುತ್ತಾನೆ ?–ಎಂಬೀ (ಪ್ರಶ್ನೆಗೆ ಮಂತ್ರವು ಉತ್ತರವನ್ನು) ಹೇಳುತ್ತದೆ. ಆತ್ಮನಿಂದ, ತನ್ನ ಸ್ವರೂಪದಿಂದ, ವೀರ್ಯವನ್ನು ಎಂದರೆ ಬಲವನ್ನು, ಸಾಮರ್ಥ್ಯವನ್ನು ಪಡೆಯುತ್ತಾನೆ ದೊರಕಿಸಿಕೊಳ್ಳುತ್ತಾನೆ. **ಧನ, ಸಹಾಯ, ಮಂತ್ರ, ಔಷಧ,**

---

1. ಪ್ರತ್ಯಯರೂಪವಾಗಿರುವ ಬೋಧವು ಆತ್ಮನಿಗೆ ವಿಷಯವು, ಆತ್ಮನು ನಿರ್ವಿಷಯನಾದ ಚೈತನ್ಯವೇ ಎಂತ.

2. ಕೂಟಸ್ಥವಾದ ಚೈತನ್ಯರೂಪವಾಗಿರುವದರಿಂದ ಆತ್ಮನು ನಿಜವಾಗಿ ಮರ್ತ್ಯನಲ್ಲ, ಅನಾತ್ಮಧರ್ಮವನ್ನು ಅಧ್ಯಾಸಮಾಡಿಕೊಳ್ಳುವದರಿಂದಲೇ ನಾವು ಮರ್ತ್ಯರೆಂಬ ಭಾವನೆಯಾಗಿರುತ್ತದೆ.

3. ಆತ್ಮವಿದ್ಯೆಯಿಂದಲೇ ಅಮೃತತ್ವವನ್ನು ಪಡೆದುಕೊಳ್ಳುತ್ತಾನೆ ಎಂಬುದಕ್ಕೆ ಕಾರಣವೇನು ?-ಎಂದು ಪ್ರಶ್ನೆ.

**ತಪಸ್ಸು, ಯೋಗ-ಇವುಗಳಿಂದ ಉಂಟಾದ ವೀರ್ಯವು ಮೃತ್ಯುವನ್ನು ಹೊಡೆದುಹಾಕಲಾರದು; ಏಕೆಂದರೆ ಅದು ಅನಿತ್ಯವಸ್ತುವಿನಿಂದಾಗಿರುವದು.**[1] ಆದರೆ ಆತ್ಮವಿದ್ಯೆಯಿಂದಾಗುವ ವೀರ್ಯವನ್ನು ಆತ್ಮನಿಂದಲೇ ಪಡೆಯುತ್ತಾನೆ, ಮತ್ತೊಂದರಿಂದಲ್ಲ; ಹೀಗೆ ಆತ್ಮವಿದ್ಯೆಯ ವೀರ್ಯವು ಮತ್ತೊಂದರಿಂದ ಬರುವದಲ್ಲವಾದ್ದರಿಂದ ಆ ವೀರ್ಯವೇ ಮೃತ್ಯುವನ್ನು ಹೊಡೆದುಹಾಕಬಲ್ಲದು.[2] ಈ ರೀತಿಯಲ್ಲಿ ಆತ್ಮವಿದ್ಯೆಯಿಂದಾಗುವ ವೀರ್ಯವನ್ನು ಆತ್ಮನಿಂದಲೇ ಪಡೆದುಕೊಳ್ಳುತ್ತಾನಾದ್ದರಿಂದ ಆತ್ಮವಿಷಯವಾದ ವಿದ್ಯೆಯಿಂದ ಅಮೃತವನ್ನು ಎಂದರೆ ಮರಣವಿಲ್ಲದ ಸ್ವಭಾವವನ್ನು ಹೊಂದುತ್ತಾನೆ. "ಈ ಆತ್ಮನು ಬಲಹೀನನಿಗೆ ದೊರಕಲಾರನು" (ಮು. ೩-೨-೪) ಎಂದು **ಆಥರ್ವಣದಲ್ಲಿ** ಹೇಳಿರುತ್ತದೆ. ಆದ್ದರಿಂದ "ಏಕೆಂದರೆ ಅಮೃತತ್ವವನ್ನು ಪಡೆಯುತ್ತಾನೆ'' ಎಂದು ಹೇಳಿದ ಹೇತುವು ಸರಿಯಾದದ್ದು.

## ಬ್ರಹ್ಮವನ್ನು ಇಲ್ಲಿಯೇ ಅರಿತುಕೊಳ್ಳಬೇಕು

(ಭಾಷ್ಯ)

೬೦. ಕಷ್ಟಾ ಖಲು ಸುರನರತಿರ್ಯಕ್ಪ್ರೇತಾದಿಷು ಸಂಸಾರದುಃಖಬಹುಲೇಷು ಪ್ರಾಣಿನಿಕಾಯೇಷು ಜನ್ಮಜರಾಮರಣರೋಗಾದಿಸಂಪ್ರಾಪ್ತಿರಜ್ಞಾನಾತ್ । ಅತಃ—

(ಭಾಷ್ಯಾರ್ಥ)

ದೇವತೆಗಳು, ಮನುಷ್ಯರು, ಮೃಗಾದಿಗಳು, ಪ್ರೇತಗಳು-ಮುಂತಾದ ಸಂಸಾರದುಃಖದಿಂದ ತುಂಬಿರುವ ಪ್ರಾಣಿಗಳಲ್ಲಿ ಹುಟ್ಟು, ಮುಪ್ಪು, ಸಾವು, ಬೇನೆ- ಮುಂತಾದವುಗಳನ್ನು ಅಜ್ಞಾನದಿಂದ ಹೊಂದುತ್ತಿರುವದೆಂಬುದು ಕಷ್ಟದಾಯಕವಾಗಿರುವದಲ್ಲವೆ ? ಆದ್ದರಿಂದ—

**ಇಹಚೇದವೇದೀದಥ ಸತ್ಯಮಸ್ತಿ**
**ನಚೇದಿಹಾವೇದೀನ್ಮಹತೀ ವಿನಷ್ಟಿಃ ।**
**ಭೂತೇಷು ಭೂತೇಷು ವಿಚಿತ್ಯ ಧೀರಾಃ**
**ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವನ್ತಿ ॥ ೫ ॥**

---

1. ಹಣ, ಮತ್ತೊಬ್ಬರ ಉಪಕಾರ, ಮಂತ್ರಶಕ್ತಿ, ಮೂಲಿಕೆಗಳ ಉಪಯೋಗ, ತಪಸ್ಸು, ಯೋಗ-ಇವುಗಳಿಂದ ಉಂಟಾಗುವಂತೆ ಹೊರಗಿನ ವಸ್ತುವಿನಿಂದ ಆಗುವ ಬಲವು ಅನಿತ್ಯವು; ನಿತ್ಯವಾದ ಆತ್ಮಪ್ರಾಪ್ತಿಯಿಂದಾಗುವ ಬಲವು ನಿತ್ಯವಾಗಿಯೇ ಇರುವದು.

2. ಆತ್ಮಬಲವು ನಿತ್ಯವಾಗಿರುವದರಿಂದ ಆತ್ಮಪ್ರಾಪ್ತಿಯು ನಿತ್ಯವಾಗಿರುತ್ತದೆ; ಅದೇ ಅಮೃತತ್ವವು.

೫. ಇಲ್ಲಿಯೇ ಅರಿತುಕೊಂಡನಾದರೆ ಆಗ ಸತ್ಯವುಂಟು, ಇಲ್ಲಿ ಅರಿತುಕೊಳ್ಳಲಿಲ್ಲವಾದರೆ ದೊಡ್ಡ ವಿನಾಶವು. ಧೀರರಾದವರು ಭೂತಗಳಲ್ಲಿ ಅರಿತುಕೊಂಡು ಈ ಲೋಕದಿಂದ ಹೊರಟುಹೋಗಿ ಅಮೃತರಾಗುವರು.

(ಭಾಷ್ಯ)

೬೧. ಇಹೈವ ಚೇತ್ ಮನುಷ್ಯೋಽಧಿಕೃತಃ ಸಮರ್ಥಃ ಸನ್ ಯದಿ ಅವೇದೀತ್ ಆತ್ಮಾನಂ ಯಥೋಕ್ತಲಕ್ಷಣಂ ವಿದಿತವಾನ್ ಯಥೋಕ್ತೇನ ಪ್ರಕಾರೇಣ, ಅಥ ತದಾ ಅಸ್ತಿ ಸತ್ಯಮ್ ಮನುಷ್ಯಜನ್ಮನ್ಯಸ್ಮಿನ್ ಅವಿನಾಶಃ, ಅರ್ಥವತ್ತಾ ವಾ, ಸದ್ಭಾವೋ ವಾ । ಪರಮಾರ್ಥತಾ ವಾ ಸತ್ಯಂ ವಿದ್ಯತೇ । ನ ಚೇತ್ ಇಹ ಅವೇದೀತ್, ನ ಚೇತ್ ಇಹ ಜೀವಂಶ್ಚೇತ್ ಅಧಿಕೃತಃ ಅವೇದೀತ್ ನ ವಿದಿತವಾನ್ ತದಾ ಮಹತೀ ದೀರ್ಘಾ ಅನನ್ತಾ ವಿನಷ್ಟಿಃ ವಿನಾಶನಂ ಜನ್ಮಜರಾಮರಣಾದಿಪ್ರಬನ್ಧಾವಿಚ್ಛೇದಲಕ್ಷಣಾ ಸಂಸಾರಗತಿಃ ॥

(ಭಾಷ್ಯಾರ್ಥ)

ಅಧಿಕಾರಿಯೂ ಸಮರ್ಥನೂ ಆಗಿರುವ ಮನುಷ್ಯನು[1] ಇಲ್ಲಿಯೇ ಅರಿತುಕೊಂಡನಾದರೆ, ಮೇಲೆ ಹೇಳಿದ ಸ್ವರೂಪದ ಆತ್ಮನನ್ನು ಮೇಲೆ ಹೇಳಿದ ಪ್ರಕಾರದಿಂದ (ತಿಳಿದುಕೊಂಡನಾದರೆ) ಆಗ ಸತ್ಯವುಂಟು, ಎಂದರೆ ಈ ಮನುಷ್ಯಜನ್ಮದಲ್ಲಿ ಅವಿನಾಶವುಂಟು, ಸಾರ್ಥಕ್ಯವುಂಟು, ಅಥವಾ ಒಳ್ಳೆಯತನವುಂಟು; ಅಥವಾ ಪರಮಾರ್ಥವಾದ ಸತ್ಯವುಂಟು.[2] ಇಲ್ಲಿ ಅರಿತುಕೊಳ್ಳಲಿಲ್ಲವಾದರೆ, ಇಲ್ಲಿ ಎಂದರೆ ಬದುಕಿರುವಾಗಲೇ (ಆ ತತ್ತ್ವವನ್ನು) ಅರಿತುಕೊಳ್ಳಲಿಲ್ಲವಾದರೆ ತಿಳಿದುಕೊಳ್ಳದೆ ಇದ್ದರೆ ಆಗ ದೊಡ್ಡ ದೀರ್ಘವಾದ ಅನಂತವಾದ ವಿನಷ್ಟಿಯು, ವಿನಾಶವುಂಟಾಗುವದು , ಹುಟ್ಟು, ಮುಪ್ಪು, ಸಾವು–ಮುಂತಾದವುಗಳ ಸಾಲು ಕತ್ತರಿಸಿಹೋಗದೆ ಇರುವದೆಂಬ ಸಂಸಾರಗತಿ (ಯುಂಟಾಗುವದು).

(ಭಾಷ್ಯ)

೬೨. ತಸ್ಮಾತ್ ಏವಂ ಗುಣದೋಷೌ ವಿಜಾನನ್ತೋ ಬ್ರಾಹ್ಮಣಾಃ ಭೂತೇಷು ಭೂತೇಷು ಸರ್ವಭೂತೇಷು ಸ್ಥಾವರೇಷು ಚರೇಷು ಚ ಏಕಮ್ ಆತ್ಮ

1. ಜೈ. ಸೂ. ೬-೨-೨೫ರಿಂದ ೪೨ರ ವರೆಗಿನ ಶಾಬರಭಾಷ್ಯದ ಸೂಚನೆ.

2. ಜನ್ಮಾಂತರವಿಲ್ಲದವರಾಗುವರು, ಜನ್ಮವು ಸಾರ್ಥಕವಾಗುವದು, ಅವರು ಸಾಧುಗಳೆನಿಸುವರು–ಎಂಬ ಅರ್ಥವಲ್ಲದೆ ಪರಮಾರ್ಥವು ಅವರಿಗೆ ದೊರಕಿದಂತಾಗುವದು ಎಂಬ ಫಲವನ್ನೂ ಇಲ್ಲಿ ಜ್ಞಾನಕ್ಕೆ ಹೇಳಿದೆ.

ತತ್ತ್ವಂ ಬ್ರಹ್ಮ ವಿಚಿತ್ಯ ವಿಜ್ಞಾಯ ಸಾಕ್ಷಾತ್ಕೃತ್ಯ ಧೀರಾಃ ಧೀಮನ್ತಃ **ಪ್ರೇತ್ಯ ವ್ಯಾವೃತ್ಯ ಮಮಾಹಂಭಾವಲಕ್ಷಣಾತ್ ಅವಿದ್ಯಾರೂಪಾತ್ ಅಸ್ಮಾಲ್ಲೋಕಾತ್ ಉಪರಮ್ಯ** ಸರ್ವಾತ್ಮೈಕತ್ವಮ್ ಅದ್ವೈತಮ್ ಆಪನ್ನಾಃ ಸನ್ತಃ ಅಮೃತಾ ಭವನ್ತಿ ಬ್ರಹ್ಮೈವ ಭವನ್ತಿ ಇತ್ಯರ್ಥಃ । "ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮು. ೩-೨-೯) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಆದ್ದರಿಂದ ಈ ಗುಣದೋಷಗಳನ್ನು ಬಲ್ಲ **ಬ್ರಾಹ್ಮಣರು**[1] ಭೂತಗಳಲ್ಲಿ ಭೂತಗಳಲ್ಲಿ ಎಂದರೆ ಸ್ಥಾವರಜಂಗಮಗಳೆಂಬ ಸಕಲ ಪ್ರಾಣಿಗಳಲ್ಲಿಯೂ ಒಂದೇ ಆತ್ಮತತ್ತ್ವವಾಗಿರುವ ಬ್ರಹ್ಮವನ್ನು 'ವಿಚಿತ್ಯ' ಎಂದರೆ ಅರಿತುಕೊಂಡು ಸಾಕ್ಷಾತ್ಕಾರ ಮಾಡಿಕೊಂಡು ಧೀರರಾದವರು, ಎಂದರೆ ಬುದ್ಧಿವಂತರಾದವರು ಹೊರಟುಹೋಗಿ ಎಂದರೆ **ನನ್ನದು, ನಾನು ಎಂಬ ಭಾವನೆಯ ರೂಪವಾದ ಅವಿದ್ಯಾಸ್ವರೂಪದ ಈ ಲೋಕದಿಂದ ಹಿಂತಿರುಗಿ (ಎಲ್ಲವನ್ನೂ) ಬಿಟ್ಟು**[2] ಎಲ್ಲರಿಗೂ ಆತ್ಮನಾದ, ತನಗೆರಡನೆಯದಿಲ್ಲದ ಆತ್ಮನ ಭಾವವನ್ನು ಹೊಂದಿದವರಾಗಿ ಅಮೃತರಾಗುವರು ಎಂದರೆ ಬ್ರಹ್ಮವೇ ಆಗುವರು ಎಂದರ್ಥ. "ಯಾವಾತನಾದರೆ ಆ ಪರಮಬ್ರಹ್ಮವನ್ನು ಅರಿತುಕೊಳ್ಳುತ್ತಾನೋ (ಅವನು) ಬ್ರಹ್ಮವೇ ಆಗುವನು" (ಮು. ೩-೨-೯) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು.



1. ಬ್ರಾಹ್ಮಣರೇ ವಿಶೇಷಾಧಿಕಾರಿಗಳು.
2. ೧-೨ ಮಂತ್ರದಲ್ಲಿ ಅಮೃತಾ ಭವನ್ತಿ ಎಂಬುದರ ಭಾಷ್ಯವನ್ನು ನೋಡಿ.

# ಮೂರನೆಯ ಖಂಡ

## ಈ ಖಂಡದ ಸಂಬಂಧ

(ಭಾಷ್ಯ)

೬೩. "ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ" । ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್" (೨-೩) ಇತ್ಯಾದಿಶ್ರವಣಾತ್ ಯದಸ್ತಿ ತದ್ವಿಜ್ಞಾತಂ ಪ್ರಮಾಣೈಃ, ಯನ್ನಾಸ್ತಿ ತದವಿಜ್ಞಾತಂ ಶಶವಿಷಾಣಕಲ್ಪಮ್ ಅತ್ಯನ್ತಮೇವಾಸತ್ ದೃಷ್ಟಮ್ । ತಥಾ ಇದಂ ಬ್ರಹ್ಮ ಅವಿಜ್ಞಾತತ್ವಾತ್ ಅಸದೇವ—ಇತಿ ಮನ್ದಬುದ್ಧೀನಾಂ ವ್ಯಾಮೋಹೋ ಮಾ ಭೂತ್ ಇತಿ ತದರ್ಥಾ ಇಯಮ್ ಆಖ್ಯಾಯಿಕಾ ಆರಭ್ಯತೇ । ತದೇವ ಹಿ ಬ್ರಹ್ಮ ಸರ್ವಪ್ರಕಾರೇಣ ಪ್ರಶಾಸ್ತೃ ದೇವಾನಾಮಪಿ ಪರೋ ದೇವಃ, ಈಶ್ವರಾಣಾಮಪಿ ಪರಮೇಶ್ವರಃ,[1] ದುರ್ವಿಜ್ಞೇಯಃ, ದೇವಾನಾಂ ಜಯಹೇತುಃ, ಅಸುರಾಣಾಂ ಪರಾಜಯಹೇತುಃ । ತತ್ ಕಥಂ ನಾಸ್ತಿ ?—ಇತ್ಯೇತಸ್ಯಾರ್ಥಸ್ಯ ಅನುಕೂಲಾನಿ ಹಿ ಉತ್ತರಾಣಿ ವಚಾಂಸಿ ದೃಶ್ಯನ್ತೇ ॥

(ಭಾಷ್ಯಾರ್ಥ)

"ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ" (ಎಂದು ಮೊದಲಾಗಿರುವ ಈ ಖಂಡದ ಸಂಬಂಧವೇನೆಂದರೆ) : "ಅರಿಯುವವರಿಗೆ ತಿಳಿಯದೆ ಇರುತ್ತದೆ, ಅರಿಯದವರಿಗೆ ತಿಳಿದಿರುತ್ತದೆ" (೨-೩) ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿರುವದನ್ನು ಕಂಡು "ಯಾವದು ಇರುವದೋ ಅದು ಪ್ರಮಾಣಗಳಿಂದ ತಿಳಿಯುವದಕ್ಕೆ ಬರುತ್ತದೆ, ಯಾವದು ಇರುವದಿಲ್ಲವೋ ಅದು ತಿಳಿಯುವದಕ್ಕೆ ಬರುವದಿಲ್ಲ. ಮೊಲದ ಕೊಂಬಿನಂತೆ ಅತ್ಯಂತವಾಗಿ ಇಲ್ಲದ್ದಾಗಿರುವದು ಎಂದು ಕಂಡುಬಂದಿದೆ. ಅದರಂತೆ ಈ ಬ್ರಹ್ಮವು ಪ್ರಮಾಣಗಳಿಂದ ತಿಳಿಯುವದಕ್ಕೆ ಬರುವದಿಲ್ಲವಾದ್ದರಿಂದ ಇಲ್ಲವೇ ಇಲ್ಲ" ಎಂದು ಅಲ್ಪಬುದ್ಧಿಯುವರು ಭ್ರಾಂತರಾಗದಿರಲಿ[2] ಎಂದು ಅದಕ್ಕಾಗಿ ಈ ಕಥೆಯನ್ನು ಆರಂಭಿಸಲಾಗಿರುತ್ತದೆ. ಏಕೆಂದರೆ ಮುಂದಿನ ವಾಕ್ಯಗಳು "ಈ ಬ್ರಹ್ಮವೇ ಎಲ್ಲಾ

---

1. ಇದು (ವಾ॥) ಪಾರ. ಶ್ಲೋ. ೬-೭೮ ಸೂಚನೆ.

2. ಪ್ರಮಾಣಗಳಿಗೆ ಗೋಚರವಾಗಿರುವದು ಪ್ರಮೇಯವು ; ಬ್ರಹ್ಮವು ಪ್ರಮಾಣಗಳಿಗೆ ಗೋಚರವಲ್ಲದಿದ್ದರೂ ಪ್ರಮಾತೃವಿನ ಪರಮಾರ್ಥಸ್ವರೂಪವಾದ ಆತ್ಮನಾಗಿದೆ. ಈ ತತ್ತ್ವವನ್ನು ತಿಳಿಯಲಾರದ ಅಲ್ಪಮತಿಗಳು ಅದು ಇಲ್ಲವೇ ಇಲ್ಲವೆಂದು ತಪ್ಪಾಗಿ ತಿಳಿದುಕೊಳ್ಳುವರು.

ಬಗೆಯಿಂದಲೂ ಆಳತಕ್ಕದ್ದು[1], ದೇವತೆಗಳಿಗೆಲ್ಲ ಹೆಚ್ಚಿನ ದೇವನು[2], ಈಶ್ವರರಿಗೆಲ್ಲ ಹೆಚ್ಚಿನ ಈಶ್ವರನು[3], ತಿಳಿದುಕೊಳ್ಳುವದಕ್ಕೆ ಆಗದ ಸ್ವರೂಪವುಳ್ಳದ್ದಾಗಿ ದೇವತೆಗಳ ಜಯಕ್ಕೆ ಕಾರಣವಾಗಿರುವದು, ಅಸುರರ ಸೋಲಿಗೆ ಕಾರಣವಾಗಿರುವದು. ಹೀಗಿರುವಲ್ಲಿ (ಅದು) ಇಲ್ಲವೆಂಬುದು ಹೇಗೆ?" ಎಂಬೀ ಅಭಿಪ್ರಾಯಕ್ಕೆ ಅನುಕೂಲವಾಗಿಯಲ್ಲವೆ, ಕಾಣುತ್ತವೆ?

(ಭಾಷ್ಯ)

೬೪. ಅಥವಾ ಬ್ರಹ್ಮವಿದ್ಯಾಯಾಃ ಸ್ತುತಯೇ । ಕಥಮ್? ಬ್ರಹ್ಮವಿಜ್ಞಾನಾದ್ ಅಗ್ನ್ಯಾದಯೋ ದೇವಾ ದೇವಾನಾಂ ಶ್ರೇಷ್ಠತ್ವಂ ಜಗ್ಮುಃ । ತತೋಽಪ್ಯತಿತರಾಮ್ ಇನ್ದ್ರ ಇತಿ । ಅಥವಾ ದುರ್ವಿಜ್ಞೇಯಂ ಬ್ರಹ್ಮ–ಇತ್ಯೇತತ್ ಪ್ರದರ್ಶ್ಯತೇ । ಯೇನ ಅಗ್ನ್ಯಾದಯೋಽತಿತೇಜಸೋಽಪಿ ಕ್ಲೇಶೇನೈವ ಬ್ರಹ್ಮ ವಿದಿತವನ್ತಃ, ತಥಾ ಇನ್ದ್ರೋ ದೇವಾನಾಮೀಶ್ವರೋಽಪಿ ಸನ್ ಇತಿ । ವಕ್ಷ್ಯಮಾಣೋಪನಿಷದ್ವಿಧಿಪರಂ ವಾ ಸರ್ವಮ್ । ಬ್ರಹ್ಮವಿದ್ಯಾವ್ಯತಿರೇಕೇಣ ಪ್ರಾಣಿನಾಂ ಕರ್ತೃತ್ವಭೋಕ್ತೃತ್ವಾದ್ಯಭಿಮಾನೋ ಮಿಥ್ಯಾ ಇತ್ಯೇತದ್ದರ್ಶನಾರ್ಥಂ ವಾ ಆಖ್ಯಾಯಿಕಾ । ಯಥಾ ದೇವಾನಾಂ ಜಯಾದ್ಯಭಿಮಾನಃ, ತದ್ವದಿತಿ ॥

(ಭಾಷ್ಯಾರ್ಥ)

ಅಥವಾ ಬ್ರಹ್ಮವಿದ್ಯೆಯನ್ನು ಹೊಗಳುವದಕ್ಕೆ[4] (ಈ ಕಥೆಯು ಬಂದಿದೆ ಎಂದಾದರೂ ಹೇಳಬಹುದು). ಹೇಗೆಂದರೆ ಬ್ರಹ್ಮಜ್ಞಾನದಿಂದಲೇ ಅಲ್ಲವೆ, ಅಗ್ನಿಯೇ ಮೊದಲಾದ ದೇವತೆಗಳು ದೇವತೆಗಳಲ್ಲಿ ಶ್ರೇಷ್ಠತ್ವವನ್ನು ಹೊಂದಿದರು, ಅವರಿಗಿಂತಲೂ ಹೆಚ್ಚಿನ (ಸ್ಥಾನವನ್ನು) ಇಂದ್ರನು (ಹೊಂದಿದನು) ಎಂದು (ಈ ಕಥೆಯಲ್ಲಿ) ಹೇಳಿರುತ್ತದೆ. ಅಥವಾ ಬ್ರಹ್ಮವನ್ನು ತಿಳಿಯುವದು ಬಲು ಕಷ್ಟವೆಂಬುದನ್ನು (ಇಲ್ಲಿ) ತೋರಿಸಿದೆ (ಎಂದಾದರೂ ಹೇಳಬಹುದು). ಏಕೆಂದರೆ ಅಗ್ನಿಯೇ ಮೊದಲಾದವರು ಮಹಾಪರಾಕ್ರಮಿಗಳಾದರೂ ಕ್ಲೇಶದಿಂದಲೇ ಬ್ರಹ್ಮವನ್ನು ತಿಳಿದುಕೊಂಡರು; ಅದರಂತೆ ಇಂದ್ರನು ದೇವತೆಗಳಿಗೆಲ್ಲ ಒಡೆಯನಾಗಿದ್ದರೂ (ಕ್ಲೇಶದಿಂದಲೇ ಬ್ರಹ್ಮವನ್ನು ತಿಳಿದು

---

1. ಕಟ್ಟುಪಾಡಿನಲ್ಲಿಟ್ಟಿರತಕ್ಕದ್ದು. ಬೃ. ೩-೮-೯.

2. ಪ್ರಕಾಶಕವಾದವನು. ಶ್ವೇ. ೬-೭.

3. ಒಡೆಯನು, ಸರ್ವಸ್ವತಂತ್ರನು. ಶ್ವೇ. ೬-೭.

4. ಇದುವರೆಗೆ ಬ್ರಹ್ಮಜ್ಞಾನವನ್ನು ತಿಳಿಸಿದೆ. ಇದನ್ನು ಪಡೆಯುವದರಿಂದ ಪರಮಲಾಭವಾಗುವದು ಎಂಬುದನ್ನು ಕಥೆಯಮೂಲಕ ಹೊಗಳಿದೆ. ಆದ್ದರಿಂದ ಬ್ರಹ್ಮವಿದ್ಯೆಯನ್ನು ಸಂಪಾದಿಸಿಕೊಳ್ಳಬೇಕು ಎಂದು ಹೇಳಿದಂತಾಗುವದು. ವಿಧಿಗೆ ಅರ್ಥವಾದವಿರುವಂತೆ, ಬ್ರಹ್ಮಸ್ವರೂಪವನ್ನು ತಿಳಿಸುವ ವಾಕ್ಯಕ್ಕೆ ಇದು ಅರ್ಥವಾದವೆಂದು ಭಾವ.

ಕೊಂಡನು ಎಂದು ಇಲ್ಲಿ ಹೇಳಿದೆ)[1]. ಮುಂದೆ ಹೇಳುವ **ಉಪನಿಷತ್ತನ್ನು**[2] ವಿಧಿಸುವದಕ್ಕಾಗಿ ಇದೆಲ್ಲವೂ (ಬಂದಿರುತ್ತದೆ) ಎಂದಾದರೂ (ಹೇಳಬಹುದು). ಬ್ರಹ್ಮವಿದ್ಯೆಯಿಲ್ಲದಿರುವದರಿಂದ ಪ್ರಾಣಿಗಳಿಗೆ ಉಂಟಾಗಿರುವ "ನಾವು (ಕರ್ಮವನ್ನು) ಮಾಡುವವರು, (ಫಲವನ್ನು) ಅನುಭವಿಸುವವರು" ಎಂದು ಮುಂತಾದ ಅಭಿಮಾನವು ತಪ್ಪಾದದ್ದು, ದೇವತೆಗಳಿಗೆ (ಉಂಟಾದ) ಜಯವೇ ಮುಂತಾದದ್ದರ ಅಭಿಮಾನದಂತೆ[3]–ಎಂದು ತೋರಿಸಿಕೊಡುವದಕ್ಕೆ ಕಥೆಯು (ಬಂದಿದೆ) ಎಂದಾದರೂ ಹೇಳಬಹುದು.

## ದೇವತೆಗಳಿಗೆ ಮಿಥ್ಯಾಭಿಮಾನವು ಬಂದದ್ದು

**ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ ತಸ್ಯ ಹ ಬ್ರಹ್ಮಣೋ**
**ವಿಜಯೇ ದೇವಾ ಅಮಹೀಯನ್ತ । ತ ಐಕ್ಷನ್ತಾಸ್ಮಾಕಮೇವಾ**
**ಯಂ ವಿಜಯೋಽಸ್ಮಾಕಮೇವಾಯಂ ಮಹಿಮೇತಿ ॥ ೧ ॥**

೧. ಬ್ರಹ್ಮವು ದೇವತೆಗಳಿಗೆ ವಿಜಯವನ್ನು ಕೊಟ್ಟಿತಂತೆ. ಆ ಬ್ರಹ್ಮದ ವಿಜಯದಲ್ಲಿ ದೇವತೆಗಳು ಮಹಿಮಾವಂತರಾದರು. ಅವರು "ಈ ವಿಜಯವು ನಮ್ಮದು, ಈ ಮಹಿಮೆಯು ನಮ್ಮದು" ಎಂದು ಯೋಚಿಸಿಕೊಂಡರು.

(ಭಾಷ್ಯ)

೭೫. ಬ್ರಹ್ಮ ಯಥೋಕ್ತಲಕ್ಷಣಂ ಪರಂ ಹ ಕಿಲ ದೇವೇಭ್ಯೋಽರ್ಥಾಯ ವಿಜಿಗ್ಯೇ ಜಯಂ ಲಬ್ಧವತ್ । ದೇವಾನಾಂ ಚಾಸುರಾಣಾಂ ಚ ಸಙ್ಗ್ರಾಮೇ ಅಸುರಾನ್ ಜಿತ್ವಾ ಜಗದರಾತೀನ್ ಈಶ್ವರಸೇತುಭೇತ್ತೄನ್ ದೇವೇಭ್ಯೋ ಜಯಂ ತತ್ಫಲಂ ಚ ಪ್ರಾಯಚ್ಛತ್ ಜಗತಃ ಸ್ಥೇಮ್ನೇ ॥

---

1. ಆದ್ದರಿಂದ ಬ್ರಹ್ಮವಿದ್ಯೆಯನ್ನು ಕಷ್ಟಪಟ್ಟಾದರೂ ಸಂಪಾದಿಸಬೇಕು. ಅನಾದರ ಮಾಡಬಾರದು ಎಂದು ಭಾವ.

2. ನಾಲ್ಕನೆಯಖಂಡದಲ್ಲಿ ವಿಧಿಸಿರುವ ಉಪಾಸನೆಯನ್ನು. ಈ ಅರ್ಥವೇ ಮುಖ್ಯವಾದದ್ದೆಂದೂ ಮಿಕ್ಕ ಅರ್ಥಗಳನ್ನು ಹೇಳಿರುವದು ಬರಿಯ ಸಂಭಾವನೆ ಯೆಂದೂ ಟೀಕಾಕಾರರು ಬರೆದಿರುತ್ತಾರೆ. ಈ ಅಭಿಪ್ರಾಯಕ್ಕೆ ಭಾಷ್ಯದ ಬೆಂಬಲವು ಕಾಣುವದಿಲ್ಲ.

3. ಆದ್ದರಿಂದ ತಪ್ಪಾದ ಈ ತಿಳಿವಳಿಕೆಯನ್ನು ಕಳೆದುಕೊಳ್ಳುವದಕ್ಕಾಗಿ ಬ್ರಹ್ಮಜ್ಞಾನವನ್ನು ಸಂಪಾದಿಸಿಕೊಳ್ಳಬೇಕು-ಎಂದು ಭಾವ. ಬ್ರಹ್ಮವಿದ್ಯೆಯನ್ನು ಸಂಪಾದಿಸಿಕೊಳ್ಳಬೇಕೆಂಬುದಕ್ಕೆ ಅನೇಕ ಕಾರಣಗಳನ್ನು ಈ ಕಥೆಯು ತಿಳಿಸುತ್ತದೆ ಎಂಬುದೇ ಇಲ್ಲಿ ತಿಳಿಯತಕ್ಕದ್ದು.

(ಭಾಷ್ಯಾರ್ಥ)

ಬ್ರಹ್ಮವು ಎಂದರೆ ಹಿಂದೆ ಹೇಳಿದ ಸ್ವರೂಪವುಳ್ಳ[1] ಪರ(ಬ್ರಹ್ಮವು) ದೇವತೆಗಳಿಗೆ ಪ್ರಯೋಜನವಾಗಲೆಂದು ವಿಜಯವನ್ನು ಕೊಟ್ಟಿತಂತೆ[2], ಜಯವನ್ನು ಪಡೆದು (ಕೊಟ್ಟಿತಂತೆ). ದೇವತೆಗಳಿಗೂ ಅಸುರರಿಗೂ ಕಾಳಗವಾಗಲಾಗಿ ಜಗತ್ತಿಗೇ ವೈರಿಗಳಾಗಿ ಈಶ್ವರನ ಸೇತುವನ್ನು[3] ಒಡೆಯುವವರಾದ ಅಸುರರನ್ನು ಗೆದ್ದು ಜಗತ್ತಿನ ಸುಸ್ಥಿತಿಗಾಗಿ ದೇವತೆಗಳಿಗೆ ಗೆಲವನ್ನೂ ಅದರ ಫಲವನ್ನೂ ಕೊಟ್ಟಿತು[4] ''.

(ಭಾಷ್ಯ)

೬೬. ತಸ್ಯ ಹ ಕಿಲ ಬ್ರಹ್ಮಣೋ ವಿಜಯೇ ದೇವಾಃ ಅಗ್ನ್ಯಾದಯಃ ಅಮಹೀಯನ್ತ ಮಹಿಮಾನಂ ಪ್ರಾಪ್ತವನ್ತಃ । ತದಾ ಆತ್ಮಸಂಸ್ಥಸ್ಯ ಪ್ರತ್ಯಗಾತ್ಮನ ಈಶ್ವರಸ್ಯ ಸರ್ವಜ್ಞಸ್ಯ ಸರ್ವಕ್ರಿಯಾಫಲಸಂಯೋಜಯಿತುಃ ಪ್ರಾಣಿನಾಂ ಸರ್ವಶಕ್ತೇಃ ಜಗತಃ ಸ್ಥಿತಿಂ ಚಿಕೀರ್ಷೋಃ ಅಯಂ ಜಯೋ ಮಹಿಮಾ ಚ ಇತ್ಯಜಾನನ್ತಃ, ತೇ ದೇವಾಃ ಐಕ್ಷನ್ತ ಈಕ್ಷಿತವನ್ತಃ "ಅಗ್ನ್ಯಾದಿಸ್ವರೂಪಪರಿಚ್ಛಿನ್ನಾತ್ಮಕೃತಃ, ಅಸ್ಮಾಕಮೇವ ಅಯಂ ವಿಜಯಃ, ಅಸ್ಮಾಕಮೇವ ಅಯಂ ಮಹಿಮಾ ಅಗ್ನಿವಾಯ್ವಿನ್ದ್ರತ್ವಾದಿ ಲಕ್ಷಣೋ ಜಯಫಲಭೂತೋಽಸ್ಮಾಭಿರನುಭೂಯತೇ, ನಾಸ್ಮತ್ಪ್ರತ್ಯಗಾತ್ಮಭೂತೇಶ್ವರ ಕೃತ ಇತಿ ॥

(ಭಾಷ್ಯಾರ್ಥ)

ಆ ಬ್ರಹ್ಮದ ಗೆಲವಿನಲ್ಲಿ ಅಗ್ನಿಯೇ ಮುಂತಾದ ದೇವತೆಗಳು ಮಹಿಮಾವಂತರಾದರಂತೆ, ಹೆಚ್ಚಿಗೆಯನ್ನು ಪಡೆದುಕೊಂಡ(ರಂತೆ). ಆಗ ತಮ್ಮಲ್ಲಿರುವ ಪ್ರತ್ಯಗಾತ್ಮನಾದ[5] ಸರ್ವಜ್ಞನೂ ಪ್ರಾಣಿಗಳ ಸಕಲ ಕರ್ಮಗಳಿಗೆ ಫಲವನ್ನು ಜೋಡಿಸಿ

---

1. ಶ್ರೋತ್ರಕ್ಕೆ ಶ್ರೋತ್ರವು ಮುಂತಾದ ಸ್ವರೂಪದ, ಎಲ್ಲಕ್ಕೂ ಪ್ರತ್ಯಗಾತ್ಮನಾಗಿರುವ.

2. ಅಂತೆ ಎಂದು ಹೇಳಿರುವದು ಈ ಕಥೆಯು ಅನಾದಿಸಂಪ್ರದಾಯಾಗತವೆಂದು ತಿಳಿಸುವದಕ್ಕೆ.

3. ಧರ್ಮದ ವ್ಯವಸ್ಥೆಯನ್ನು. ಸೇತು (ಎಂದರೆ ಅಣೆಗಟ್ಟು) ನೀರನ್ನು ಎರಡು ಭಾಗವಾಗಿ ವಿಂಗಡಿಸುವಂತೆ ಲೋಕದ ವ್ಯವಸ್ಥೆಯನ್ನು ವಿಂಗಡಿಸಿಡುವ ಧರ್ಮವನ್ನು ಈಶ್ವರನು ಏರ್ಪಡಿಸಿರುತ್ತಾನೆ.

4. ದೇವತೆಗಳು ಗೆದ್ದದ್ದೂ ಸುಖಿಗಳಾದದ್ದೂ ಬ್ರಹ್ಮದ ಬಲದಿಂದ.

5. ಈಶ್ವರನು ನಮ್ಮೆಲ್ಲರ ಆತ್ಮನೇ ಎಂದು ಹಿಂದೆ ಹೇಳಿರುವದನ್ನು ಇದು ನೆನಪಿಗೆ ತರುವದು.

ಕೊಡುವವನೂ[1] ಸರ್ವಶಕ್ತನೂ ಆದ ಈಶ್ವರನೇ ಜಗತ್ತಿನ ಸ್ಥಿತಿಯನ್ನು ಏರ್ಪಡಿಸುವದಕ್ಕಾಗಿ (ಪಡೆದುಕೊಟ್ಟ) ಗೆಲವಿದು, ಮತ್ತು (ಆತನದೇ) ಮಹಿಮೆಯಿದು-ಎಂದರಿಯದೆ ಆ ದೇವತೆಗಳು ಹೀಗೆಂದು ಯೋಚಿಸಿಕೊಂಡರು: "ಅಗ್ನಿಯೇ ಮುಂತಾದ ಸ್ವರೂಪದಿಂದ ಪರಿಚ್ಛಿನ್ನವಾಗಿರುವ[2] ನಮ್ಮ ಸ್ವರೂಪದಿಂದಾಗಿರುವದೇ, ನಮ್ಮದೇ ಈ ಗೆಲವು; ಗೆಲವಿನ ಫಲವಾಗಿ (ಬಂದಿರುವ) ಅಗ್ನಿ, ವಾಯು, ಇಂದ್ರ-ಮುಂತಾದ ಸ್ಥಾನದ ಈ ಮಹಿಮೆಯಿದೆಯಲ್ಲ (ಇದೂ) ನಮ್ಮದೇ, ನಾವೇ (ಗೆದ್ದು) ಇದನ್ನನುಭವಿಸುತ್ತಿರುವೆವು. ಇದು ನಮ್ಮಗಳ ಪ್ರತ್ಯಗಾತ್ಮನಾದ ಈಶ್ವರನಿಂದಾಗಿರುವದಲ್ಲ."

## ಬ್ರಹ್ಮವು ದೇವತೆಗಳಿಗೆ ಕಾಣಿಸಿಕೊಂಡದ್ದು

(ಭಾಷ್ಯ)

೬೭. ಏವಂ ಮಿಥ್ಯಾಭಿಮಾನೇಕ್ಷಣವತಾಮ್—

(ಭಾಷ್ಯಾರ್ಥ)

ಹೀಗೆ ತಪ್ಪುತಿಳಿವಳಿಕೆಯಿಂದ ಯೋಚಿಸಿಕೊಳ್ಳುತ್ತಿರುವ—

**ತದ್ಧೈಷಾಂ ವಿಜಜ್ಞೌ ತೇಭ್ಯೋ ಹ ಪ್ರಾದುರ್ಬಭೂವ**
**ತನ್ನ ವ್ಯಜಾನತ ಕಿಮಿದಂ ಯಕ್ಷಮಿತಿ ॥ ೨ ॥**

೨. ಇವರ (ಭಾವನೆಯನ್ನು) ಅದು ತಿಳಿದುಕೊಂಡಿತಂತೆ, ಅವರಿಗೆ ಕಾಣಿಸಿಕೊಂಡಿತಂತೆ. ಇದು ಯಾವ ಯಕ್ಷನೆಂಬುದನ್ನು (ಅವರು) ತಿಳಿಯಲಿಲ್ಲ.

(ಭಾಷ್ಯ)

೬೮. ತತ್ ಹ ಕಿಲ ಏಷಾಂ ಮಿಥ್ಯೇಕ್ಷಣಂ ವಿಜಜ್ಞೌ ವಿಜ್ಞಾತವದ್ ಬ್ರಹ್ಮ। ಸರ್ವೇಕ್ಷಿತೃ ಹಿ ತತ್ ಸರ್ವಭೂತಕರಣಪ್ರಯೋಕ್ತೃತ್ವಾತ್। ದೇವಾನಾಂ ಚ ಮಿಥ್ಯಾಜ್ಞಾನಮ್ ಉಪಲಭ್ಯ ಮೈವ ಅಸುರವದ್ದೇವಾ ಮಿಥ್ಯಾಭಿಮಾನಾತ್ ಪರಾಭವೇಯುಃ ಇತಿ ತದನುಕಮ್ಪಯಾ ದೇವಾನ್ ಮಿಥ್ಯಾಭಿಮಾನಾಪನೋದನೇನ ಅನುಗೃಹ್ಣೀಯಾಮ್ ಇತಿ ತೇಭ್ಯಃ ದೇವೇಭ್ಯಃ ಹ ಕಿಲ ಅರ್ಥಾಯ ಪ್ರಾದುರ್ಬಭೂವ ಸ್ವಯೋಗಮಾಹಾತ್ಮ್ಯನಿರ್ಮಿತೇನ ಅತ್ಯದ್ಭುತೇನ ವಿಸ್ಮಾಪನೀಯೇನ ರೂಪೇಣ

1. ಬರಿಯ ಕರ್ಮವು ಫಲವನ್ನು ಕೊಡುವದಿಲ್ಲ, ಈಶ್ವರನೇ ಕೊಡುವನು. ಸೂ. ಭಾ. ೩-೨-೩೮.

2. ತಮ್ಮ ಅಪರಿಚ್ಛಿನ್ನವಾದ ಆತ್ಮಸ್ವರೂಪವೇ ಈಶ್ವರನೆಂಬುದನ್ನರಿಯದೆ ವ್ಯಕ್ತಿರೂಪದಿಂದಿರುವ ತಾವೇ ಸ್ವತಂತ್ರರೆಂದು ಅಗ್ನ್ಯಾದಿಗಳು ತಿಳಿದುಕೊಂಡರು.

ದೇವಾನಾಮ್ ಇನ್ದ್ರಿಯಗೋಚರೇ ಪ್ರಾದುರ್ಬಭೂವ ಪ್ರಾದುರ್ಭೂತವತ್ *।
ತತ್ ಪ್ರಾದುರ್ಭೂತಂ ಬ್ರಹ್ಮ ನ ವ್ಯಜಾನತ ನೈವ ವಿಜ್ಞಾತವನ್ತಃ ದೇವಾಃ ಕಿಮಿದಂ
ಯಕ್ಷಂ ಪೂಜ್ಯಂ ಮಹದ್ಭೂತಮಿತಿ ॥

(ಭಾಷ್ಯಾರ್ಥ)

ಇವರ ತಪ್ಪುಭಾವನೆಯನ್ನು ಆ ಬ್ರಹ್ಮವು ತಿಳಿದುಕೊಂಡಿತಂತೆ. ಅದು ಸಮಸ್ತ ಪ್ರಾಣಿಗಳ ಕರಣಗಳನ್ನೂ ಪ್ರೇರಿಸುವದಾದ್ದರಿಂದ[1] ಎಲ್ಲವನ್ನೂ ನೋಡುತ್ತಿರುವ ದಲ್ಲವೆ? (ಆದ್ದರಿಂದ ತಿಳಿದುಕೊಂಡಿತು). ಮತ್ತು ದೇವತೆಗಳ ತಪ್ಪುತಿಳಿವಳಿಕೆ ಯನ್ನು ಕಂಡು ಅಸುರರಂತೆ ದೇವತೆಗಳು ಮಿಥ್ಯಾಭಿಮಾನದಿಂದ ಸೋತುಹೋಗಲೇ ಬಾರದು[2] ಎಂದು ಅವರಲ್ಲಿ ಮರುಕದಿಂದ ಮಿಥ್ಯಾಭಿಮಾನವನ್ನು ತೊಲಗಿಸಿ ದೇವತೆ ಗಳನ್ನು ಅನುಗ್ರಹಮಾಡೋಣವೆಂದು ಆ ದೇವತೆಗಳ ಪ್ರಯೋಜನಕ್ಕಾಗಿ ಕಾಣಿಸಿ ಕೊಂಡಿತಂತೆ, ತನ್ನ ಯೋಗದ[3] ಮಹಿಮೆಯಿಂದ ನಿರ್ಮಿತವಾದ ಅತ್ಯದ್ಭುತವಾದ (ಯಾರನ್ನಾದರೂ) ಬೆರಗುಗೊಳಿಸುವ ರೂಪದಿಂದ ದೇವತೆಗಳ ಇಂದ್ರಿಯಕ್ಕೆ ಗೋಚರವಾಗುವಂತೆ ಕಾಣಿಸಿಕೊಂಡಿತಂತೆ, ಮೈದೋರಿತಂತೆ. ಆ ಮೈದೋರಿದ ಬ್ರಹ್ಮವನ್ನು ಇದು ಯಾವ ಯಕ್ಷವು, ಪೂಜ್ಯವಾದ ಮಹಾಭೂತವು, ಎಂಬುದನ್ನು ದೇವತೆಗಳು ತಿಳಿಯಲಿಲ್ಲ, ಅರಿತುಕೊಳ್ಳಲೇ ಇಲ್ಲ.

## ಅಗ್ನಿಯೇ ಮೊದಲಾದವರ ಗರ್ವದ ಭಂಗ

**ತೇಗ್ನಿಮಬ್ರುವನ್ ಜಾತವೇದ ಏತದ್ವಿಜಾನೀಹಿ**
**ಕಿಮೇತದ್ ಯಕ್ಷಮಿತಿ ತಥೇತಿ ॥ ೩ ॥**

**ತದಭ್ಯದ್ರವತ್ ತಮಭ್ಯವದತ್ ಕೋಽಸೀತ್ಯಗ್ನಿರ್ವಾ**
**ಅಹಮಸ್ಮೀತ್ಯಬ್ರವೀಜ್ಜಾತವೇದಾ ವಾ ಅಹಮಸ್ಮೀತಿ ॥ ೪ ॥**

**ತಸ್ಮಿಗ್ಂ ಸ್ತ್ವಯಿ ಕಿಂ ವೀರ್ಯಮಿತ್ಯಪೀದಗ್ಂ**
**ಸರ್ವಂ ದಹೇಯಂ ಯದಿದಂ ಪೃಥಿವ್ಯಾಮಿತಿ ॥ ೫ ॥**

---

* (ವಾ॥) ಪಾಠದಲ್ಲಿದೆ.

1. ಒಂದನೆಯ ಖಂಡದಲ್ಲಿ ಹೇಳಿರುವಂತೆ ಪ್ರಾಣಿಗಳೆಲ್ಲದರ ಕರಣಗಳ ವ್ಯಾಪಾರಕ್ಕೆ ತನ್ನ ಸನ್ನಿಧಿಮಾತ್ರದಿಂದ ಕಾರಣವಾಗಿರುವದರಿಂದ.

2. ಸೋಲಿಗೆಲ್ಲ ಆಸುರಸಂಪತ್ತೇ ಕಾರಣವೆಂದು ಇದರಿಂದ ಸೂಚಿಸಿದಂತಾಯಿತು.

3. ಇಲ್ಲಿ ಯೋಗವೆಂದರೆ ಗುಣತ್ರಯಗಳನ್ನು ಸೇರಿಸುವ ಮಾಯಾವಿಲಾಸವು. (ಟೀ॥)

**ತಸ್ಮೈ ತೃಣಂ ನಿದಧಾವೇತದ್ದಹೇತಿ**
**ತದುಪಪ್ರೇಯಾಯ ಸರ್ವಜವೇನ**
**ತನ್ನ ಶಶಾಕ ದಗ್ಧುಂ ಸ ತತ ಏವ ನಿವವೃತೇ**
**ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥ ೬ ॥**

೩-೬. ಅವರು ಅಗ್ನಿಯನ್ನು (ಕುರಿತು) "ಜಾತವೇದನೆ, ಇದು ಯಾವ ಯಕ್ಷನೋ ಅದನ್ನು ತಿಳಿತುಕೊಂಡು ಬಾ" ಎಂದು ಹೇಳಿದರು. "ಆಗಲಿ!" ಎಂದು ಅದರ ಬಳಿಗೆ ಓಡಿದನು. ಅವನನ್ನು "ನೀನು ಯಾರು?" ಎಂದು ಕೇಳಿತು. "ನಾನು ಅಗ್ನಿಯೇ ಆಗಿರುವೆನು, ನಾನು ಜಾತವೇದನೇ ಆಗಿರುವೆನು" ಎಂದನು. "ಆ ನಿನ್ನಲ್ಲಿರುವ ವೀರ್ಯವು ಯಾವದು?" ಎನ್ನಲು "ಈ ಪೃಥಿವಿಯಲ್ಲಿ ಯಾವ ಯಾವದು ಇದೆಯೋ ಇದನ್ನೆಲ್ಲ ಸುಟ್ಟೇನು" ಎಂದನು. "ಇದನ್ನು ಸುಡು" ಎಂದು ಅವನೆದುರಿಗೆ ಹುಲ್ಲು ಕಡ್ಡಿಯನ್ನು ಇಟ್ಟಿತು. (ತನ್ನ) ಎಲ್ಲಾ ವೇಗದಿಂದಲೂ ಅದರ ಬಳಿಗೆ ಬಂದನು; ಅದನ್ನು ಸುಡುವದಕ್ಕಾಗಲಿಲ್ಲ. 'ಇದು ಯಾವ ಯಕ್ಷನೆಂಬುದನ್ನು ತಿಳಿಯುವದಕ್ಕೆ ಶಕ್ತನಾಗಲಿಲ್ಲ' ಎಂದು ಅವನು ಅಲ್ಲಿಂದಲೇ ಹಿಂತಿರುಗಿದನು.

ಭಾಷ್ಯ

೬೯. ತೇ ತದಜಾನನ್ತೋ ದೇವಾಃ ಸಾನ್ತರ್ಭಯಾಃ ತದ್ವಿಜಿಜ್ಞಾಸವಃ, ಅಗ್ನಿಮ್ ಅಗ್ರಗಾಮಿನಂ ಜಾತವೇದಸಂ ಸರ್ವಜ್ಞಕಲ್ಪಮ್ ಅಬ್ರುವನ್ ಉಕ್ತವನ್ತಃ । ಹೇ ಜಾತವೇದಃ ಏತತ್ ಅಸ್ಮದ್ಗೋಚರಸ್ಥಂ ಯಕ್ಷಂ ವಿಜಾನೀಹಿ ವಿಶೇಷತೋ ಬುಧ್ಯಸ್ವ ತ್ವಂ ನಸ್ತೇಜಸ್ವೀ ಕಿಮೇತದ್ ಯಕ್ಷಮಿತಿ । ತಥಾ ಅಸ್ತು ಇತಿ ತತ್ ಯಕ್ಷಮ್ ಅಭ್ಯದ್ರವತ್ ಪ್ರತಿಗತವಾನ್ ಅಗ್ನಿಃ । ತಂ ಚ ಗತವನ್ತಂ ಪಿಪೃಚ್ಛಿಷುಂ ತತ್ಸಮೀಪೇ ಅಪ್ರಗಲ್ಭತ್ವಾತ್ ತೂಷ್ಣೀಂಭೂತಂ ತತ್ ಯಕ್ಷಮ್ ಅಭ್ಯವದತ್ ಅಗ್ನಿಂ ಪ್ರತಿ ಅಭಾಷತ "ಕೋಽಸಿ?" ಇತಿ । ಏವಂ ಬ್ರಹ್ಮಣಾ ಪ್ರಷ್ಟೋಽಗ್ನಿಃ ಅಬ್ರವೀತ್ "ಅಗ್ನಿರ್ವೈ ಅಗ್ನಿರ್ನಾಮಾಹಂ ಪ್ರಸಿದ್ಧೋ ಜಾತವೇದಾ" ಇತಿ ಚ ನಾಮದ್ವಯೇನ ಪ್ರಸಿದ್ಧತಯಾ ಆತ್ಮಾನಂ ಶ್ಲಾಘಯನ್ । ಇತ್ಯೇವಮುಕ್ತವನ್ತಂ ಬ್ರಹ್ಮ ಅವೋಚತ್ "ತಸ್ಮಿನ್ ಏವಂ ಪ್ರಸಿದ್ಧಗುಣನಾಮವತಿ ತ್ವಯಿ ಕಿಂ ವೀರ್ಯಂ ಸಾಮರ್ಥ್ಯಮ್?" ಇತಿ । ಸೋಽಬ್ರವೀತ್ "ಇದಂ ಜಗತ್ ಸರ್ವಂ ದಹೇಯಂ ಭಸ್ಮೀಕುರ್ಯಾಮ್, ಯತ್ ಇದಂ ಸ್ಥಾವರಾದಿ ಪೃಥಿವ್ಯಾಮ್" ಇತಿ । 'ಪೃಥಿವ್ಯಾಮ್' ಇತ್ಯುಪಲಕ್ಷಣಮ್, ಯತೋಽನ್ತರಿಕ್ಷಸ್ಥಮಪಿ ದಹ್ಯತ ಏವಾಗ್ನಿನಾ ॥

(ಭಾಷ್ಯಾರ್ಥ)

ಅದನ್ನರಿಯಲಾರದೆ ಆ ದೇವತೆಗಳು ಒಳಗೆ ಅಂಜಿಕೆಯಿಂದ ಕೂಡಿದವರಾಗಿ ಅದನ್ನು ತಿಳಿದುಕೊಳ್ಳಬೇಕೆಂದು **ಅಗ್ನಿ**ಯನ್ನು, (ತಮ್ಮ) ಮುಂದಾಳಾದ[1] ಸರ್ವಜ್ಞ ಕಲ್ಪನಾದ[2] **ಜಾತವೇದ**ನನ್ನು ಕುರಿತು, (ಹೀಗೆ) ಹೇಳಿದರು, ಇಂತೆಂದರು : " ಎಲೈ ಜಾತವೇದನೆ, ಈ ನಮ್ಮ ಮುಂದೆ ಕಾಣಿಸುತ್ತಿರುವ ಯಕ್ಷನು ಯಾವದೋ ತಿಳಿದು ಕೊಂಡು ಬಾ, ಬಿಡಿಸಿ ಅರಿತುಕೊಂಡು ಬಾ, (ಏಕೆಂದರೆ) ನೀನು ನಮ್ಮಲ್ಲೆಲ್ಲ ತೇಜಸ್ವಿ ಯಾಗಿರುವೆ."

ಆ ಅಗ್ನಿಯು 'ಹಾಗೇ ಆಗಲಿ' ಎಂದು ಆ ಯಕ್ಷನ ಬಳಿಗೆ ಓಡಿದನು, ಅದನ್ನು ಕುರಿತು ಹೋದನು. ಹಾಗೆ ಹೋಗಿ ಪ್ರಶ್ನೆಯನ್ನು ಕೇಳಬೇಕೆಂದಿದ್ದರೂ ಆ (ಬ್ರಹ್ಮದ) ಬಳಿಯಲ್ಲಿ ಏನೂ ತೋಚದೆ[3] ಸುಮ್ಮನಾದ ಆ ಅಗ್ನಿಯನ್ನು ಆ ಯಕ್ಷನು ಮಾತನಾಡಿಸಿತು, "ನೀನು ಯಾರು?" ಎಂದು ಕೇಳಿತು. ಹೀಗೆಂದು ಬ್ರಹ್ಮವು ಕೇಳಲು ಅಗ್ನಿಯು " ಅಗ್ನಿಯೇ ನಾನು ಅಗ್ನಿ ಎಂಬ ಹೆಸರಿನಿಂದ ನಾನು ಪ್ರಸಿದ್ಧನಾಗಿರು ವೆನು, ಜಾತವೇದನೆಂದೂ (ಪ್ರಸಿದ್ಧನಾಗಿರುವೆನು)" ಎಂದು ಎರಡು ಹೆಸರುಗ ಳಿಂದಲೂ ಪ್ರಸಿದ್ಧನಾಗಿರುವೆನೆಂದು ತನ್ನನ್ನು ಹೊಗಳಿಕೊಂಡು ಉತ್ತರವನ್ನು ಕೊಟ್ಟನು.

ಅವನು ಹೀಗೆನ್ನಲಾಗಿ ಬ್ರಹ್ಮವು " ಇಂಥ ಪ್ರಸಿದ್ಧವಾದ ಗುಣನಾಮಗಳಿಂದೊಡ ಗೂಡಿದ ನಿನ್ನಲ್ಲಿರುವ ವೀರ್ಯವು ಸಾಮರ್ಥ್ಯವು ಯಾವದು?" ಎಂದು ಕೇಳಿತು. ಅವನು " ಈ ಪೃಥಿವಿಯಲ್ಲಿ ಸ್ಥಾವರಾದಿಯಾಗಿ ಈ ಯಾವಯಾವದು ಇದೆಯೋ ಇದೆಲ್ಲವನ್ನೂ ಸುಟ್ಟೇನು, ಬೂದಿಗೈಯಬಲ್ಲೆನು" ಎಂದನು. (ಇಲ್ಲಿ) 'ಪೃಥಿವಿ ಯಲ್ಲಿ' ಎಂದು ಹೇಳಿರುವದು **ಉಪಲಕ್ಷಣವು**, ಏಕೆಂದರೆ ಅಂತರಿಕ್ಷದಲ್ಲಿರುವದಲ್ಲಿರು ವದೂ ಅಗ್ನಿಯಿಂದ ಸುಟ್ಟೇಸುಡುತ್ತದೆ.

---

1. ಅಗ್ನಿ ಎಂಬ ಮಾತಿಗೆ ಅಗ್ರಗಾಮಿ ಎಂಬರ್ಥವನ್ನು ಇಲ್ಲಿ ಕೊಟ್ಟಿರುತ್ತದೆ. ದೇವತೆ ಗಳಿಗೆ ಹವಿಸ್ಸನ್ನು ಒಯ್ದು ಒಪ್ಪಿಸುವವನು ಅಗ್ನಿಯು.

2. ಜಾತವೇದನೆಂದರೆ ನಡೆದದ್ದನ್ನೆಲ್ಲ ತಿಳಿಯುವವನು. ಎಲ್ಲಾ ಕರ್ಮಗಳೂ ಅಗ್ನಿ ಸಾಕ್ಷಿಕವಾಗಿಯೇ ನಡೆಯುವವು; ಆದ್ದರಿಂದ ಅಗ್ನಿಗೆ ತಿಳಿಯದ್ದೇ ಇಲ್ಲವೆಂದು ಭಾವ. ಸರ್ವಜ್ಞಕಲ್ಪನು, ಸ್ವಲ್ಪ ಹೆಚ್ಚುಕಡಮೆಯಾಗಿ ಸರ್ವಜ್ಞನೇ,. ಎಂದು ಅಗ್ನಿಗೆ ವಿಶೇಷಣವನ್ನು ಕೊಟ್ಟಿರುವದಕ್ಕೆ ಇದೇ ಕಾರಣ.

3. ಅಗ್ನಿಯ ಆತ್ಮನೇ ಪರಮಾತ್ಮನು; ಆದ್ದರಿಂದ ಇವನಿಗೆ ತನ್ನ ಆತ್ಮನನ್ನು ವಿಷಯ ಮಾಡಿಕೊಂಡು ಅರಿಯುವದು ಆಗಲಿಲ್ಲ.

(ಭಾಷ್ಯ)

೭೦. ತಸ್ಮೈ ಏವಮಭಿಮಾನವತೇ ಬ್ರಹ್ಮ ತೃಣಂ ನಿದಧೌ ಪುರೋಽಗ್ನೇಃ ಸ್ಥಾಪಿತವತ್। ಬ್ರಹ್ಮಣಾ[1] "ಏತತ್ ತೃಣಮಾತ್ರಂ ಮಮಾಗ್ರತೋ ದಹ। ನ ಚೇದಸಿ ದಗ್ಧುಂ ಸಮರ್ಥಃ, ಮುಞ್ಚ ದಗ್ಧೃತ್ವಾಭಿಮಾನಂ ಸರ್ವತ್ರ" ಇತ್ಯುಕ್ತಃ ತತ್ ತೃಣಮ್ ಉಪಪ್ರೇಯಾಯ ತೃಣಸಮೀಪಂ ಗತವಾನ್ ಸರ್ವಜವೇನ ಸರ್ವೋತ್ಸಾಹ ಕೃತೇನ ವೇಗೇನ। ಗತ್ವಾ ತತ್ ನ ಶಶಾಕ ನಾಶಕತ್ ದಗ್ಧುಮ್। ಸ ಜಾತವೇದಾಃ ತೃಣಂ ದಗ್ಧುಮಶಕ್ತೋ ವ್ರೀಡಿತೋ ಹತಪ್ರತಿಜ್ಞಃ ತತ ಏವ ಯಕ್ಷಾದೇವ ತೂಷ್ಣೀಂ ದೇವಾನ್ ಪ್ರತಿ ನಿವವೃತೇ ನಿವೃತ್ತಃ ಪ್ರತಿಗತವಾನ್ ನೈತತ್ ಯಕ್ಷಮ್ ಅಶಕಂ ಶಕ್ತವಾನ್ ಅಹಂ ವಿಜ್ಞಾತುಂ ವಿಶೇಷತಃ ಯದೇತದ್ಯಕ್ಷಮಿತಿ ॥

(ಭಾಷ್ಯಾರ್ಥ)

ಇಂಥ ಅಭಿಮಾನವುಳ್ಳ[2] ಅಗ್ನಿಯ ಮುಂದುಗಡೆಯಲ್ಲಿ ಬ್ರಹ್ಮವು (ಒಂದು) ಹುಲ್ಲುಕಡ್ಡಿಯನ್ನು ಇಟ್ಟಿತು, ಹಾಕಿತು ಈ ಹುಲ್ಲುಕಡ್ಡಿಯೊಂದನ್ನು ನನ್ನ ಮುಂದೆ ಸುಡು (ನೋಡೋಣ); (ಹಾಗೆ) ಸುಡುವದಕ್ಕೆ ಕೈಯಲ್ಲಾಗದಿದ್ದರೆ ಎಲ್ಲವನ್ನೂ ಸುಡುವೆನೆಂಬ ಅಭಿಮಾನವನ್ನು ಬಿಟ್ಟುಬಿಡು" ಎಂದು ಬ್ರಹ್ಮವು ಹೇಳಲಾಗಿ (ಅಗ್ನಿಯು) ತನ್ನ ಎಲ್ಲಾ ವೇಗದಿಂದಲೂ ಪೂರ್ಣವಾದ ಉತ್ಸಾಹದಿಂದ ಕೂಡಿದ ವೇಗದಿಂದ, ಅದರ ಬಳಿಗೆ ಬಂದನು, ಆ ಹುಲ್ಲುಕಡ್ಡಿಯ ಹತ್ತಿರಕ್ಕೆ ಬಂದನು. ಅದನ್ನು ಸುಡುವದಕ್ಕೆ ಆಗಲಿಲ್ಲ, ಶಕ್ತನಾಗಲಿಲ್ಲ. ಆ ಜಾತವೇದನು ಹುಲ್ಲುಕಡ್ಡಿಯನ್ನು (ಕೂಡ) ಸುಡಲಾರದೆ ನಾಚಿಕೆಯಿಂದ ತಾನು ಹೇಳಿದ್ದನ್ನು ನಡೆಯಿಸಲಾರದವನಾಗಿ ಅಲ್ಲಿಂದಲೇ, ಆ ಯಕ್ಷನ ಬಳಿಯಿಂದಲೇ, "ಇದು ಯಾವ ಯಕ್ಷನೋ ಎಂಬುದನ್ನು ಬಿಡಿಸಿ ಗೊತ್ತುಪಡಿಸಲಾರದೆ ಹೋದೆನು" ಎಂದು ದೇವತೆಗಳ ಬಳಿಗೆ ಹಿಂತಿರುಗಿದನು.

**ಅಥ ವಾಯುಮಬ್ರುವನ್ ವಾಯವೇತ**
**ದ್ವಿಜಾನೀಹಿ ಕಿಮೇತದ್ಯಕ್ಷಮಿತಿ ತಥೇತಿ ॥ ೭ ॥**

**ತದಭ್ಯದ್ರವತ್ ತಮಭ್ಯವದತ್ ಕೋಽಸೀತಿ ವಾಯುರ್ವಾ**
**ಅಹಮಸ್ಮೀತ್ಯಬ್ರವೀನ್ಮಾತರಿಶ್ವಾ ವಾ ಅಹಮಸ್ಮೀತಿ ॥ ೮ ॥**

**ತಸ್ಮಿಗ್‌ಂಸ್ತ್ವಯಿ ಕಿಂ ವೀರ್ಯಮಿತ್ಯಪೀದಗ್‌ಂ**
**ಸರ್ವಮಾದದೀಯ ಯದಿದಂ ಪೃಥಿವ್ಯಾಮಿತಿ ॥ ೯ ॥**

---

1. ಈ (ವಾ॥) ಪಾಠವೇ ಉತ್ತಮ.
2. ತಾನೇ ಎಲ್ಲವನ್ನೂ ಸುಡುವೆನು ಎಂಬ ಅಭಿಮಾನವುಳ್ಳ.

**ತಸ್ಮೈ ತೃಣಂ ನಿದಧಾವೇತದಾದತ್ಸ್ವೇತಿ ತದುಪಪ್ರೇಯಾಯ ಸರ್ವಜವೇನ ತನ್ನ ಶಶಾಕಾದಾತುಂ ಸ ತತ ಏವ ನಿವವೃತೇ ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥ ೧೦ ॥**

೭-೧೦. ಆಮೇಲೆ ವಾಯುವನ್ನು ಕುರಿತು "ವಾಯುವೆ, ಇದು ಯಾವ ಯಕ್ಷನೋ ಅದನ್ನು ತಿಳಿದುಕೊಂಡು ಬಾ" ಎಂದರು. "ಆಗಲಿ!" ಎಂದು ಅದರ ಬಳಿಗೆ ಓಡಿದನು. ಅವನನ್ನು "ನೀನು ಯಾರು?" ಎಂದು ಕೇಳಿತು. "ವಾಯುವೇ ನಾನಾಗಿರುವೆನು, ನಾನು ಮಾತರಿಶ್ವನೇ ಆಗಿರುವೆನು" ಎಂದನು. 'ಆ ನಿನ್ನಲ್ಲಿರುವ ವೀರ್ಯವು ಯಾವದು?" ಎನ್ನಲು "ಈ ಪೃಥಿವಿಯಲ್ಲಿ ಯಾವ ಯಾವದು ಇದೆಯೋ ಇದನ್ನೆಲ್ಲ ಎತ್ತಿ ಕೊಂಡೇನು" ಎಂದನು. "ಇದನ್ನು ಎತ್ತಿಕೊ" ಎಂದು ಅವನೆದುರಿಗೆ ಹುಲ್ಲುಕಡ್ಡಿಯನ್ನು ಇಟ್ಟಿತು. ತನ್ನ ಎಲ್ಲಾ ವೇಗದಿಂದಲೂ ಅದರ ಬಳಿಗೆ ಬಂದನು; ಅದನ್ನು ಎತ್ತಿಕೊಳ್ಳುವದಾಗಲಿಲ್ಲ. "ಇದು ಯಾವ ಯಕ್ಷನೆಂಬುದನ್ನು ತಿಳಿಯುವದಕ್ಕೆ ಶಕ್ತನಾಗಲಿಲ್ಲ" ಎಂದು ಅವನು ಅಲ್ಲಿಂದಲೇ ಹಿಂತಿರುಗಿದನು.

(ಭಾಷ್ಯ)

೭೧. ಅಥ ಅನನ್ತರಂ ವಾಯುಮಬ್ರುವನ್ ಹೇ ವಾಯೋ ಏತದ್ ವಿಜಾನೀಹಿ ಇತ್ಯಾದಿ ಸಮಾನಾರ್ಥಂ ಪೂರ್ವೇಣ । ವಾನಾತ್ ಗಮನಾತ್, ಗನ್ಧನಾದ್ವಾ ವಾಯುಃ । ಮಾತರಿ ಅನ್ತರಿಕ್ಷೇ ಶ್ವಯತೀತಿ ಮಾತರಿಶ್ವಾ । ಇದಂ ಸರ್ವಮಪಿ ಆದದೀಯ ಗೃಹ್ಣೀಯಾಮ್ । ಯದಿದಂ ಪೃಥಿವ್ಯಾಮ್ ಇತ್ಯಾದಿ ಸಮಾನಮೇವ ॥

(ಭಾಷ್ಯಾರ್ಥ)

ಆಮೇಲೆ ಆ ಬಳಿಕ (ಅವರು) ವಾಯುವನ್ನು ಕುರಿತು ಇಂತೆಂದರು: ಎಲೈ ವಾಯುವೆ, "ಅದನ್ನು ತಿಳಿದುಕೊಂಡು ಬಾ" (ಎಂದು ಮುಂತಾಗಿರುವ) ಗ್ರಂಥ ಭಾಗವು) ಹಿಂದಿನ (ಗ್ರಂಥಭಾಗದಂತೆ) ಅದೇ ಅರ್ಥವುಳ್ಳದ್ದಾಗಿರುತ್ತದೆ. ಬೀಸುವದರಿಂದ ಎಂದರೆ ಚಲಿಸುವದರಿಂದ ಅಥವಾ ವಾಸನೆಯನ್ನು ಕೊಡುವದರಿಂದ[1] **ವಾಯು**ವೆಂದು ಹೆಸರು. ಮಾತೃವಿನಲ್ಲಿ ಎಂದರೆ ಅಂತರಿಕ್ಷದಲ್ಲಿ [ಶ್ವಯತಿ] ಚಲಿಸುತ್ತಾನಾದ್ದರಿಂದ **ಮಾತರಿಶ್ವ**ನೆಂದು ಹೆಸರು. ಇದೆಲ್ಲವನ್ನೂ ಎತ್ತಿಕೊಂಡೇನು, ಎಂದರೆ ತೆಗೆದುಕೊಂಡೇನು (ಎಂದರ್ಥ). "ಈ ಪೃಥಿವಿಯಲ್ಲಿ ಯಾವ ಯಾವದು ಇದೆಯೋ" ಎಂದು ಮುಂತಾಗಿರುವ (ಗ್ರಂಥಭಾಗವು ಹಿಂದಿನ ಮಂತ್ರಕ್ಕೂ ಈ ಮಂತ್ರಕ್ಕೂ) ಸಮಾನವಾಗಿಯೇ (ಇದೆ).

---

1. **ವಾ ಗತಿಗನ್ಧನಯೋಃ । ಹೋಗು, ವಾಸನೆ ಕೊಡು ಎಂಬರ್ಥದ 'ವಾ' ಧಾತುವಿನಿಂದ ವಾಯುವೆಂಬ ಮಾತು ಹುಟ್ಟಿದೆ ಎಂದು ಭಾವ.**

**ಅಥೇನ್ದ್ರಮಬ್ರುವನ್ ಮಘವನ್ನೇತದ್ವಿಜಾನೀಹಿ**
**ಕಿಮೇತದ್ಯಕ್ಷಮಿತಿ ತಥೇತಿ । ತದಭ್ಯದ್ರವತ್ ತಸ್ಮಾತ್**
**ತಿರೋದಧೇ ॥ ೧೧ ॥**

೧೧. ಆಮೇಲೆ ಇಂದ್ರನನ್ನು ಕುರಿತು "ಮಘವಂತನೆ, ಇದು ಯಾವ ಯಕ್ಷನೋ ಅದನ್ನು ತಿಳಿದುಕೊಂಡು ಬಾ" ಎಂದರು. "ಆಗಲಿ!" ಎಂದು ಅದರ ಬಳಿಗೆ ಓಡಿದನು. (ಅದು) ಅವನಿಂದ ಮರೆಯಾಯಿತು.

(ಭಾಷ್ಯ)

೭೨. ಅಥ ಇನ್ದ್ರಮಬ್ರುವನ್ "ಮಘವನ್ ಏತದ್ವಿಜಾನೀಹಿ" ಇತ್ಯಾದಿ ಪೂರ್ವವತ್ ಇನ್ದ್ರಃ ಪರಮೇಶ್ವರಃ, ಮಘವಾನ್[1] ಬಲವತ್ತ್ವಾತ್ । ತಥೇತಿ ತದಭ್ಯದ್ರವತ್ । ತಸ್ಮಾತ್ ಇನ್ದ್ರಾತ್ ಆತ್ಮಸಮೀಪಂ ಗತಾತ್ ತದ್ ಬ್ರಹ್ಮ ತಿರೋದಧೇ ತಿರೋಭೂತಮ್ । "ಇನ್ದ್ರಸ್ಯ ಇನ್ದ್ರತ್ವಾಭಿಮಾನೋಽತಿತರಾಂ ನಿರಾಕರ್ತವ್ಯಃ" ಇತ್ಯತಃ ಸಂವಾದಮಾತ್ರಮಪಿ ನಾದಾತ್ ಬ್ರಹ್ಮ ಇನ್ದ್ರಾಯ ॥

(ಭಾಷ್ಯಾರ್ಥ)

ಆಮೇಲೆ ಇಂದ್ರನನ್ನು ಕುರಿತು 'ಮಘವಂತನೆ' ಇದನ್ನು ತಿಳಿದುಕೊಂಡು ಬಾ" ಎಂಬುದೇ ಮುಂತಾದ (ಗ್ರಂಥಭಾಗಕ್ಕೆ ಹಿಂದಿನಂತೆಯೇ) ಸಮಾನವಾದ (ಅರ್ಥವನ್ನು) ಹೇಳಬೇಕು. ಇಂದ್ರನೆಂದರೆ ಹೆಚ್ಚಿನ ಒಡೆಯನು[2]. ಬಲವುಳ್ಳವನಾದ್ದರಿಂದ[3] **ಮಘವಂತ**(ನೆಂದು ಅವನಿಗೆ ಹೆಸರು). "ಆಗಲಿ!" ಎಂದು (ಇಂದ್ರನು) ಆ (ಬ್ರಹ್ಮದ) ಬಳಿಗೆ ಓಡಿದನು. ತನ್ನ ಬಳಿಗೆ ಬಂದ ಆ ಇಂದ್ರನಿಂದ ಆ ಬ್ರಹ್ಮವು ಮರೆಯಾಯಿತು. ಇಂದ್ರನ 'ತಾನು ಇಂದ್ರನು' ಎಂಬ ಅಭಿಮಾನವನ್ನು ತೀರ ತೊಲಗಿಸಬೇಕು ಎಂಬ ಕಾರಣದಿಂದ (ಇಂದ್ರನಿಗೆ) ಬ್ರಹ್ಮವು ಬರಿಯ ಸಂವಾದವನ್ನು ಕೂಡ ಕೊಡಲಿಲ್ಲ.[4]

---

1. "ಮಘವಾ" ಎಂದು (ವಾ॥) ಪಾಠ.

2 ಇಂದ್ರನೆಂದರೆ ಪರಮೇಶ್ವರನು, ಎಲ್ಲರಿಗೂ ಒಡೆಯನು. ನಿಜವಾಗಿ ನೋಡಿದರೆ ಪರಮಾತ್ಮನೇ ಇಂದ್ರನು, ಆ ಹೆಸರಿಗೆ ಮತ್ತೆ ಯಾವ ವ್ಯಕ್ತಿಯೂ ತಕ್ಕದ್ದಲ್ಲ. ಐ. ೧-೩ ನೋಡಿ. ಆದರೆ ದೇವತೆಗಳಿಗೆ ಒಡೆಯನೆಂಬ ಹೆಸರು ವ್ಯಾವಹಾರಿಕದೃಷ್ಟಿಯಿಂದ ಒಬ್ಬ ದೇವತೆಗೆ ಬಂದಿದೆ.

3 ಉಪಾಸಕರಿಗೆ ಬಲವನ್ನು ಕೊಡುವದರಿಂದ ಮಘವಂತನೆಂಬ ಹೆಸರು ಇಂದ್ರನಿಗೆ ಬಂದಿದೆ ಎಂದು ಭಾವ. "ಯಜ್ಞವತ್ತ್ವಾತ್" ಎಂಬ (ಹಿ॥) ಪಾಠವೂ ಉಂಟು; ಆದರೆ ಮಘವೆಂಬ ಮಾತಿಗೆ ಯಜ್ಞವೆಂಬರ್ಥವು ಇರುವಂತೆ ತೋರುವದಿಲ್ಲ.

4 ಇದರಿಂದ ಇಂದ್ರನಿಗೆ ತನ್ನ ಒಡೆತನವು ಎಲ್ಲೆಲ್ಲಿಯೂ ನಡೆಯುವದೆಂಬ ದುರಭಿಮಾನವು ಹೋಗುವದಕ್ಕೆ ಕಾರಣವಾಯಿತು; ಯಕ್ಷನು ಯಾರೆಂಬುದನ್ನು ವಿಚಾರಿಸುವ ಬುದ್ಧಿಯೂ ಬಂದಿತು.

# ಇಂದ್ರನಿಗೆ ಉಮೆಯ ಉಪದೇಶ

**ಸ ತಸ್ಮಿನ್ನೇವಾಕಾಶೇ ಸ್ತ್ರಿಯಮಾಜಗಾಮ ಬಹುಶೋಭ-
ಮಾನಾಮುಮಾಗ್ಂ ಹೈಮವತೀಂ ತಾಗ್ಂ ಹೋವಾಚ
ಕಿಮೇತದ್ಯಕ್ಷಮಿತಿ ॥ ೧೨ ॥**

೧೨. ಅವನು ಅದೇ ಆಕಾಶದಲ್ಲಿ (ಒಬ್ಬ) ಸ್ತ್ರೀಯನ್ನು—ಬಹುವಾಗಿ ಶೋಭಿಸುವ ಹೈಮವತಿಯಾದ ಉಮೆಯನ್ನು - ಬಳಿಸಾರಿದನು. ಆಕೆಯನ್ನು "ಇದು ಯಾವ ಯಕ್ಷನು" ಎಂದು ಕೇಳಿದನು.

(ಭಾಷ್ಯ)

೭೩. ತದ್ಯಕ್ಷಂ ಯಸ್ಮಿನ್ನಾಕಾಶೇ ಆಕಾಶಪ್ರದೇಶೇ ಆತ್ಮಾನಂ ದರ್ಶಯಿತ್ವಾ ತಿರೋಭೂತಮ್, ಇನ್ದ್ರಶ್ಚ ಬ್ರಹ್ಮಣಸ್ತಿರೋಧಾನಕಾಲೇ ಯಸ್ಮಿನ್ ಆಕಾಶೇ ಆಸೀತ್ ಸ ಇನ್ದ್ರಃ ತಸ್ಮಿನ್ನೇವಾಕಾಶೇ ತಸ್ಥೌ "ಕಿಂ ತದ್ ಯಕ್ಷಮ್ ?" ಇತಿ ಧ್ಯಾಯನ್ । ನ ನಿವವೃತೇ ಅಗ್ನ್ಯಾದಿವತ್ । ತಸ್ಯ ಇನ್ದ್ರಸ್ಯ ಯಕ್ಷೇ ಭಕ್ತಿಂಬುದ್ಧ್ವಾ ವಿದ್ಯಾ ಉಮಾರೂಪಿಣೀ ಪ್ರಾದುರಭೂತ್ ಸ್ತ್ರೀರೂಪಾ । ಸ ಇನ್ದ್ರಃ ತಾಮ್ ಉಮಾಂ ಬಹು ಶೋಭಮಾನಾಮ್ । ಸರ್ವೇಷಾಂ ಹಿ ಶೋಭಮಾನಾನಾಂ ಶೋಭ(ಮಾ)ನತಮಾ ವಿದ್ಯಾ । ತದಾ 'ಬಹು ಶೋಭಮಾನಾ' ಇತಿ ವಿಶೇಷಣಮ್ ಉಪಪನ್ನಂ ಭವತಿ । ಹೈಮವತೀಂ ಹೇಮಕೃತಾಭರಣವತೀಮಿವ ಬಹುಶೋಭಮಾನಾಮಿತ್ಯರ್ಥಃ । ಅಥವಾ ಉಮೈವ **ಹಿಮವತೋ ದುಹಿತಾ ಹೈಮವತೀ** ನಿತ್ಯಮೇವ ಸರ್ವಜ್ಞೇನೇಶ್ವರೇಣ ಸಹ ವರ್ತತ ಇತಿ ಜ್ಞಾತುಂ ಸಮರ್ಥಾ ಇತಿ ಕೃತ್ವಾ ತಾಮ್ ಉಪಜಗಾಮ । ಇನ್ದ್ರಃ ತಾಂ ಹ ಉಮಾಂ ಕಿಲ ಉವಾಚ ಪಪ್ರಚ್ಛ ಬ್ರೂಹಿ ಕಿಮ್ ಏತದ್ ದರ್ಶಯಿತ್ವಾ ತಿರೋಭೂತಂ ಯಕ್ಷಮಿತಿ ॥

(ಭಾಷ್ಯಾರ್ಥ)

ಆ ಯಕ್ಷನು ಯಾವ ಆಕಾಶದಲ್ಲಿ ಎಂದರೆ ಆಕಾಶದ ಪ್ರದೇಶದಲ್ಲಿ[1] ತನ್ನನ್ನು (ತಾನೇ) ತೋರಿಸಿ ಮರೆಯಾಯಿತೋ, ಮತ್ತು ಬ್ರಹ್ಮವು ಮರೆಯಾದ ಕಾಲದಲ್ಲಿ ಇಂದ್ರನು ಯಾವ ಆಕಾಶದಲ್ಲಿ ಇದ್ದನೋ, ಆ ಇಂದ್ರನು ಅದೇ ಆಕಾಶದಲ್ಲಿಯೇ "ಆ ಯಕ್ಷನು ಯಾವದು?" ಎಂದು ಯೋಚಿಸಿಕೊಳ್ಳುತ್ತಾ ನಿಂತುಕೊಂಡಿದ್ದನು, ಅಗ್ನಿಯೇ ಮೊದಲಾದವರಂತೆ ಹಿಂತಿರುಗಲಿಲ್ಲ. ಆ ಇಂದ್ರನಿಗೆ ಯಕ್ಷನಲ್ಲಿದ್ದ ಭಕ್ತಿಯನ್ನು ಮನದಂದು **ವಿದ್ಯೆಯು ಉಮಾರೂಪದಿಂದ** ಸ್ತ್ರೀಯಾಗಿ ಕಾಣಿಸಿಕೊಂಡಿತು.

---

1. ಆಕಾಶವು ಒಂದೇ ; ಆದ್ದರಿಂದ ಆ ಆಕಾಶ, ಈ ಆಕಾಶ ಎಂದು ವ್ಯವಹರಿಸುವಾಗ ಅದರ ಪ್ರದೇಶವೆಂದೇ ಅರ್ಥವನ್ನು ಮಾಡಬೇಕೆಂದು ಭಾವ.

ಆ ಇಂದ್ರನು ಬಹುವಾಗಿ ಶೋಭಿಸುತಲಿದ್ದ ಆ ಉಮೆಯನ್ನು-ಶೋಭಿಸುವ (ವಿದ್ಯೆ)ಗಳಲ್ಲೆಲ್ಲ (ಬ್ರಹ್ಮ) ವಿದ್ಯೆಯು[1] ಹೆಚ್ಚಾಗಿ ಶೋಭಿಸುತ್ತಿರುವದಲ್ಲವೆ? (ಆದ್ದರಿಂದ ಇಲ್ಲಿ ಬ್ರಹ್ಮವಿದ್ಯೆಯೆಂಬ ಅರ್ಥವನ್ನು ಇಟ್ಟುಕೊಂಡರೆ) ಆಗ 'ಬಹುವಾಗಿ ಶೋಭಿಸುವ' ಎಂಬ ವಿಶೇಷಣವು ಹೊಂದುತ್ತದೆ. ಹೈಮವತಿಯಾದ ಎಂದರೆ ಚಿನ್ನದಿಂದ ಮಾಡಿದ ಆಭರಣಗಳನ್ನು ತೊಟ್ಟವಳಂತೆ ಬಹುವಾಗಿ ಶೋಭಿಸುತ್ತಿರುವ ಎಂದರ್ಥ. ಅಥವಾ ಹಿಮವಂತನ ಮಗಳಾದ[2] **ಉಮೆಯೇ** ಇಲ್ಲಿ **ಹೈಮವತಿ** (ಎಂಬ ಶಬ್ದದಿಂದ ಹೇಳಲ್ಪಟ್ಟಿರುತ್ತಾಳೆಂದೂ ಅರ್ಥಮಾಡಬಹುದು ಆಕೆಯು) ಸರ್ವಜ್ಞನಾದ **ಈಶ್ವರ**ನೊಡನೆ[3] ಯಾವಾಗಲೂ ಇರುವಳಾದ್ದರಿಂದ (ಆತನ ಸ್ವರೂಪವನ್ನು ಆಕೆಯೇ) ಬಲ್ಲಳು ಎಂದು ಆಕೆಯ ಬಳಿಗೆ ಬಂದನು ಇಂದ್ರನು ಆ ಉಮಾದೇವಿಯನ್ನು-ಕುರಿತು ಇಂತೆಂದನಂತೆ "ಇಗೋ ಇಲ್ಲಿ ಕಾಣಿಸಿಕೊಂಡು ಮರೆಯಾಯಿತಲ್ಲ, ಇದು ಯಾವ ಯಕ್ಷನು?" ಎಂದು ಕೇಳಿದನಂತೆ.[4]



1. ಬ್ರಹ್ಮವಿದ್ಯೆಯು ಸರ್ವವಿದ್ಯೆಗಳಿಗಿಂತಲೂ ಹೆಚ್ಚಿನದು; ಏಕೆಂದರೆ ಅದರಲ್ಲಿಯೇ ಮಿಕ್ಕ ಎಲ್ಲಾ ವಿದ್ಯೆಗಳೂ ಪರಿಸಮಾಪ್ತಿಯಾಗುತ್ತವೆ. ಮು. ಭಾ. ೧-೧-೧; ಗೀ. ಭಾ. ೧೦-೩೨.

2. ಹೈಮವತಿ ಎಂಬ ಶಬ್ದಕ್ಕೆ ಚಿನ್ನದಿಂದ ಮಾಡಿದ ಆಭರಣವುಳ್ಳವಳು ಎಂದು ಒಂದು ಅರ್ಥ; ಹಿಮವಂತನ ಮಗಳಾದ ಎಂದು ಒಂದು ಅರ್ಥ. ಉಮಾ, ಹೈಮವತೀ-ಎಂಬಿವೆರಡೂ ಪಾರ್ವತಿಯ ಹೆಸರೆಂದು ಪುರಾಣಪ್ರಸಿದ್ಧಿಯಿರುತ್ತದೆ. ಪರಮಾತ್ಮನನ್ನು ಶಿವನೆಂಬ ಹೆಸರಿನಿಂದ ಭಾಷ್ಯದಲ್ಲಿ ಕರೆದಿರುವದು ದಶೋಪನಿಷತ್ತುಗಳಲ್ಲಿ ಮತ್ತೆಲ್ಲಿಯೂ ಕಾಣಬರುವದಿಲ್ಲ.

3. ಈಶ್ವರಶಬ್ದವನ್ನು ಶಿವನು ಎಂಬರ್ಥದಲ್ಲಿ ಪ್ರಯೋಗಮಾಡಿರುವದು ದಶೋಪನಿಷದ್ಭಾಷ್ಯಗಳಲ್ಲೆಲ್ಲ ಈ ಉಪನಿಷತ್ತು ಒಂದರಲ್ಲಿಯೇ.

4. ತನ್ನ ಬುದ್ಧಿಯಿಂದ ಊಹಿಸಿ ತಿಳಿಯುವದಕ್ಕಿಂತಲೂ ಬಲ್ಲವರನ್ನು ಕೇಳಿ ತಿಳಿದುಕೊಳ್ಳುವದೇ ಆತ್ಮಜ್ಞಾನಕ್ಕೆ ಸರಿಯಾದ ದಾರಿಯೆಂಬುದನ್ನು ಇದು ಸೂಚಿಸುವದು.

## ನಾಲ್ಕನೆಯ ಖಂಡ

**ಸಾ ಬ್ರಹ್ಮೇತಿ ಹೋವಾಚ ಬ್ರಹ್ಮಣೋ ವಾ ಏತದ್ವಿಜಯೇ ಮಹೀಯಧ್ವಮಿತಿ ತತೋ ಹೈವ ವಿದಾಂಚಕಾರ ಬ್ರಹ್ಮೇತಿ ॥ ೧ ॥**

೧. ಆಕೆಯು "(ಅದು) ಬ್ರಹ್ಮವು" ಎಂದು ಹೇಳಿದಳಂತೆ ಬ್ರಹ್ಮದ ವಿಜಯದಲ್ಲಿಯೇ ಹೀಗ ಮಹಿಮಾವಂತರಾದಿರಿ'' ಎಂದು (ನುಡಿದಳಂತೆ). ಅದರಿಂದಲೇ (ಅವನು ಅದು) ಬ್ರಹ್ಮವೆಂದು ತಿಳಿದುಕೊಂಡನಂತೆ.

(ಭಾಷ್ಯ)

೭೪. ಸಾ ಬ್ರಹ್ಮೇತಿ ಹೋವಾಚ । ಹ ಕಿಲ ಬ್ರಹ್ಮಣಃ ವೈ * ಈಶ್ವರಸ್ಯೈವ ವಿಜಯೇ, ಈಶ್ವರೇಣೈವ ಜಿತಾ ಅಸುರಾಃ, ಯೂಯಂ ತತ್ರ ನಿಮಿತ್ತಮಾತ್ರಮ್ । ತಸ್ಯೈವ ವಿಜಯೇ ಯೂಯಂ ಮಹೀಯಧ್ವಂ ಮಹಿಮಾನಂ ಪ್ರಾಪ್ನುಥ । ಏತದಿತಿ ಕ್ರಿಯಾವಿಶೇಷಣಾರ್ಥಮ್ । ಮಿಥ್ಯಾಭಿಮಾನಸ್ತು ಯುಷ್ಮಾಕಮ್ "ಅಸ್ಮಾಕಮೇವಾಯಂ ವಿಜಯೋಽಸ್ಮಾಕಮೇವಾಯಂ ಮಹಿಮಾ'' ಇತಿ । ತತಃ ತಸ್ಮಾದುಮಾವಾಕ್ಯಾತ್ ಹ ಏವ ವಿದಾಂಚಕಾರ ಬ್ರಹ್ಮೇತಿ ಇನ್ದ್ರಃ । ಅವಧಾರಣಾತ್ 'ತತೋ ಹೈವ' ಇತಿ ನ ಸ್ವಾತನ್ತ್ರ್ಯೇಣ ॥

(ಭಾಷ್ಯಾರ್ಥ)

ಆಕೆಯು "(ಅದು) ಬ್ರಹ್ಮವೇ'' ಎಂದಳಂತೆ. ಹ ಎಂದರೆ ಅಂತೆ (ಎಂದರ್ಥ).[1] ಬ್ರಹ್ಮದ ವಿಜಯದಲ್ಲಿಯೇ, ಈಶ್ವರನ ಗೆಲವಿನಿಂದಲೇ–ಈಶ್ವರನಿಂದಲೇ ಅಸುರರು ಜಿತರಾಗಿರುತ್ತಾರೆ, ನೀವು ಇದರಲ್ಲಿ ನಿಮಿತ್ತಮಾತ್ರರಾಗಿರುತ್ತೀರಿ.[2] ಆತನ ವಿಜಯದಲ್ಲಿಯೇ–ನೀವು ಮಹಿಮಾವಂತರಾದಿರಿ, ಮಹಿಮೆಯನ್ನು ಪಡೆದಿರುತ್ತೀರಿ. ಏತತ್ ಎಂಬುದು (ಹೀಗೆ ಮಹಿಮೆಯನ್ನು ಪಡೆದಿರುತ್ತೀರಿ) ಎಂದು (ಮಹೀಯಧ್ವಮ್ ಎಂಬ) ಕ್ರಿಯೆಗೆ ವಿಶೇಷಣವನ್ನು ಹೇಳುವದಕ್ಕೆ[3] (ಬಂದಿದೆ). ಆದರೂ ನಿಮಗೆ "ಈ ವಿಜಯವು ನಮ್ಮದೇ, ಈ ಮಹಿಮೆಯು ನಮ್ಮದೇ'' ಎಂದು ತಪ್ಪಾದ ಅಭಿಮಾನವುಂಟಾಗಿರುತ್ತದೆ–ಎಂದು (ನುಡಿದಳಂತೆ).

---

* ಈ ಮಾತು (ಆ॥) ಪಾಠದಲ್ಲಿ ಬಿಟ್ಟುಹೋಗಿದೆ.

1. ಹ ಎಂಬದನ್ನು ಹಿಂದೆ ನಡೆದದ್ದರ ನೆನಪುಕೊಡುವದಕ್ಕಾಗಿ ಉಪಯೋಗಿಸಿದೆ. ತೈ. ಭಾ. ೧-೫ ನೋಡಿ.

2. ನಿಮ್ಮನ್ನು ನೆಪವಾಗಿ ಉಪಯೋಗಿಸಿಕೊಂಡು ಪರಮೇಶ್ವರನೇ ಅಸುರರನ್ನು ಸೋಲಿಸಿರುತ್ತಾನೆ.

3. 'ಈ ವಿಜಯದಲ್ಲಿ' ಎಂದು ವಿಜಯಕ್ಕೆ ವಿಶೇಷಣವಲ್ಲ.

ಅದರಿಂದಲೇ ಎಂದರೆ ಆ ಉಮೆಯ ವಾಕ್ಯದಿಂದಲೇ ಇಂದ್ರನು (ಅದು) ಬ್ರಹ್ಮವೆಂದು ತಿಳಿದುಕೊಂಡನಂತೆ. "ಅದರಿಂದಲೇ" ಎಂದು ಒತ್ತಿ ಹೇಳಿರುವದರಿಂದ (ತಾನೇ) ಸ್ವತಂತ್ರವಾಗಿ[1] (ತಿಳಿದು)ಕೊಳ್ಳಲಿಲ್ಲ (ಎಂದು ಅಭಿಪ್ರಾಯ).

## ಇಂದ್ರ, ವಾಯು, ಅಗ್ನಿ—ಇವರುಗಳ ಹೆಚ್ಚುಗಾರಿಕೆ

**ತಸ್ಮಾದ್ವಾ ಏತೇ ದೇವಾ ಅತಿತರಾಮಿವಾನ್ಯಾನ್ ದೇವಾನ್**
**ಯದಗ್ನಿರ್ವಾಯುರಿನ್ದ್ರಸ್ತೇಹ್ಯೇನನ್ನೇದಿಷ್ಠಂ ಪಸ್ಪೃಶು**
**ಸ್ತೇ ಹ್ಯೇನತ್ ಪ್ರಥಮೋ ವಿದಾಂಚಕಾರ ಬ್ರಹ್ಮೇತಿ ॥ ೨ ॥**

೨. ಆದ್ದರಿಂದಲೇ ಅಗ್ನಿ, ವಾಯು, ಇಂದ್ರ-ಎಂಬ ಈ ದೇವತೆಗಳು ಮಿಕ್ಕ ದೇವತೆಗಳನ್ನು ಮೀರಿರುವರು. ಏಕೆಂದರೆ ಅವರೇ ಅತ್ಯಂತ ಸಮೀಪವಾದ ಇದನ್ನು ಮುಟ್ಟಿದರು; ಏಕೆಂದರೆ ಅವರೇ ಇದನ್ನು ಬ್ರಹ್ಮವೆಂದು ಮೊದಲು ತಿಳಿದುಕೊಂಡರು.

(ಭಾಷ್ಯ)

೭೫. ಯಸ್ಮಾತ್ ಅಗ್ನಿವಾಯ್ವಿನ್ದ್ರಾ ಏತೇ ದೇವಾ ಬ್ರಹ್ಮಣಃ ಸಂವಾದದರ್ಶನಾದಿನಾ ಸಾಮೀಪ್ಯಮುಪಗತಾಃ ತಸ್ಮಾತ್ ಸ್ವೈರ್ಗುಣೈಃ ಅತಿತರಾಮಿವ ಶಕ್ತಿಗುಣಾದಿಮಹಾಭಾಗ್ಯೈಃ ಅನ್ಯಾನ್ ದೇವಾನ್ ಅತಿತರಾಮ್ ಅತಿಶೇರತ ಇವ[2] ಏತೇ ದೇವಾಃ । ಇವಶಬ್ದೋಽನರ್ಥಕಃ, ಅವಧಾರಣಾರ್ಥೋ ವಾ । ಯತ್ ಅಗ್ನಿಃ ವಾಯುಃ ಇನ್ದ್ರಃ । ತೇ ಹಿ ದೇವಾ ಯಸ್ಮಾತ್ ಏನತ್ ಬ್ರಹ್ಮ ನೇದಿಷ್ಠಮ್ ಅನ್ತಿಕತಮಮ್ ಪ್ರಿಯತಮಂ ಪಸ್ಪೃಶುಃ ಸ್ಪೃಷ್ಟವನ್ತಃ, ಯಥೋಕ್ತೈರ್ಬ್ರಹ್ಮಣಃ ಸಂವಾದಾದಿಪ್ರಕಾರೈಃ । ತೇ ಹಿ ಯಸ್ಮಾಚ್ಚ ಹೇತೋಃ ಏನತ್ ಬ್ರಹ್ಮ ಪ್ರಥಮಃ ಪ್ರಥಮಾಃ ಪ್ರಧಾನಾಃ ಸನ್ತ ಇತ್ಯೇತತ್ । ವಿದಾಂಚಕಾರ[3] ವಿದಾಂಚಕ್ರುರಿತ್ಯೇತತ್ । ಬ್ರಹ್ಮೇತಿ ॥

(ಭಾಷ್ಯಾರ್ಥ)

ಅಗ್ನಿ, ವಾಯು, ಇಂದ್ರ-ಎಂಬ ಈ ದೇವತೆಗಳು ಬ್ರಹ್ಮದೊಡನೆ ಸಂಭಾಷಣೆ ಮಾಡುವದು, ಅದನ್ನು ಕಾಣುವದು-ಮುಂತಾದ ರೂಪದಿಂದ ಅದರ ಸಾಮೀಪ್ಯ

---

1. ಗುರೂಪದೇಶವಿಲ್ಲದೆ ತಾನೇ ಬ್ರಹ್ಮಸ್ವರೂಪವನ್ನು ತಿಳಿಯುವದು ಕಷ್ಟ. ಮು. ಭಾ. ೧-೨-೧೨ ನೋಡಿ.

2. "ಅತಿತರಾಮ್ ಅತಿಶಯೇನ ಶೇರತೇ ಇವ" ಎಂಬ (ಅ॥) ಪಾಠಕ್ಕಿಂತ ಈ (ವಾ॥) ಪಾಠವು ಮೇಲು.

3. (ಅ॥) ಪಾಠದಲ್ಲಿ ಈ ಮಾತು ಬಿಟ್ಟುಹೋಗಿದೆ.

ವನ್ನು ಹೊಂದಿದರಷ್ಟೆ; ಈ ಕಾರಣದಿಂದ ತಮ್ಮ[1] ಗುಣಗಳಿಂದ ಮೀರಿರುತ್ತಾರೆ; ಶಕ್ತಿ ಗುಣ ಮುಂತಾದ ಮಹಾಭಾಗ್ಯಗಳಿಂದ ಮಿಕ್ಕ ದೇವತೆಗಳನ್ನು ಬಹಳವಾಗಿ ಈ ದೇವತೆಗಳು ಮೀರಿರುತ್ತಾರೆ ಇಲ್ಲಿ ಇವ ಎಂಬ ಶಬ್ದಕ್ಕೆ ಅರ್ಥವಿಲ್ಲ; ಅಥವಾ (ಅತಿತರಾಮೇವ ಮೀರಿಯೇ ಇರುತ್ತಾರೆ ಎಂದು) ಅವಧಾರಣೆಗೋಸ್ಕರ ಪ್ರಯೋಗವಾಗಿದೆ ಎಂದಾದರೂ (ಇಟ್ಟುಕೊಳ್ಳಬಹುದು). ಅಗ್ನಿ, ವಾಯು, ಇಂದ್ರ–ಎಂಬವರಿದಾರಲ್ಲ, (ಇವರು ಇತರರನ್ನು ಮೀರಿರುತ್ತಾರೆ). ಏಕೆಂದರೆ ಆ ದೇವತೆಗಳು ಅತ್ಯಂತ ಸಮೀಪವಾಗಿರುವ ತೀರ ಹತ್ತಿರವಾಗಿರುವ ಪ್ರಿಯತಮವಾಗಿರುವ[3] ಈ ಬ್ರಹ್ಮವನ್ನು ಹಿಂದೆ ಹೇಳಿದ ಬ್ರಹ್ಮದೊಡನೆ ಸಂಭಾಷಣೆಮಾಡುವದೇ ಮುಂತಾದ ಪ್ರಕಾರಗಳಿಂದ ಮುಟ್ಟಿದರು, ಸೋಕುವರಾದರು. ಮತ್ತು ಏಕೆಂದರೆ ಅವರೇ ಈ ಬ್ರಹ್ಮವನ್ನು 'ಪ್ರಥಮಃ' ಎಂದರೆ ಮೊದಲನೆಯವರಾಗಿ, ಮುಖ್ಯರಾಗಿ ಎಂದರ್ಥ, 'ವಿದಾಂಚಕಾರ' ಎಂದರೆ ಬ್ರಹ್ಮವೆಂದು ಅರಿತುಕೊಂಡರು ಎಂದರ್ಥ.

**ತಸ್ಮಾದ್ವಾ ಇನ್ದ್ರೋಽತಿತರಾಮಿವಾನ್ಯಾನ್ ದೇವಾನ್**
**ಸ ಹ್ಯೇನನ್ನೇದಿಷ್ಠಂ ಪಸ್ಪರ್ಶ ಸ ಹ್ಯೇನತ್ ಪ್ರಥಮೋ**
**ವಿದಾಂಚಕಾರ ಬ್ರಹ್ಮೇತಿ ॥ ೩ ॥**

೩. ಆದ್ದರಿಂದಲೇ ಇಂದ್ರನು ಮಿಕ್ಕ ದೇವತೆಗಳನ್ನು ಮೀರಿರುವನು. ಏಕೆಂದರೆ ಅವನೇ ಅತ್ಯಂತ ಸಮೀಪವಾದ ಇದನ್ನು ಮುಟ್ಟಿದನು, ಏಕೆಂದರೆ ಅವನೇ ಮೊದಲು ಇದನ್ನು ಬ್ರಹ್ಮವೆಂದು ತಿಳಿದುಕೊಂಡನು.

(ಭಾಷ್ಯ)

೭೬. ಯಸ್ಮಾತ್ ಅಗ್ನಿವಾಯೂ ಅಪೀನ್ದ್ರವಾಕ್ಯಾದೇವ ವಿದಾಂಚಕ್ರತುಃ। ಇನ್ದ್ರೇಣ ಹಿ ಉಮಾವಾಕ್ಯಾತ್ ಪ್ರಥಮಂ ಶ್ರುತಂ ಬ್ರಹ್ಮೇತಿ ।[4] ತಸ್ಮಾದ್ವೈ ಇನ್ದ್ರಃ ಅತಿತರಾಮಿವ ಅತಿಶೇತೇ ಇವ[5] ಅನ್ಯಾನ್ ದೇವಾನ್ । 'ಸ ಹ್ಯೇನತ್‌ನೇ

---

1. ಐಶ್ವರ್ಯಗುಣೈಃ (ಅ||) ಎಂಬ ಪಾಠದಲ್ಲಿ ಈಶ್ವರನ ಗುಣಗಳಿಂದ ಎಂದು ಅರ್ಥ ಮಾಡಬೇಕಾಗುವದು. ಈಶ್ವರತ್ವವು ಬ್ರಹ್ಮಜ್ಞಾನವನ್ನು ನೇರಾಗಿ ಅಥವಾ ಪರಂಪರೆಯಿಂದ ಕಂಡುಕೊಂಡದ್ದಕ್ಕೆ ಅನುಗುಣವಾಗಿ ತೋರಿಕೊಂಡಿದೆ ಎಂಬರ್ಥವನ್ನು ಆಗ ತೆಗೆಯಬಹುದು.

3. ವಸ್ತು ಹತ್ತಿರವಾದಷ್ಟೂ ಪ್ರಿಯವಾಗಿರುತ್ತದೆ.

4. 'ಅತಃ' (ಅ||) ಎಂಬ ಮಾತು ಹೆಚ್ಚು.

5. (ಮ||) "ಅತಿತರಾಮ್ ಅತಿಶಯೇನ ಶೇತೇ" ಎಂಬ (ಅ||) ಪಾಠಕ್ಕಿಂತ ಇದೇ ಮೇಲು.

ನೇದಿಷ್ಠಂ ಪಸ್ಪರ್ಶ ಯಸ್ಮಾತ್। ಸ ಹ್ಯೇನತ್ ಪ್ರಥಮೋ ವಿದಾಂಚಕಾರ ಬ್ರಹ್ಮೇತಿ। ' ಉಕ್ತಾರ್ಥಂ ವಾಕ್ಯಮ್ ॥

(ಭಾಷ್ಯಾರ್ಥ)

ಅಗ್ನಿ, ವಾಯು-ಇವರಿಬ್ಬರುಕೂಡ ಇಂದ್ರನ ವಾಕ್ಯದಿಂದಲೇ ತಿಳಿದುಕೊಂಡರು ; ಇಂದ್ರನೇ ಉಮೆಯು ಹೇಳಿದ್ದನ್ನು ಕೇಳಿ ಮೊದಲು ಇದು ಬ್ರಹ್ಮವೆಂದು ತಿಳಿದುಕೊಂಡನು. ಆದ್ದರಿಂದಲೇ ಇಂದ್ರನು ಮಿಕ್ಕ ದೇವತೆಗಳನ್ನು ಮೀರಿರುತ್ತಾನೆ. " ಸ ಹ್ಯೇನತ್ " (ಏಕೆಂದರೆ ಅವನೇ ಅತ್ಯಂತ ಸಮೀಪವಾದ ಇದನ್ನು ಮುಟ್ಟಿದನು, ಏಕೆಂದರೆ ಅವನೇ ಮೊದಲು ಇದನ್ನು ಬ್ರಹ್ಮವೆಂದು ತಿಳಿದುಕೊಂಡನು)-ಈ ವಾಕ್ಯಕ್ಕೆ (ಹಿಂದಿನ ಮಂತ್ರದಲ್ಲಿಯೇ) ಅರ್ಥವನ್ನು ಹೇಳಿದ್ದಾಗಿದೆ.

## ಬ್ರಹ್ಮದ ಸೋಪಾಧಿಕ ಉಪದೇಶ

**ತಸ್ಯೈಷ ಆದೇಶೋ ಯದೇತದ್ವಿದ್ಯುತೋ ವ್ಯದ್ಯುತದಾ೩**
**ಇತೀನ್ನ್ಯಮೀಮಿಷದಾ೩ ಇತ್ಯಧಿದೈವತಮ್ ॥ ೪ ॥**

೪. ಅದಕ್ಕೆ ಇದು ಆದೇಶವು " ಮಿಂಚಿನ ಹೊಳಪಿನಂತೆ " ಎಂದು ' ಕಣ್ಣು ಮಿಟುಕಿಸಿದಂತೆ '' ಎಂದೂ ಇದೇ ಆದೇಶವು. ಇದು ಅಧಿದೈವತವು.

(ಭಾಷ್ಯ)

೭೭. ತಸ್ಯ ಪ್ರಕೃತಸ್ಯ ಬ್ರಹ್ಮಣಃ ಏಷ ಆದೇಶಃ ಉಪಮೋಪದೇಶಃ । ನಿರುಪಮಸ್ಯ ಬ್ರಹ್ಮಣೋ ಯೇನೋಪಮಾನೇನೋಪದೇಶಃ ಸೋಽಯಮಾದೇಶ ಇತ್ಯುಚ್ಯತೇ । ಕಿಂ ತತ್ । ಯದೇತತ್ ಪ್ರಸಿದ್ಧಂ ಲೋಕೇ ವಿದ್ಯುತಃ ವ್ಯದ್ಯುತತ್ ವಿದ್ಯೋತನಂ ಕೃತವದಿತ್ಯೇತದನುಪಪನ್ನಮ್ ಇತಿ ವಿದ್ಯುತೋ ವಿದ್ಯೋತನಮ್ ಇತಿ ಕಲ್ಪ್ಯತೇ । ಆ ಇತ್ಯುಪಮಾರ್ಥೇ । ವಿದ್ಯುತೋ ವಿದ್ಯೋತನಮಿವ ಇತ್ಯರ್ಥಃ । " ಯಥಾ ಸಕೃದ್ವಿದ್ಯುತ್ತಮ್ '' (ಬೃ. ೨-೩-೬) ಇತಿ ಶ್ರುತ್ಯನ್ತರೇ ಚ ದರ್ಶನಾತ್ । ವಿದ್ಯುದಿವ ಹಿ ಸಕೃದಾತ್ಮಾನಂ ದರ್ಶಯಿತ್ವಾ ತಿರೋಭೂತಂ ಬ್ರಹ್ಮ ದೇವೇಭ್ಯಃ । ಅಥವಾ ವಿದ್ಯುತಃ । ತೇಜಃ ಇತ್ಯಧ್ಯಾಹಾರ್ಯಮ್ । ವ್ಯದ್ಯುತತ್ ವಿದ್ಯೋತಿತವತ್ ಆ೩ ಇವ । ವಿದ್ಯುತಸ್ತೇಜಃ ಸಕೃದ್ವಿದ್ಯೋತಿತವದಿವ ಇತ್ಯಭಿಪ್ರಾಯಃ । ಇತಿ ಶಬ್ದಃ ಆದೇಶಪ್ರತಿನಿರ್ದೇಶಾರ್ಥಃ ' ಇತ್ಯಯಮಾದೇಶಃ ' ಇತಿ । ' ಇಚ್ಛಬ್ದಃ ' ಸಮುಚ್ಚಯಾರ್ಥಃ । ಅಯಂ ಚಾಪರಸ್ತಸ್ಯಾದೇಶಃ । ಕೋಽಸೌ । ನ್ಯಮೀಮಿಷತ್ ಯಥಾ ಚಕ್ಷುಃ । ನ್ಯಮೀಮಿಷತ್ ನಿಮೇಷಂ ಕೃತವತ್ । ಸ್ವಾರ್ಥೇ ಣಿಚ್ । ಉಪಮಾರ್ಥ ಏವಾಕಾರಃ । ಚಕ್ಷುಷೋ ವಿಷಯಂ ಪ್ರತಿ ಪ್ರಕಾಶತಿರೋಭಾವ ಇವ ಚೇತ್ಯರ್ಥಃ । ಇತ್ಯಧಿದೈವತಂ ದೇವತಾವಿಷಯಂ ಬ್ರಹ್ಮಣ ಉಪಮಾನದರ್ಶನಮ್ ॥

(ಭಾಷ್ಯಾರ್ಥ)

ಆ ಪ್ರಕೃತವಾದ ಬ್ರಹ್ಮಕ್ಕೆ ಇದು ಆದೇಶವು, ಎಂದರೆ ಉಪಮೆಯ ಉಪದೇಶವು. ಯಾವ ಹೋಲಿಕೆಯೂ ಇಲ್ಲದ[1] ಬ್ರಹ್ಮಕ್ಕೆ ಯಾವ ಹೋಲಿಕೆಯನ್ನು ಕೊಟ್ಟು (ಅದನ್ನು) ಉಪದೇಶಿಸಿರುವದೋ ಅದನ್ನು ಇದು ಆದೇಶವು ಎಂದಿರುತ್ತದೆ. ಆ (ಉಪಮಾನವು) ಯಾವದು ?–ಎಂದರೆ ಹೇಳಲಾಗುತ್ತದೆ: ಲೋಕದಲ್ಲಿ ಹೀಗೆಂದು ಪ್ರಸಿದ್ಧವಾಗಿರುತ್ತದೆಯಲ್ಲವೆ ? (ಯಾವದೆಂದರೆ) 'ಮಿಂಚಿನ ಹೊಳಪಿನಂತೆ' ಮೂಲದಲ್ಲಿ ವ್ಯದ್ಯುತತ್ ಎಂಬ ಮಾತಿಗೆ ಹೊಳೆಯಿತು (ಎಂದೇ ಅರ್ಥವಾದರೂ) ಅದು ಹೊಂದುವದಿಲ್ಲವಾದ್ದರಿಂದ[2] "(ವಿದ್ಯುತೋ) ವಿದ್ಯೋತನಮ್" (ಮಿಂಚಿನ ಹೊಳಪು) ಎಂದೇ (ಅರ್ಥವನ್ನು) ಕಲ್ಪಿಸಿರುತ್ತೇವೆ. ಆ ('ಅಂತೆ') ಎಂಬ ಮಾತು ಹೋಲಿಕೆಯನ್ನು ತಿಳಿಸುವದಕ್ಕೆ (ಬಂದಿರುತ್ತದೆ). ಮಿಂಚಿನ ಹೊಳಪಿನಂತೆ ಎಂದು (ಒಟ್ಟು) ಅರ್ಥವಾಯಿತು. "ತಟ್ಟನೆ ಹೊಳೆದ ಮಿಂಚಿನಂತೆ" (ಬೃ. ೨-೩-೭) ಎಂದು ಬೇರೊಂದು ಶ್ರುತಿಯಲ್ಲಿ (ಹೇಳಿರುವದು) ಕಂಡುಬರುತ್ತದೆಯಾದ್ದರಿಂದ (ಇದೇ ಅರ್ಥವು ಸರಿಯಾದದ್ದು). ಬ್ರಹ್ಮವು ದೇವತೆಗಳಿಗೆ ಮಿಂಚಿನಂತೆ ಥಳಾರನೆ ಕಾಣಿಸಿಕೊಂಡು ಕಾಣದಂತಾಯಿತಲ್ಲವೆ ? (ಈ ಉಪಮಾನವು ಅದನ್ನು ತಿಳಿಸುವದು). ಅಥವಾ ವಿದ್ಯುತಃ (ಮಿಂಚಿನ) ಎಂಬ (ಮಾತಿನಮುಂದೆ) 'ತೇಜಃ' (ಹೊಳಪು) ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ವ್ಯದ್ಯುತತ್ ಎಂದರೆ ಮಿಂಚಿತು, ಆ ಎಂದರೆ ಅಂತೆ; ಮಿಂಚಿನ ಹೊಳಪು ತಟ್ಟನೆ ಹೊಳೆದಂತೆ ಎಂದಭಿಪ್ರಾಯ. ಇತಿ ಎಂಬ ಶಬ್ದವು "ಹೀಗೆಂಬ ಇದೇ ಆದೇಶವು" ಎಂದು ಉಪಮಾನವನ್ನು ತೋರಿಸುವದಕ್ಕೆ ಬಂದಿರುತ್ತದೆ.

ಇತ್ (ಮತ್ತು) ಎಂಬ ಶಬ್ದವು ಸಮುಚ್ಚಯವೆಂಬ ಅರ್ಥದಲ್ಲಿ ಬಂದಿರುತ್ತದೆ. ಇದು ಅದಕ್ಕೆ ಮತ್ತೂ ಒಂದು ಆದೇಶವು. ಅದು ಯಾವದು ?–ಎಂದರೆ 'ಕಣ್ಣಿ

1. ಬ್ರಹ್ಮವು ನಿರ್ಧರ್ಮಕವಾದ್ದರಿಂದ ಅದಕ್ಕೆ ಯಾವ ಉಪಮಾನವೂ ಇಲ್ಲವಾದರೂ ಅದರ ಸೋಪಾಧಿಕರೂಪವನ್ನು ತಿಳಿಸುವದಕ್ಕೆ ಮಿಂಚು, ಕಣ್ಣುಮಿಟುಕಿಸುವಿಕೆ–ಮುಂತಾದ ಉಪಮಾನಗಳನ್ನು ಕೊಟ್ಟಿರುತ್ತದೆ ಎಂದು ಭಾವ.

2. ವಿದ್ಯುತಃ ಎಂಬುದನ್ನು ಪಂಚಮೀವಿಭಕ್ತಿಯೆಂದು ಇಟ್ಟುಕೊಂಡರೆ ಮಿಂಚಿನ ದೆಸೆಯಿಂದ ಹೊಳೆಯಿತು ಎಂದರ್ಥವಾಗುತ್ತದೆ; ಸ್ವಯಂಪ್ರಕಾಶವಾದ ಬ್ರಹ್ಮಕ್ಕೆ ಇದು ಹೊಂದುವದಿಲ್ಲ. ವಿದ್ಯುತಃ ಎಂಬುದನ್ನು ಷಷ್ಠಿಯೆಂದಿಟ್ಟುಕೊಂಡರೆ ಮಿಂಚಿನ ಸಂಬಂಧವಾದ ಬೆಳಕನ್ನು ಕೊಟ್ಟಿತು ಎಂದರ್ಥವಾಗುತ್ತದೆ. ಅದೂ ಪ್ರಕೃತಕ್ಕೆ ಬೇಕಾದ ಉಪಮಾನವಾಗುವದಿಲ್ಲ. ಆದ್ದರಿಂದ ವ್ಯದ್ಯುತತ್ ಎಂಬ ಕ್ರಿಯಾಪದಕ್ಕೆ ವಿದ್ಯೋತನಮ್ (ಹೊಳಪು) ಎಂಬರ್ಥವನ್ನು ಕಲ್ಪಿಸಿರುತ್ತದೆ ಎಂದರ್ಥ.

ನಂತೆ ಮಿಟುಕಿಸಿತು'. (ಇಲ್ಲಿ) ನ್ಯಮೀಮಿಷತ್ ಎಂಬಲ್ಲಿ ಕಾಣುವ ಣಿಚ್ ಪ್ರತ್ಯಯವು ಮೂಲಕ್ರಿಯಾಪದದ ಅರ್ಥವನ್ನೇ ತೋರಿಸುತ್ತದೆ (ಪ್ರೇರಣಾರ್ಥದಲ್ಲಿ ಬಂದಿರುವದಿಲ್ಲ). ಆಕಾರವು (ಇಲ್ಲಿಯೂ) ಹೋಲಿಕೆಯನ್ನೇ ತಿಳಿಸುತ್ತದೆ. ಕಣ್ಣು ವಿಷಯವನ್ನು ಬೆಳಗಿ ಮುಚ್ಚಿಕೊಂಡಂತೆಯೂ (ಬ್ರಹ್ಮವು ಥಟ್ಟನೆ ತೋರಿ ಮರೆಯಾಯಿತು) ಎಂದರ್ಥ.

ಇದು ಅಧಿದೈವತವು,[1] ಎಂದರೆ ದೇವತಾವಿಷಯವಾಗಿ ಬ್ರಹ್ಮಕ್ಕೆ ಕೊಟ್ಟ ಉಪಮಾನವು.

**ಅಥಾಧ್ಯಾತ್ಮಂ ಯದೇತದ್ಗಚ್ಛತೀವ ಚ ಮನೋಽನೇನ**
**ಚೈತದುಪಸ್ಮರತ್ಯಭೀಕ್ಷ್ಣಂ ಸಙ್ಕಲ್ಪಃ ॥ ೫ ॥**

೫. ಇನ್ನು ಅಧ್ಯಾತ್ಮವು: ಮನಸ್ಸು ಇದರ ಬಳಿಗೆ ಹೋಗುವಂತಿರುವದಲ್ಲವೆ, ಇದರಿಂದ ಇದನ್ನು ಚೆನ್ನಾಗಿ ಉಪಸ್ಮರಣೆಮಾಡುತ್ತಾನಲ್ಲವೆ, ಸಂಕಲ್ಪವೂ (ಅದರ ವಿಷಯದಲ್ಲಿ ಉಂಟಾಗುತ್ತದೆಯಲ್ಲವೆ? ಇದೇ ಅಧ್ಯಾತ್ಮವು).

(ಭಾಷ್ಯ)

೭೮. ಅಥ ಅನನ್ತರಮ್ ಅಧ್ಯಾತ್ಮಂ ಪ್ರತ್ಯಗಾತ್ಮವಿಷಯ ಆದೇಶ ಉಚ್ಯತೇ। ಯದೇತದ್ ಗಚ್ಛತೀವ ಚ ಮನಃ। ಏತದ್ ಬ್ರಹ್ಮ ಢೌಕತ ಇವ ವಿಷಯೀಕರೋತೀವ। ಯಚ್ಚ ಅನೇನ ಮನಸಾ ಏತದ್ ಬ್ರಹ್ಮ ಉಪಸ್ಮರತಿ ಸಮೀಪತಃ ಸ್ಮರತಿ ಸಾಧಕಃ ಅಭೀಕ್ಷ್ಣಂ ಭೃಶಮ್। ಸಙ್ಕಲ್ಪಶ್ಚ ಮನಸೋ ಬ್ರಹ್ಮವಿಷಯಃ। ಮನ ಉಪಾಧಿಕತ್ವಾದ್ಧಿ ಮನಸಃ ಸಙ್ಕಲ್ಪಸ್ಮೃತ್ಯಾದಿ ಪ್ರತ್ಯಯೈರಭಿವ್ಯಜ್ಯತೇ ಬ್ರಹ್ಮ ವಿಷಯೀಕ್ರಿಯಮಾಣಮಿವ। ಅತಃ ಸ ಏಷ ಬ್ರಹ್ಮಣೋಽಧ್ಯಾತ್ಮಮಾದೇಶಃ। ವಿದ್ಯುನ್ನಿಮೇಷಣವದಧಿದೈವತಂ ದ್ರುತಪ್ರಕಾಶನಧರ್ಮಿ ಅಧ್ಯಾತ್ಮಂ ಚ ಮನಃ ಪ್ರತ್ಯಯ ಸಮಕಾಲಾಭಿವ್ಯಕ್ತಿಧರ್ಮಿ ಇತ್ಯೇಷ ಆದೇಶಃ। ಏವಮ್ ಆದಿಶ್ಯಮಾನಂ ಹಿ ಬ್ರಹ್ಮ ಮನ್ದಬುದ್ಧಿಗಮ್ಯಂ ಭವತಿ ಇತಿ ಬ್ರಹ್ಮಣ ಆದೇಶೋಪದೇಶಃ। ನ ಹಿ ನಿರುಪಾಧಿಕಮೇವ ಮನ್ದಬುದ್ಧಿಭಿರಾಕಲಯಿತುಂ ಶಕ್ಯಮ್ ॥

---

1. ಕಣ್ಣು ಬಿಟ್ಟು ಮುಚ್ಚಿಕೊಳ್ಳುವದೆಂಬುದು ಅಧ್ಯಾತ್ಮವೇ ಆದರೂ ವಿಷಯವು ಕಣ್ಣಿಗೆ ಹೊಳೆಯುವದಕ್ಕೆ ಅಧಿದೈವಿಕವಾದ ಬೆಳಕು ಬೇಕು. ಆದ್ದರಿಂದ ಈ ಉಪಮಾನವನ್ನು ಆಧಿದೈವಿಕವೆಂದಿದೆ ಎಂದು ತೋರುತ್ತದೆ.

(ಭಾಷ್ಯಾರ್ಥ)

ಇನ್ನು (ಅಧಿದೈವತವನ್ನು ಹೇಳಿದ) ಬಳಿಕ ಅಧ್ಯಾತ್ಮವು, ಎಂದರೆ ಒಳಗಿನ ಆತ್ಮನ ವಿಷಯವಾದ ಆದೇಶವನ್ನು ಹೇಳಲಾಗುತ್ತದೆ. ಮನಸ್ಸು ಇದರ ಬಳಿಗೆ ಹೋಗುವಂತಿರುವದಲ್ಲವೆ, ಎಂದರೆ ಈ ಬ್ರಹ್ಮವನ್ನು ಮುಟ್ಟುವಂತೆ, ಅದನ್ನು ವಿಷಯೀಕರಿಸುವಂತೆ, ಇರುವದಲ್ಲವೆ? ಮತ್ತು ಈ ಮನಸ್ಸಿನಿಂದ ಈ ಬ್ರಹ್ಮವನ್ನು ಸಾಧಕನಾದವನು ಚೆನ್ನಾಗಿ ಬಲವಾಗಿ ಉಪಸ್ಮರಣೆ ಮಾಡುವನಲ್ಲವೆ, ಹತ್ತಿರವೇ ಇರುವಂತೆ ನೆನಸಿಕೊಳ್ಳುವನಲ್ಲವೆ? ಮತ್ತು ಬ್ರಹ್ಮವಿಷಯವಾಗಿ ಮನಸ್ಸಿನ ಸಂಕಲ್ಪವೂ ಆಗುವದಲ್ಲವೆ?–ಮನಸ್ಸು ಆತ್ಮನಿಗೆ ಉಪಾಧಿಯಾಗಿರುವದರಿಂದ ಮನಸ್ಸಿನ ಸಂಕಲ್ಪ, ಸ್ಮೃತಿ—ಮುಂತಾದ ಪ್ರತ್ಯಯಗಳಿಂದ ವಿಷಯೀಕರಿಸಲ್ಪಟ್ಟಂತೆ[1] ಅಭಿವ್ಯಕ್ತವಾಗಿ ತೋರುವದಲ್ಲವೆ? ಆದ್ದರಿಂದ—ಆ ಇದೇ ಬ್ರಹ್ಮಕ್ಕೆ ಅಧ್ಯಾತ್ಮವಾದ ಆದೇಶವು.

ಮಿಂಚು, ಕಣ್ಣಿನ ಮಿಟುಕಿಸುವಿಕೆ–ಇವುಗಳಂತೆ (ಬ್ರಹ್ಮವು) ಅಧಿದೈವತವಾಗಿ ಚಟ್ಟನೆ ಪ್ರಕಾಶವಾಗುವಂಥದ್ದು, ಅಧ್ಯಾತ್ಮವಾಗಿ ಮನಸ್ಸಿನ ಪ್ರತ್ಯಯಗಳು ಉಂಟಾಗುವ ಕಾಲದಲ್ಲಿಯೇ ತೋರಿಕೊಳ್ಳುವ ಸ್ವಭಾವವುಳ್ಳದ್ದು–ಎಂಬುದೇ[2] ಆದೇಶವು. ಹೀಗೆ ಉಪದೇಶಮಾಡಿದರೇ ಬ್ರಹ್ಮವು ಮಂದಬುದ್ಧಿಯವರಿಗೆ ತಿಳಿಯುತ್ತದೆ, ಆದ್ದರಿಂದ ಬ್ರಹ್ಮಕ್ಕೆ (ಈ) ಉಪಮಾನವನ್ನು ಉಪದೇಶಮಾಡಿರುತ್ತದೆ. ಏಕೆಂದರೆ ಯಾವ ಉಪಾಧಿಯೂ ಇಲ್ಲದ ಬ್ರಹ್ಮವನ್ನು ಗ್ರಹಿಸುವದು ಅಲ್ಪಬುದ್ಧಿಯುಳ್ಳ ಜನರಿಗೆ ಆಗಲೇ ಆರದು.

## ಬ್ರಹ್ಮವನ್ನು 'ತದ್ವನ'ವೆಂದು ಉಪಾಸನೆಮಾಡಬೇಕು

**ತದ್ಧ ತದ್ವನಂ ನಾಮ ತದ್ವನಮಿತ್ಯುಪಾಸಿತವ್ಯಂ**
**ಸ ಯ ಏತದೇವಂ ವೇದಾಭಿಹೈನಗ್ಂ ಸರ್ವಾಣಿ**
**ಭೂತಾನಿ ಸಂವಾಞ್ಛನ್ತಿ ॥ ೬ ॥**

---

1. ವೃತ್ತಿಯುಂಟಾಗುವಾಗ ಆಗುವ ಅರಿವೇ ಬ್ರಹ್ಮವು ಎಂದರೆ ವೃತ್ತಿಗೆ ವಿಷಯವೆಂದು ತಿಳಿಯಬಾರದು ; ಆದ್ದರಿಂದಲೇ ಮನಸ್ಸಿಗೂ ಮನಸ್ಸು ಎಂದು ೧-೩ರಲ್ಲಿ ಹೇಳಿದ್ದು.

2. ಬ್ರಹ್ಮವು ಕ್ಷಿಪ್ರಕಾರಿ, ನಿರತಿಶಯಪ್ರಕಾಶವುಳ್ಳದ್ದು, ಪರಮೈಶ್ವರ್ಯವುಳ್ಳದ್ದು–ಎಂದು ಉಪಮಾನಗಳ ಅರ್ಥವನ್ನು ಟೀಕಾಕಾರರು ತೆಗೆದಿರುತ್ತಾರೆ. ಉಪಾಧಿಗಳಿಂದ ಬ್ರಹ್ಮವು ತೋರಿದರೂ ಬ್ರಹ್ಮವು ಉಪಾಧಿಗಳ ಹಂಗಿಲ್ಲದೆ ಸ್ವತಂತ್ರವಾಗಿರುವದು ಎಂಬುದು ಭಾಷ್ಯಕಾರರ ಹೃದಯವೆಂದು ತೋರುತ್ತದೆ. "ಪ್ರತಿಬೋಧವಿದಿತಮ್" (೨-೪) ಎಂಬುದರ ಭಾಷ್ಯವನ್ನು ಇಲ್ಲಿ ಹೋಲಿಸಿ ನೋಡಿರಿ.

೬. ಅದು ತದ್ವನವೆನಿಸಿರುವದಂತೆ. ತದ್ವನವೆಂತ ಉಪಾಸನೆ ಮಾಡಬೇಕು. ಯಾವಾತನು ಇದನ್ನು ಹೀಗೆಂದು ತಿಳಿಯುವನೋ ಅವನನ್ನು ಎಲ್ಲಾ ಭೂತಗಳೂ ಬಯಸುತ್ತಲಿರುವವು.

(ಭಾಷ್ಯ)

೭೯. ಕಿಂ ಚ ತದ್ ಬ್ರಹ್ಮ ಹ ಕಿಲ ತದ್ವನಂ ನಾಮ ತಸ್ಯ ವನಂ ತದ್ವನಮ್ । ತಸ್ಯ ಪ್ರಾಣಿಜಾತಸ್ಯ ಪ್ರತ್ಯಗಾತ್ಮಭೂತತ್ವಾತ್ ವನಂ ವನನೀಯಂ ಸಮ್ಭಜನೀಯಮ್ । ಅತಃ ತದ್ವನಂ ನಾಮ ಪ್ರಖ್ಯಾತಂ ಬ್ರಹ್ಮ ತದ್ವನಮಿತಿ ಯತಃ ತಸ್ಮಾತ್ 'ತದ್ವನಮ್' ಇತ್ಯನೇನೈವ ಗುಣಾಭಿಧಾನೇನ ಉಪಾಸಿತವ್ಯಂ ಚಿನ್ತನೀಯಮ್ । ಅನೇನ ನಾಮ್ನಾ ಉಪಾಸನಸ್ಯ ಫಲಮಾಹ–ಸ ಯಃ ಕಶ್ಚಿತ್ ಏತತ್ ಯಥೋಕ್ತಂ ಬ್ರಹ್ಮ ಏವಂ ಯಥೋಕ್ತಗುಣಂ ವೇದ ಉಪಾಸ್ತೇ ಅಭಿ ಹ ಏನಮ್ ಉಪಾಸಕಂ ಸರ್ವಾಣಿ ಭೂತಾನಿ ಅಭಿಸಂವಾಞ್ಛನ್ತಿ ಹ ಪ್ರಾರ್ಥಯನ್ತೇ ಏವ ಯಥಾ ಬ್ರಹ್ಮ ॥

(ಭಾಷ್ಯಾರ್ಥ)

ಮತ್ತು ಆ ಬ್ರಹ್ಮವು ತದ್ವನವೆನಿಸಿರುವದಂತೆ. ತದ್ವನವೆಂದರೆ ಅದರ ವನವು, ಆ ಪ್ರಾಣಿಜಾತಕ್ಕೆ[1] ಒಳಗಿನ ಆತ್ಮನಾಗಿರುವದರಿಂದ ವನವು, ವನನ ಮಾಡತಕ್ಕದ್ದು, ಪ್ರೀತಿಮಾಡತಕ್ಕದ್ದು ಆದ್ದರಿಂದ ತದ್ವನವೆನಿಸಿರುವದು, ತದ್ವನವೆಂದು ಬ್ರಹ್ಮವು ಪ್ರಖ್ಯಾತವಾಗಿರುತ್ತದೆ[2] ಯಾದ್ದರಿಂದ ತದ್ವನವು ಎಂದು ಈ ಗುಣವನ್ನು ಹೇಳುವ ಹೆಸರಿನಿಂದಲೇ ಉಪಾಸನೆ ಮಾಡಬೇಕು, ಚಿಂತಿಸಬೇಕು. ಈ ಹೆಸರಿನಿಂದ ಉಪಾಸನೆಮಾಡುವವನಿಗೆ ಫಲವೇನೆಂಬುನ್ನು (ಈಗ ಮಂತ್ರವು) ಹೇಳುತ್ತದೆ. ಯಾವನೇ ಆಗಲಿ ಈ ಮೇಲೆ ಹೇಳಿದ ಬ್ರಹ್ಮವನ್ನು ಹೀಗೆಂದು ಮೇಲೆ ಹೇಳಿದ ಗುಣವುಳ್ಳದ್ದೆಂದು ತಿಳಿಯುವನೋ ಉಪಾಸನೆಮಾಡುವನೋ[3] ಅವನನ್ನು (ಆ) ಉಪಾಸಕನನ್ನು ಸುತ್ತಲಿರುವ ಸರ್ವಭೂತಗಳೂ–ಬ್ರಹ್ಮವನ್ನು ಹೇಗೋ ಹಾಗೆ–ಅವಶ್ಯವಾಗಿ ಬಯಸುವವು, ಬೇಕೆನ್ನುವವು.

## ಉಪನಿಷತ್ತಿನ ಉಪಸಂಹಾರ

(ಭಾಷ್ಯ)

೮೦. ಏವಮನುಶಿಷ್ಟಃ ಶಿಷ್ಯ ಆಚಾರ್ಯಮುವಾಚ—

---

1. ಯಾವ ಪ್ರಾಣಿಯಾದರೂ ತನ್ನ ಆತ್ಮನಲ್ಲಿ ಪ್ರೀತಿಯುಳ್ಳದ್ದಾಗಿರುವದು ; ಬ್ರಹ್ಮವು ಎಲ್ಲರಿಗೂ ಆತ್ಮನು.

2. ನಮ್ಮ ಆತ್ಮನಲ್ಲಿ ನಮಗೆ ಪ್ರೀತಿಯಿರುವದೆಂಬುದು ಪ್ರಸಿದ್ಧವಾಗಿರುತ್ತದೆ.

3. ಉಪಾಸನೆಯನ್ನು ಮುಖ್ಯವಾಗಿ ಇಲ್ಲಿ ಹೇಳಿದೆ ಜ್ಞಾನವಾದರೂ ಈ ಫಲವೇ ದೊರಕುವದೆಂಬುದು ಸ್ಪಷ್ಟ.

(ಭಾಷ್ಯಾರ್ಥ)

ಹೀಗೆ (ಆಚಾರ್ಯರು) ಅಪ್ಪಣೆಮಾಡಲು ಶಿಷ್ಯನು ಆಚಾರ್ಯರನ್ನು ಕುರಿತು ಇಂತೆಂದನು :—

**ಉಪನಿಷದಂ ಭೋ ಬ್ರೂಹೀತ್ಯುಕ್ತಾ ತ**
**ಉಪನಿಷದ್ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ ॥ ೭ ॥**

೭. "ಪೂಜ್ಯರೆ, ಉಪನಿಷತ್ತನ್ನು ಹೇಳಬೇಕು." "ನಿನಗೆ ಉಪನಿಷತ್ತನ್ನು ಹೇಳಿದ್ದಾಗಿದೆ. ಬ್ರಹ್ಮದ ಉಪನಿಷತ್ತನ್ನೇ ನಿನಗೆ ಹೇಳಿರುತ್ತೇವೆ."

(ಭಾಷ್ಯ)

೮೧. ಉಪನಿಷದಂ ರಹಸ್ಯಂ ಯಚ್ಚಿನ್ತ್ಯಂ ಭೋ ಭಗವನ್ ಬ್ರೂಹಿ ಇತಿ । ಏವಮುಕ್ತವತಿ ಶಿಷ್ಯೇ ಆಹ ಆಚಾರ್ಯಃ–ಉಕ್ತಾ ಅಭಿಹಿತಾ ತೇ ತವ ಉಪನಿಷತ್ । "ಕಾ ಪುನಃ ಸಾ ?" ಇತಿ । ಆಹ—ಬ್ರಾಹ್ಮೀಂ ಬ್ರಹ್ಮಣಃ ಪರಮಾತ್ಮನ ಇಯಂ ಬ್ರಾಹ್ಮೀ । ತಾಮ್ । ಪರಮಾತ್ಮವಿಷಯತ್ವಾದತೀತವಿಜ್ಞಾನಸ್ಯ । ವಾವ ಏವ ತೇ ಉಪನಿಷದಮ್ ಅಬ್ರೂಮೇತಿ । ಉಕ್ತಾಮೇವ ಪರಮಾತ್ಮವಿಷಯಾಮ್ "ಉಪನಿಷದಮಬ್ರೂಮ" ಇತ್ಯವಧಾರಯತಿ ಉತ್ತರಾರ್ಥಮ್ ॥

(ಭಾಷ್ಯಾರ್ಥ)

ಎಲೈ ಪೂಜ್ಯರೆ, ಉಪನಿಷತ್ತನ್ನು ಎಂದರೆ ಚಿಂತನೆಮಾಡಬೇಕಾದ ರಹಸ್ಯವನ್ನು ಹೇಳೋಣವಾಗಲಿ. ಹೀಗೆಂದು ಶಿಷ್ಯನು ಕೇಳಲು ಆಚಾರ್ಯನು ಹೇಳುತ್ತಾನೆ. ನಿನಗೆ ಉಪನಿಷತ್ತು ಉಕ್ತವಾಗಿದೆ, ಹೇಳಿದ್ದಾಗಿದೆ. ಹಾಗಾದರೆ ಅದು ಯಾವದು ? ಎಂದರೆ ಹೇಳುತ್ತಾನೆ. ಬ್ರಹ್ಮದ ಎಂದರೆ ಪರಮಾತ್ಮನ (ಉಪನಿಷತ್ತಾದ್ದರಿಂದ) ಇದಕ್ಕೆ ಬ್ರಾಹ್ಮಿ (ಎಂದು ಹೆಸರು), ಏಕೆಂದರೆ ಹಿಂದಿನ ವಿಜ್ಞಾನವು ಪರಮಾತ್ಮನ ವಿಷಯವಾಗಿರುತ್ತದೆ. ಪರಮಾತ್ಮವಿಷಯವಾದ ಉಪನಿಷತ್ತನ್ನು[1] (ಮೊದಲೇ) ಹೇಳಿರುವದನ್ನು ಬ್ರಹ್ಮದ್ದೇ ಆದ) ಉಪನಿಷತ್ತನ್ನು ನಿಮಗೆ ಹೇಳಿರುತ್ತೇವೆ–ಎಂದು ಅವಧಾರಣೆಮಾಡಿ ಹೇಳಿರುವದು ಮುಂದೆ (ಸಾಧನಗಳನ್ನು)[2] ಹೇಳುವದಕ್ಕೆ.

1. ಇಲ್ಲಿ ಉಪನಿಷತ್ತೆಂಬುದು ಸಗುಣೋಪಾಸನೆಯೇ ಅಲ್ಲದೆ ನಿರುಪಾಧಿಕವಾದ ಬ್ರಹ್ಮವಿದ್ಯೆಯನ್ನು ತಿಳಿಸುವ ಶಬ್ದವೆಂಬುದು ಮುಂದಿನ ಚರ್ಚೆಯಿಂದ ವ್ಯಕ್ತವಾಗುತ್ತದೆ.

2. ಬ್ರಹ್ಮಜ್ಞಾನಕ್ಕೆ ಅವಶ್ಯವಾಗಿರುವ ತಪಸ್ಸೇ ಮುಂತಾದ ಸಾಧನಗಳನ್ನು ತಿಳಿಸುವದಕ್ಕೆ.

## ಮುಂದಿನ ಮಂತ್ರದಲ್ಲಿ ಹೇಳಿರುವ ಸಾಧನಗಳಿಗೂ ಆತ್ಮಜ್ಞಾನಕ್ಕೂ ಸಂಬಂಧ

(ಭಾಷ್ಯ)

೮೨. ಪರಮಾತ್ಮವಿಷಯಾಮ್ ಉಪನಿಷದಂ ಶ್ರುತವತಃ "ಉಪನಿಷದಂ ಭೋ ಬ್ರೂಹಿ" ಇತಿ ಪೃಚ್ಛತಃ ಶಿಷ್ಯಸ್ಯ ಕೋಽಭಿಪ್ರಾಯಃ? ಯದಿ ತಾವತ್ ಶ್ರುತಸ್ಯಾರ್ಥಸ್ಯ ಪ್ರಶ್ನಃ ಕೃತಃ ತತಃ ಪಿಷ್ಟಪೇಷಣವತ್ ಪುನರುಕ್ತೋಽನರ್ಥಕಃ ಪ್ರಶ್ನಃ ಸ್ಯಾತ್ । ಅಥ ಸಾವಶೇಷಾ ಉಕ್ತೋಪನಿಷತ್ ಸ್ಯಾತ್, ತತಸ್ತಸ್ಯಾಃ ಫಲ ವಚನೇನೋಪಸಂಹಾರೋ ನ ಯುಕ್ತಃ "ಪ್ರೇತ್ಯಾಸ್ಮಾಲ್ಲೋಕಾದಮೃತಾಭವನ್ತಿ" (೨-೫) ಇತಿ । ತಸ್ಮಾತ್ ಉಕ್ತೋಪನಿಷಚ್ಛೇಷವಿಷಯೋಽಪಿ ಪ್ರಶ್ನೋಽನುಪಪನ್ನ ಏವ, ಅನವಶೇಷಿತತ್ವಾತ್ । ಕಸ್ತರ್ಹಿ ಅಭಿಪ್ರಾಯಃ ಪ್ರಷ್ಟುರಿತಿ?

(ಭಾಷ್ಯಾರ್ಥ)

ಪರಮಾತ್ಮವಿಷಯವಾದ ಉಪನಿಷತ್ತನ್ನು ಕೇಳಿದ ಶಿಷ್ಯನು "ಪೂಜ್ಯರೆ, ಉಪನಿಷತ್ತನ್ನು ಹೇಳಿರಿ" ಎಂದು ಕೇಳಿದ್ದರ ಅಭಿಪ್ರಾಯವೇನು? ಮೊದಲು ಕೇಳಿದ ವಿಷಯವನ್ನೇ ಕೇಳಿರುತ್ತಾನೆಂದರೆ ಆಗ ಅರೆದ ಹಿಟ್ಟನ್ನೇ ಮತ್ತೆ ಅರೆದಂತೆ ಪ್ರಶ್ನೆಯು ಪುನರುಕ್ತಿಯಾಗಿ ವ್ಯರ್ಥವಾಗುವದು. ಹಾಗಿಲ್ಲದೆ ಹಿಂದೆ ಹೇಳಿದ ಉಪ ನಿಷತ್ತಿಗೆ ಇನ್ನೂ ಶೇಷವಿದೆಯೆಂದರೆ ಆಗ ಈ ಲೋಕವನ್ನು ಬಿಟ್ಟುಹೋಗಿ ಅಮೃತ ರಾಗುವರು" (೨-೫) ಎಂಬ ಫಲವಚನದೊಡನೆ ಅದನ್ನು ಉಪಸಂಹಾರಮಾಡಿರು ವದು ಸರಿಯಾಗುವದಿಲ್ಲ. ಆದ್ದರಿಂದ ಹಿಂದೆ ಹೇಳಿದ ಉಪನಿಷತ್ತಿಗೆ ಶೇಷವಾದ ವಿಷಯವನ್ನು ಹೇಳಬೇಕೆಂದು ಕೇಳಿರುತ್ತಾನೆಂಬುದೂ ಹೊಂದುವದೇ ಇಲ್ಲ, ಏಕೆಂ ದರೆ ಮತ್ತೇನನ್ನೂ (ಅಲ್ಲಿ) ಉಳಿಸಿರುವದಿಲ್ಲ.

(ಪ್ರಶ್ನೆ):—ಹಾಗಾದರೆ ಪ್ರಶ್ನೆಯನ್ನು ಕೇಳಿರುವ (ಶಿಷ್ಯನ) ಅಭಿಪ್ರಾಯವೇನು?

(ಭಾಷ್ಯ)

೮೩. ಉಚ್ಯತೇ । ಕಿಂ ಪೂರ್ವೋಕ್ತೋಪನಿಷಚ್ಛೇಷತಯಾ ತತ್ಸಹಕಾರಿ ಸಾಧನಾನ್ತರಾಪೇಕ್ಷಾ, ಅಥ ನಿರಪೇಕ್ಷೈವ । ಸಾಽಪೇಕ್ಷಾ ಚೇತ್, ಅಪೇಕ್ಷಿತ ವಿಷಯಾಮುಪನಿಷದಂ ಬ್ರೂಹಿ । ಅಥ ನಿರಪೇಕ್ಷಾ ಚೇತ್ ಅವಧಾರಯ ಪಿಪ್ಪಲಾದ ವತ್ "ನಾತಃ ಪರಮಸ್ತಿ" (ಪ್ರ. ೬-೭) ಇತಿ । ಏವಮಭಿಪ್ರಾಯೋ ಏತದುಪಪನ್ನ ಮಾಚಾರ್ಯಸ್ಯಾವಧಾರಣವಚನಮ್, "ಉಕ್ತಾ ತ ಉಪನಿಷತ್" ಇತಿ ॥

(ಭಾಷ್ಯಾರ್ಥ)

ಹೇಳುತ್ತೇವೆ, (ಕೇಳಿ). ಹಿಂದೆ ಹೇಳಿದ ಉಪನಿಷತ್ತಿಗೆ ಶೇಷವಾಗಿ ಅದಕ್ಕೆ ಸಹಕಾರಿಯಾದ ಬೇರೆಯ ಸಾಧನವೂ ಬೇಕಾಗಿರುವದೊ, ಅಥವಾ ಅದಕ್ಕೆ ಯಾವ

ಸಾಧನವೂ ಬೇಕೇ ಇಲ್ಲವೋ? ಬೇಕಾಗಿದ್ದರೆ ಯಾವದು ಬೇಕಾಗಿರುವದೋ ಅದರ ವಿಷಯವಾದ ಉಪನಿಷತ್ತನ್ನು ಹೇಳಿರಿ; ಬೇಕೇ ಇಲ್ಲದಿದ್ದರೆ **ಪಿಪ್ಪಲಾದನಂತೆ** "ಇದಕ್ಕಿಂತ ಬೇರೆಯಿಲ್ಲ" (ಪ್ರ. ೬-೭) ಎಂದು ಒತ್ತಿ ಹೇಳಿರಿ. ಹೀಗೆಂಬುದು ಶಿಷ್ಯನ ಅಭಿಪ್ರಾಯವಾದರೆ "ನಿನಗೆ ಉಪನಿಷತ್ತು ಉಕ್ತವಾಯಿತು" ಎಂದು ಆಚಾರ್ಯನು ಅವಧಾರಣಮಾಡಿ ಹೇಳಿದ ಈ ವಚನವು ಸರಿಯಾಗುತ್ತದೆ.

(ಭಾಷ್ಯ)

೮೪. ನನು ಸಾವಧಾರಣಮಿದಮ್ । ಯತೋಽನ್ಯದ್ವಕ್ತವ್ಯಮಾಹ "ತಸ್ಯೈ ತಪೋದಮಃ" (೪-೮) ಇತ್ಯಾದಿ । ಸತ್ಯಮ್, ವಕ್ತವ್ಯಮುಚ್ಯತೇ ಆಚಾರ್ಯೇಣ । ನ ತೂಕ್ತೋಪನಿಷಚ್ಛೇಷತಯಾ, ತತ್ಸಹಕಾರಿಸಾಧನಾನ್ತರಾಭಿಪ್ರಾಯೇಣ ವಾ । ಕಿಂ ತು ಬ್ರಹ್ಮವಿದ್ಯಾಪ್ರಾಪ್ತ್ಯುಪಾಯಾಭಿಪ್ರಾಯೇಣ । ವೇದೈಸ್ತದಙ್ಗೈಶ್ಚ ಸಹ ಪಾಠೇನ ಸಮೀಕರಣಾತ್ ತಪಃಪ್ರಭೃತೀನಾಮ್ । ನ ಹಿ ವೇದಾನಾಂ ಶಿಕ್ಷಾದ್ಯಙ್ಗಾನಾಂ ಚ ಸಾಕ್ಷಾದ್ ಬ್ರಹ್ಮವಿದ್ಯಾಶೇಷತ್ವಂ ತತ್ ಸಹಕಾರಿಸಾಧನತ್ವಂ ವಾ ಸಮ್ಭವತಿ । ಸಹಪಠಿತಾನಾಮಪಿ ಯಥಾಯೋಗಂ ವಿಭಜ್ಯ ವಿನಿಯೋಗಃ ಸ್ಯಾದಿತಿ ಚೇತ್ । ಯಥಾ ಸೂಕ್ತವಾಕಾನುಮನ್ತ್ರಣಮನ್ತ್ರಾಣಾಂ ಯಥಾದೈವತಂ ವಿಭಾಗಃ । ತಥಾ ತಪೋದಮಕರ್ಮಸತ್ಯಾದೀನಾಮಪಿ ಬ್ರಹ್ಮವಿದ್ಯಾಶೇಷತ್ವಂ ತತ್ಸಹಕಾರಿಸಾಧನತ್ವಂ ವೇತಿ ಕಲ್ಪ್ಯತೇ । ವೇದಾನಾಂ ತದಙ್ಗಾನಾಂ ಚಾರ್ಥಪ್ರಕಾಶಕತ್ವೇನ ಕರ್ಮಾತ್ಮಜ್ಞಾನೋಪಾಯತ್ವಮಿತಿ । ಏವಂ ಹ್ಯಯಂ ವಿಭಾಗೋ ಯುಜ್ಯತೇ ಅರ್ಥಸಮ್ಬನ್ಧೋಪಪತ್ತಿಸಾಮರ್ಥ್ಯಾದಿತಿ ಚೇತ್ । ನ । ಅಯುಕ್ತೇಃ । ನ ಹ್ಯಯಂ ವಿಭಾಗೋ ಘಟನಾಂ ಪ್ರಾಞ್ಚತಿ । ನ ಹಿ ಸರ್ವಕ್ರಿಯಾಕಾರಕಫಲಭೇದಬುದ್ಧಿತಿರಸ್ಕಾರಿಣ್ಯಾ ಬ್ರಹ್ಮವಿದ್ಯಾಯಾಃ ಶೇಷಾಪೇಕ್ಷಾ ಸಹಕಾರಿಸಾಧನಸಮ್ಬನ್ಧೋ ವಾ ಯುಜ್ಯತೇ । ಸರ್ವವಿಷಯವ್ಯಾವೃತ್ತಪ್ರತ್ಯಗಾತ್ಮವಿಷಯನಿಷ್ಠತ್ವಾಚ್ಚ ಬ್ರಹ್ಮವಿದ್ಯಾಯಾಃ, ತತ್ಫಲಸ್ಯ ಚ ನಿಃಶ್ರೇಯಸಸ್ಯ । "ಮೋಕ್ಷಮಿಚ್ಛನ್ ಸದಾ ಕರ್ಮ ತ್ಯಜೇದೇವ ಸಸಾಧನಮ್ । ತ್ಯಜತೈವ ಹಿ ತಜ್ಜ್ಞೇಯಂ ತ್ಯಕ್ತುಃ ಪ್ರತ್ಯಕ್ಪರಂ ಪದಮ್ ॥" (?) ತಸ್ಮಾತ್ ಕರ್ಮಣಾಂ ಸಹಕಾರಿತ್ವಂ ಕರ್ಮಶೇಷಾಪೇಕ್ಷಾ ವಾ ನ ಜ್ಞಾನಸ್ಯೋಪಪದ್ಯತೇ । ತತೋಽಸದೇವ ಸೂಕ್ತವಾಕಾನುಮನ್ತ್ರಣವದ್ ಯಥಾಯೋಗಂ ವಿಭಾಗ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :–ಇದು ಅವಧಾರಣೆಯಲ್ಲ; ಏಕೆಂದರೆ "ಇದಕ್ಕೆ ತಪಸ್ಸು, ದಮ" (೪-೮) ಎಂದು ಮುಂತಾಗಿ ಬೇರೆ ಹೇಳತಕ್ಕದ್ದನ್ನೂ (ಗುರು) ಹೇಳಿರುತ್ತಾನೆ[1].

---

1. ಆದ್ದರಿಂದ ಈ ನಿಮ್ಮ ಸಮಾಧಾನವು ಸರಿಯಲ್ಲ–ಎಂದು ಭಾವ.

(ಪರಿಹಾರ) :—ನಿಜ, ಗುರುವು ಮತ್ತೂ ಹೇಳತಕ್ಕದ್ದನ್ನು ಹೇಳಿರುತ್ತಾನೆ, ಆದರೆ ಅದು ಹಿಂದೆ ಹೇಳಿ ದಉಪನಿಷತ್ತಿಗೆ **ಶೇಷ**[1] ವೆಂಬ ಅಥವಾ **ಸಹಕಾರಿ**ಯಾದ ಮತ್ತೊಂದು ಸಾಧನವೆಂಬ ಅಭಿಪ್ರಾಯದಿಂದ (ಅದನ್ನು) ಹೇಳಿರುವದಿಲ್ಲ; ಮತ್ತೇನೆಂದರೆ ಬ್ರಹ್ಮವಿದ್ಯೆಯನ್ನು ಪಡೆದುಕೊಳ್ಳುವದಕ್ಕೆ (ಅದು) ಉಪಾಯವೆಂಬ ಅಭಿಪ್ರಾಯದಿಂದ (ಹೇಳಿರುತ್ತಾನೆ). ವೇದಗಳು, ಅದರ ಅಂಗಗಳು–ಇವುಗಳೊಡನೆ ಸಮವಾಗಿ ತಪಸ್ಸೇ ಮುಂತಾದವುಗಳನ್ನು (ಸೇರಿಸಿ ಹೇಳಿರು)ವದರಿಂದ (ಇದೇ ಅವನ ಅಭಿಪ್ರಾಯವೆಂದು ನಿಶ್ಚಯವಾಗುತ್ತದೆ). ವೇದಗಳೂ ಶಿಕ್ಷೆಯೇ ಮುಂತಾದ ಅಂಗಗಳೂ ನೇರಾಗಿ[2] ಬ್ರಹ್ಮವಿದ್ಯೆಗೆ ಶೇಷವೆಂದಾಗಲಿ ಅದಕ್ಕೆ ಸಹಕಾರಿಸಾಧನಗಳೆಂದಾಗಲಿ ಹೇಳುವದಕ್ಕಾಗಲಾರದಷ್ಟೆ ?

(ಪೂರ್ವಪಕ್ಷಿ) —(ಇವನ್ನು) ಜೊತೆಯಲ್ಲಿಯೇ ಹೇಳಿದ್ದರೂ ಅವವುಗಳಿಗೆ ತಕ್ಕಂತೆ ವಿಂಗಡಿಸಿಕೊಂಡು ವಿನಿಯೋಗಮಾಡಬಹುದಲ್ಲ ![3] ಸೂಕ್ತವಾಕದಲ್ಲಿ **ಅನುಮಂತ್ರಣಮಂತ್ರ**ಗಳನ್ನು (ಆಯಾ) ದೇವತೆಗಳಿಗೆ ತಕ್ಕಂತೆ ವಿಂಗಡಿಸಿಕೊಂಡು ಹೇಗೆ (ವಿನಿಯೋಗಿಸಿದೆಯೋ) ಹಾಗೆಯೇ ತಪಸ್ಸು, ದಮ, ಕರ್ಮ, ಸತ್ಯ–ಮುಂತಾದವುಗಳೂ ಬ್ರಹ್ಮವಿದ್ಯೆಗೆ **ಶೇಷ**ವಾಗಿರುತ್ತವೆಯೆಂದೋ **ಸಹಕಾರಿ**ಯಾಗಿರುತ್ತವೆಯೆಂದೋ (ಕಲ್ಪಿಸಿ) ವೇದಗಳೂ ಅದರ ಅಂಗಗಳೂ (ಆಯಾ) ವಿಷಯವನ್ನು ತಿಳಿಸುವ ಮೂಲಕ ಕರ್ಮ, ಆತ್ಮ–ಇವುಗಳನ್ನು ತಿಳಿದುಕೊಳ್ಳುವದಕ್ಕೆ ಸಾಧನವೆಂದು

---

1. ಶೇಷವೆಂದರೆ ಮತ್ತೊಂದು ಸಾಧನಕ್ಕೆ ಬೇಕಾಗಿರುವ ಅಂಗವು ; ಸಹಕಾರಿ ಎಂದರೆ ಅದರ ಜೊತೆಯಲ್ಲಿಯೇ ಅನುಷ್ಠಾನಮಾಡಿ ಒಟ್ಟು ಅನುಷ್ಠಾನವು ಫಲವನ್ನು ಕೊಡುವಂತಿರುವದು. ಜ್ಞಾನಕ್ಕೆ ಕರ್ಮವು ಅಂಗವಲ್ಲ, ಸಮುಚ್ಚಯದಿಂದ ಫಲವನ್ನು ಕೊಡುವ ಸಹಕಾರಿಯೂ ಅಲ್ಲ-ಎಂಬುದು ಪ್ರಕೃತಚರ್ಚೆಯ ಫಲ.

2. ಸಾಂಗವೇದಾಧ್ಯಯನವು ಕರ್ಮವಿಚಾರಾದಿಗಳ ಮೂಲಕವೇ ಬ್ರಹ್ಮವಿದ್ಯೆಗೆ ಉಪಾಯವಾಗಿರುತ್ತದೆ ; ಅಧ್ಯಯನವೆಂಬ ಅಂಗಸಹಿತವಾದ ಜ್ಞಾನಕ್ಕೆ ಮುಕ್ತಿಯೆಂದಾಗಲಿ ಅಧ್ಯಯನದೊಡನೆ ಅನುಷ್ಠಾನಮಾಡಿದ ಜ್ಞಾನಕ್ಕೇ ಮುಕ್ತಿಯೆಂದಾಗಲಿ ಹೇಳುವದಕ್ಕೆ ಬರುವದಿಲ್ಲ.

3. ಸೂಕ್ತವಾಕವನ್ನು ದರ್ಶಪೂರ್ಣಮಾಸಗಳಲ್ಲಿ ಉಪಯೋಗಿಸಬೇಕು. ಇದರಲ್ಲಿ ಪೌರ್ಣಮಾಸ್ಯದೇವತೆಗಳನ್ನು ಹೇಳುವ ಮಾತುಗಳಿರುವಷ್ಟು ಭಾಗವನ್ನು ಮಾತ್ರ ಆ ಯಾಗದ ದೇವತೆಗಳನ್ನು ವಿಸರ್ಜನೆಮಾಡುವದಕ್ಕೂ ಅಮಾವಾಸ್ಯೆಯ ದೇವತೆಗಳನ್ನು ಹೇಳುವ ಶಬ್ದಗಳನ್ನು ಮಾತ್ರ ದರ್ಶದಲ್ಲಿ ಆ ದೇವತೆಗಳನ್ನು ವಿಸರ್ಜನೆಮಾಡುವದಕ್ಕೂ ಉಪಯೋಗಿಸಬೇಕು—ಎಂದು (ಜೈ. ಸೂ. ೩-೨-೧೬ ರಿಂದ ೧೮) ಪೂರ್ವಮೀಮಾಂಸದಲ್ಲಿ ನಿರ್ಣಯಿಸಿದೆ. ಈ ನ್ಯಾಯದಂತೆ ಇಲ್ಲಿಯೂ ಬ್ರಹ್ಮವಿದ್ಯೆಗೆ ಬೇಕಾಗುವಷ್ಟು ಸಾಧನಗಳನ್ನು ಮಾತ್ರ ಶೇಷವೆಂದೋ ಸಹಕಾರಿಸಾಧನವೆಂದೋ ಏತಕ್ಕೆ ಇಟ್ಟುಕೊಳ್ಳಬಾರದು ?—ಎಂಬುದು **ಪೂರ್ವಪಕ್ಷಿಯ ಭಾವ.**

ಕಲ್ಪಿಸಬಹುದಾಗಿದೆ. ಹೀಗೆ ಇವುಗಳನ್ನು ವಿಂಗಡಿಸಿಕೊಳ್ಳುವದೇ ಸರಿಯಾದದ್ದು ;ಏಕೆಂದರೆ ಆಯಾ ವಿಷಯಕ್ಕೆ ಅವು ಹೊಂದಿಕೊಳ್ಳುವ ಸಾಮರ್ಥ್ಯವುಳ್ಳವುಗಳಾಗಿರುತ್ತವೆ.

(ಸಿದ್ಧಾಂತಿ).—ಹಾಗಲ್ಲ. ಏಕೆಂದರೆ ಹೊಂದುವದಿಲ್ಲ ಹೀಗೆ ವಿಂಗಡಿಸುವದು ಹೊಂದುಗೆಯಾಗುವದೇ ಇಲ್ಲ. ಏಕೆಂದರೆ **ಕ್ರಿಯೆ, ಕಾರಕ, ಫಲ–ಎಂಬ ಭೇದಬುದ್ಧಿಯೆಲ್ಲವನ್ನೂ ನೀಗುವ ಬ್ರಹ್ಮವಿದ್ಯೆಗೆ ಶೇಷದ ಬಯಕೆಯಾಗಲಿ ಸಹಕಾರಿಯಾದ ಸಾಧನದ ಸಂಬಂಧವಾಗಲಿ (ಇದೆ ಎಂಬುದು) ಸರಿಯಾಗುವದಿಲ್ಲ.**[1] ಇದಲ್ಲದೆ ಎಲ್ಲಾ ವಿಷಯಗಳಿಗಿಂತಲೂ ಬೇರೆಯಾಗಿರುವ ನಮ್ಮೊಳಗಿನ ಆತ್ಮನೆಂಬ ವಿಷಯದಲ್ಲಿಯೇ ಬ್ರಹ್ಮವಿದ್ಯೆಗೆ ತಾತ್ಪರ್ಯವಿರುತ್ತದೆ. ಅದರ ಫಲವಾದ ಮುಕ್ತಿಯೂ (ಅದರಲ್ಲಿಯೇ ಕೊನೆಗಾಣುತ್ತದೆ)[2] "ಮೋಕ್ಷವನ್ನು ಬಯಸುವಾತನು ಕರ್ಮವನ್ನು ಸಾಧನಸಹಿತವಾಗಿ ಯಾವಾಗಲೂ ಬಿಡಬೇಕು ; ಬಿಡುವವನಿಗೇ ಅದು ತಿಳಿಯಬರತಕ್ಕದ್ದು, ಬಿಡುವಾತನ ಪ್ರತ್ಯಗಾತ್ಮನಗಿರುವ ಪರಮಪದವದು" (?)[3] ಆದ್ದರಿಂದ ಕರ್ಮಗಳು ಜ್ಞಾನಕ್ಕೆ ಸಹಕಾರಿಯೆಂಬುದಾಗಲಿ (ಅದಕ್ಕೆ) ಕರ್ಮವೆಂಬ ಶೇಷದ ಬಯಕೆಯಿರುವದೆಂಬುದಾಗಲಿ ಹೊಂದುವದಿಲ್ಲ. ಆದ್ದರಿಂದ ಸೂಕ್ತವಾಕದ ಅನುಮಂತ್ರಣದಂತೆ ಹೊಂದುವಷ್ಟನ್ನು ವಿಂಗಡಿಸಿಕೊಳ್ಳಬೇಕೆಂಬುದು ಸರಿಯೇ ಅಲ್ಲ.

(ಭಾಷ್ಯ)

೪೫. ತಸ್ಮಾದವಧಾರಣಾರ್ಥತ್ವೈವ ಪ್ರಶ್ನಪ್ರತಿವಚನಸ್ಯೋಪಪದ್ಯತೇ । ಏತಾವತ್ಯೇವೇಯಮುಪನಿಷದುಕ್ತಾ ಅನ್ಯನಿರಪೇಕ್ಷಾ ಅಮೃತತ್ವಾಯ ॥

---

1. ಜ್ಞಾನವು ಕರ್ಮವಾಗಿದ್ದರೆ ಅದಕ್ಕೆ ಶೇಷವಾಗಲಿ ಸಹಕಾರಿಯಾಗಲಿ ಇರಬಹುದಾಗಿತ್ತು. ಆದರೆ ಅದು ಕರ್ಮದ ಸ್ವರೂಪವನ್ನೇ ಬಾಧಿಸುವ ಅರಿವಾಗಿರುತ್ತದೆ. ಸೂ. ಭಾ. ೧-೧-೪.

2 ಸಾಧನಸಾಧ್ಯಗಳ ವಿಚಾರವಾಗಿದ್ದರೆ ಶೇಷದ ಅಥವಾ ಸಹಕಾರಿಯ ಬಯಕೆ ಇರುತ್ತಿತ್ತು. ಜ್ಞಾನವು ಆತ್ಮನನ್ನು ತಿಳಿಸುತ್ತದೆ ಆತ್ಮನು ಹೇಯವೂ ಅಲ್ಲ, ಉಪಾದೇಯವೂ ಅಲ್ಲ ; ಆದ್ದರಿಂದ ಸಾಧ್ಯವಲ್ಲ ಜ್ಞಾನದಿಂದ ಆಗುವ ಮುಕ್ತಿಯೆಂಬುದು ಆತ್ಮಸ್ವರೂಪವಾಗಿಯೇ ಇರುತ್ತದೆ, ಮತ್ತೊಂದು ಸಾಧನದಿಂದ ಪಡೆಯತಕ್ಕದ್ದಲ್ಲ. ಆದ್ದರಿಂದ ಅದೂ ಸಾಧ್ಯವಲ್ಲ. ಜ್ಞಾನವು ವಿಧಿಸತಕ್ಕದ್ದಲ್ಲ. ಆದರ ಫಲವು ಪಡೆಯತಕ್ಕದ್ದಲ್ಲ ಇಲ್ಲಿ ಶೇಷಸಹಕಾರಿಗಳ ಸುದ್ದಿಯಾದರೂ ಹೇಗೆ ಬಂದೀತು ?–ಎಂದು ಭಾವ. ಸೂ. ಭಾ. ೩-೪-೨೬-

3. ಭಾಷ್ಯದಲ್ಲಿ ಹಿಂದೆಮುಂದೆ ವಾಕ್ಯಸಂಬಂಧವಿಲ್ಲದ ಈ ಶ್ಲೋಕವು ಇಲ್ಲಿ ಏತಕ್ಕೆ ಬಂದಿದೆಯೋ ತಿಳಿಯದು. ಈ ವಾಕ್ಯವು ಎಲ್ಲಿಯದೆಂಬುದೂ ತಿಳಿಯದು. "ತ್ಯಾಗ ಏವ ಹಿ ಸರ್ವೇಷಾಂ ಮೋಕ್ಷಸಾಧನಮುತ್ತಮಮ್ । ತ್ಯಜತೈವ ಹಿ ತಜ್ಜ್ಞೇಯಂ ತ್ಯಕ್ತುಃ ಪ್ರತ್ಯಕ್ಪರಂ ಪದಮ್" ಎಂಬ ವಾರ್ತಿಕದಲ್ಲಿ ಒಂದು ವಾಕ್ಯವಿದೆ. ಅದನ್ನು ಅಲ್ಲಿ ಭಾಲ್ಲವಿಶ್ರುತಿಯೆಂದು ಕರೆದಿದೆ.

(ಭಾಷ್ಯಾರ್ಥ)

ಆದ್ದರಿಂದ (ಶಿಷ್ಯನು ಕೇಳಿರುವ) ಪ್ರಶ್ನೆಗೆ (ಗುರುವು ಹೇಳಿರುವ) ಉತ್ತರವು ಅವಧಾರಣೆಮಾಡುವದಕ್ಕಾಗಿಯೇ (ಬಂದಿರುತ್ತದೆ) ಎಂಬುದೇ ಸರಿ. (ಇಲ್ಲಿಯ ವರೆಗೆ) ಹೇಳಿರುವ ಈ ಉಪನಿಷತ್ತು ಇಷ್ಟೇ; ಮತ್ತೊಂದರ ಬಯಕೆಯಿಲ್ಲದೆಯೇ ಮೋಕ್ಷವನ್ನು ಕೊಡುತ್ತದೆ.

## ಜ್ಞಾನಸಾಧನಗಳು

**ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ**
**ವೇದಾಃ ಸರ್ವಾಙ್ಗಾನಿ ಸತ್ಯಮಾಯತನಮ್ ॥ ೮ ॥**

೮. ಅದಕ್ಕೆ ತಪಸ್ಸು, ದಮ, ಕರ್ಮ–ಎಂಬಿವು ಪ್ರತಿಷ್ಠೆಯು ; ವೇದಗಳು ಎಲ್ಲಾ ಅಂಗಗಳು ; ಸತ್ಯವು ಆಯತನವು.

(ಭಾಷ್ಯ)

೮೬. ಯಾಮಿಮಾಂ ಬ್ರಾಹ್ಮೀಮುಪನಿಷದಂ ತವಾಗ್ರೇऽಬ್ರೂಮೇತಿ ತಸ್ಯೈ ತಸ್ಯಾ ಉಕ್ತಾಯಾ ಉಪನಿಷದಃ ಪ್ರಾಪ್ತ್ಯುಪಾಯಭೂತಾನಿ ತಪಆದೀನಿ। ತಪಃ ಕಾಯೇನ್ದ್ರಿಯಮನಸಾಂ ಸಮಾಧಾನಮ್ । ದಮಃ ಉಪಶಮಃ । ಕರ್ಮ ಅಗ್ನಿಹೋತ್ರಾದಿ । ಏತೈರ್ಹಿ ಸಂಸ್ಕೃತಸ್ಯ ಸತ್ತ್ವಶುದ್ಧಿದ್ವಾರಾ ತತ್ತ್ವಜ್ಞಾನೋತ್ಪತ್ತಿರ್ದೃಷ್ಟಾ । ದೃಷ್ಟಾ ಹಿ ಅಮೃದಿತಕಲ್ಮಷಸ್ಯ ಉಕ್ತೇऽಪಿ ಬ್ರಹ್ಮಣಿ ಅಪ್ರತಿಪತ್ತಿಃ, ವಿಪರೀತಪ್ರತಿಪತ್ತಿಶ್ಚ । ಯಥೇನ್ದ್ರವಿರೋಚನಪ್ರಭೃತೀನಾಮ್ । ತಸ್ಮಾತ್ ಇಹ ವಾ ಅತೀತೇಷು ವಾ ಬಹುಷು ಜನ್ಮಾನ್ತರೇಷು ತಪಆದಿಭಿಃ ಕೃತಸತ್ತ್ವಶುದ್ಧೇ ಜ್ಞಾನಂ ಸಮುತ್ಪದ್ಯತೇ ಯಥಾಶ್ರುತಮ್ । "ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ ॥" (ಶ್ವೇ. ೬-೨೩) ಇತಿ ಮನ್ತ್ರವರ್ಣಾತ್ । "ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ ಪಾಪಸ್ಯ ಕರ್ಮಣಃ ।" (ಮೋ. ೨೦೪-೮) ಇತಿ ಸ್ಮೃತೇಶ್ಚ ॥

(ಭಾಷ್ಯಾರ್ಥ)

(ನಾವು) ನಿನಗೆ ಯಾವ ಬ್ರಾಹ್ಮೀ ಉಪನಿಷತ್ತನ್ನು ಮೊದಲು ಹೇಳಿದೆವೆಂದೆವೋ ಅದಕ್ಕೆ ಎಂದರೆ ಆ (ಹಿಂದೆ) ಹೇಳಿದ ಉಪನಿಷತ್ತನ್ನು[2] ಪಡೆದುಕೊಳ್ಳು

---

1. ಜ್ಞಾನವು ಹುಟ್ಟಿದ ಬಳಿಕ ಅದರ ಫಲವಾದ ಮುಕ್ತಿಯನ್ನು ಕೊಡುವದಕ್ಕೆ ಅದಕ್ಕೆ ಮತ್ತೇತರ ಸಹಾಯವೂ ಬೇಕಿರುವದಿಲ್ಲ. ಸೂ. ಭಾ. ೩-೪-೧, ೩-೪-೩೩.

2. ಸಗುಣವಿದ್ಯೆ, ನಿರ್ಗುಣವಿದ್ಯೆ–ಇವೆರಡನ್ನೂ ಉಪನಿಷತ್ತೆಂಬ ಶಬ್ದದಿಂದ ಹೇಳಿರುತ್ತದೆ ಎಂದು ಟೀಕೆಯಲ್ಲಿದೆ. ಮುಖ್ಯವಾಗಿ ಭಾಷ್ಯಕಾರರು ನಿರ್ಗುಣವಿದ್ಯೆಯನ್ನೇ ಲಕ್ಷ್ಯದಲ್ಲಿಟ್ಟಿರುತ್ತಾರೆಂಬುದು ಹಿಂದಿನ ಚರ್ಚೆಯಿಂದ ಸ್ಪಷ್ಟವಾಗುತ್ತದೆ.

ವದಕ್ಕೆ ತಪಸ್ಸೇ ಮುಂತಾದವುಗಳು ಸಾಧನಗಳು. ತಪಸ್ಸೆಂದರೆ ದೇಹ, ಇಂದ್ರಿಯ ಗಳು, ಮನಸ್ಸು–ಇವುಗಳನ್ನು ಸರಿಯಾಗಿ ತಡೆದಿಟ್ಟುಕೊಳ್ಳುವದು, ದಮವೆಂದರೆ ಉಪಶಾಂತಿಯು,[1] ಕರ್ಮವೆಂದರೆ ಅಗ್ನಿಹೋತ್ರಾದಿಗಳು. ಇವುಗಳಿಂದ **ಸಂಸ್ಕಾರ ವನ್ನು** ಪಡೆದಾತನಿಗೆ ಅಂತಃಕರಣಶುದ್ಧಿಯ ಮೂಲಕವಾಗಿ ತತ್ತ್ವಜ್ಞಾನವುಂಟಾಗು ವದು ಕಂಡುಬಂದಿರುತ್ತದೆಯಲ್ಲವೆ? (ಆದ್ದರಿಂದ ಇವುಗಳು ಸಾಧನಗಳು). ಏಕೆಂ ದರೆ (ಮನಸ್ಸಿನ) ಕಲ್ಮಷಗಳು ನಾಶವಾಗದೆ ಇರುವವನಿಗೆ ಬ್ರಹ್ಮವನ್ನು ಹೇಳಿದರೂ ತಿಳಿಯದೆ ಇರುವದು, ತಪ್ಪಾಗಿ ತಿಳಿದುಕೊಳ್ಳುವದು–(ಇವು) ಕಂಡುಬಂದಿರುತ್ತವೆ.[2] **ಇಂದ್ರ, ವಿರೋಚನ** ಮುಂತಾದವರು ಇದಕ್ಕೆ ಉದಾಹರಣೆ[3]. ಆದ್ದರಿಂದ **ಈ ಜನ್ಮದಲ್ಲಿಯೋ ಕಳೆದುಹೋಗಿರುವ ಅನೇಕ ಬೇರೆಯ ಜನ್ಮಗಳಲ್ಲಿಯೋ**[4] **ತಪಸ್ಸೇ ಮುಂತಾದವುಗಳಿಂದ ಅಂತಃಕರಣವನ್ನು ಶುದ್ಧಿಮಾಡಿಕೊಂಡಿರು ವಾತನಿಗೆ ಶ್ರವಣಮಾಡಿದಂತೆಯೇ ಜ್ಞಾನವುಂಟಾಗುತ್ತದೆ.** "ಯಾವಾತ ನಿಗೆ ದೇವನಲ್ಲಿ ಪರಭಕ್ತಿಯಿರುವದೋ ದೇವನಲ್ಲಿರುವಂತೆ ಗುರುವಿನಲ್ಲಿಯೂ (ಹೆಚ್ಚಿನ ಭಕ್ತಿಯಿರುವದೋ) ಆ ಮಹಾತ್ಮನಿಗೆ ಈ (ನಾನು) ಹೇಳಿರುವ ವಿಷಯಗಳು ಹೊಳೆ ಯುತ್ತವೆ" (ಶ್ವೇ. ೬-೨೩) ಎಂಬ **ಮಂತ್ರವರ್ಣವೂ** "ಪಾಪಕರ್ಮವು ಕ್ಷಯ ವಾಗಲು ಮನುಷ್ಯನಿಗೆ ಜ್ಞಾನವು ಹುಟ್ಟುವದು" (ಮೋ. ೨೦೪-೮) ಎಂಬ ಸ್ಮೃತಿಯೂ ಇದಕ್ಕೆ ಪ್ರಮಾಣವು.

(ಭಾಷ್ಯ)

೮೭. ಇತಿಶಬ್ದಃ ಉಪಲಕ್ಷಣತ್ವಪ್ರದರ್ಶನಾರ್ಥಃ । ಇತಿ ಏವಮಾದ್ಯನ್ಯ ದಪಿ ಜ್ಞಾನೋತ್ಪತ್ತೇರುಪಕಾರಕಮ್ "ಅಮಾನಿತ್ವಮದಮ್ಭಿತ್ವಮ್" (ಗೀ ೧೩-೭) ಇತ್ಯಾದಿ ಉಪದರ್ಶಿತಂ ಭವತಿ । ಪ್ರತಿಷ್ಠಾ ಪಾದೌ ಪಾದಾವಿವಾಸ್ಯಾಃ । ತೇಷು ಹಿ ಸತ್ಸು ಬ್ರಹ್ಮವಿದ್ಯಾ ಪ್ರವರ್ತತೇ (ಪ್ರತಿತಿಷ್ಠತಿ?) ಪದ್ಭ್ಯಾಮಿವ ಪುರುಷಃ । ವೇದಾ

---

1. ದಮವೆಂಬ ಮಾತಿನಲ್ಲಿಯೇ ಶಮವನ್ನೂ ಸೇರಿಸಿಕೊಳ್ಳಬೇಕು ಎಂದರ್ಥ.

2. ಸಂಶಯವನ್ನೂ ಇಲ್ಲಿ ಸೇರಿಸಿಕೊಳ್ಳಬೇಕು. ಅಂತಃಕರಣವು ಅಶುದ್ಧಿಯಾಗಿದ್ದರೆ ಹೇಳಿದ್ದನ್ನು ಸರಿಯಾಗಿ ತಿಳಿದುಕೊಳ್ಳುವದು ಆಗಲಾರದೆಂಬುದು ಪ್ರಸಿದ್ಧ.

3. ಇದೇ ದೃಷ್ಟಾಂತವನ್ನು ೩-ನೆಯ ಮಂತ್ರದ ಭಾಷ್ಯದಲ್ಲಿ ಕೊಟ್ಟಿರುತ್ತದೆ. ಈ ಉದಾಹರಣೆಯಲ್ಲಿ ಇಂದ್ರನು ತಿಳಿದುಕೊಂಡದ್ದಕ್ಕೆ ಇಂದ್ರನು ಬ್ರಹ್ಮಚರ್ಯವನ್ನು ಅವಲಂಬಿಸಿ ಗುರುಕುಲವಾಸಮಾಡಿದ್ದು ಕಾರಣವೆಂದೂ ವಿರೋಚನನು ಸ್ವಭಾವದೋಷದಿಂದ ಹೆಚ್ಚು ತಿಳಿದುಕೊಳ್ಳಲಾರದೆ ತಿಳಿದಷ್ಟರಿಂದ ತೃಪ್ತನಾಗಿ ಹೊರಟುಹೋದನೆಂದೂ ಹಿಂದೆಯೇ ಹೇಳಿದೆ.

4. ಚಿತ್ತಶುದ್ಧಿಯಿಂದ ಜ್ಞಾನಕ್ಕೆ ಅರ್ಹತೆಯುಂಟಾಗುವದಕ್ಕೆ ಈ ಜನ್ಮದಲ್ಲಿಯೇ ಕರ್ಮಾದಿಗಳನ್ನು ಮಾಡಿರಬೇಕೆಂಬ ನಿಯಮವಿಲ್ಲ. ಸೂ. ಭಾ. ೪-೧-೫೧, ೪-೧-೧೫, ಗೀ. ಭಾ. ೩-೪ ಇವನ್ನು ನೋಡಿರಿ.

ಶ್ಚತ್ವಾರಃ ಸರ್ವಾಣಿ ಚಾಙ್ಗಾನಿ ಶಿಕ್ಷಾದೀನಿ ಷಟ್ । ಕರ್ಮಜ್ಞಾನಪ್ರಕಾಶಕತ್ವಾದ್ವೇದಾನಾಮ್ ತದ್ರಕ್ಷಣಾರ್ಥತ್ವಾದಙ್ಗಾನಾಂ ಪ್ರತಿಷ್ಠಾತ್ವಮ್ । ಅಥವಾ ಪ್ರತಿಷ್ಠಾಶಬ್ದಸ್ಯ ಪಾದರೂಪ(ಕ) ಕಲ್ಪನಾರ್ಥತ್ವಾತ್ ವೇದಾಸ್ತ್ವಿತರಾಣಿ ಸರ್ವಾಙ್ಗಾನಿ ಶಿರಆದೀನಿ । ಅಸ್ಮಿನ್ ಪಕ್ಷೇ ಶಿಕ್ಷಾದೀನಾಂ ವೇದಗ್ರಹಣೇನೈವ ಗ್ರಹಣಂ ಕೃತಂ ಪ್ರತ್ಯೇತವ್ಯಮ್ । ಅಙ್ಗಾನಿ ಹಿ ಗೃಹೀತೇಽಙ್ಗಾನಿ ಗೃಹೀತಾನ್ಯೇವ ಭವನ್ತಿ ತದಾಯತ್ತತ್ವಾದಙ್ಗಾನಾಮ್ ॥

(ಭಾಷ್ಯಾರ್ಥ)

(ಇಲ್ಲಿ) ಇತಿ ಎಂಬದು ಉಪಲಕ್ಷಣತ್ವವನ್ನು ತೋರಿಸುವದಕ್ಕಾಗಿ (ಬಂದಿದೆ). (ಆದ್ದರಿಂದ) ಎಂಬಿವೇ ಮುಂತಾದ ಜ್ಞಾನವುಂಟಾಗುವದಕ್ಕೆ ಕಾರಣವಾಗಿರುವ 'ಅಮಾನಿತ್ವ', 'ಅದಂಭಿತ್ವ' (ಗೀ. ೧೩-೭) ಮುಂತಾದದ್ದನ್ನೂ ತೋರಿಸಿದಂತೆ ಆಗಿರುತ್ತದೆ. (ಈ ಸಾಧನಗಳು) ಪ್ರತಿಷ್ಠೆಯು ಎಂದರೆ ಪಾದಗಳು, ಈ (ಉಪನಿಷತ್ತಿಗೆ ಅವು) ಪಾದಗಳಂತಿರುವವು ಏಕೆಂದರೆ ಅವುಗಳಿದ್ದರೆ ಬ್ರಹ್ಮವಿದ್ಯೆಯು ಕಾಲುಗಳಿಂದ ಮನುಷ್ಯನು ನಿಂತುಕೊಳ್ಳುವಂತೆ ನಿಂತುಕೊಳ್ಳುತ್ತದೆ. ನಾಲ್ಕು ವೇದಗಳೂ, ಎಲ್ಲಾ ಎಂದರೆ ಶಿಕ್ಷೆಯೇ ಮುಂತಾದ ಆರು ಅಂಗಗಳೂ, (ಪ್ರತಿಷ್ಠೆಯು). ವೇದಗಳು ಕರ್ಮವನ್ನೂ ಜ್ಞಾನವನ್ನೂ ತಿಳಿಸಿಕೊಡುವದರಿಂದಲೂ ಅಂಗಗಳು ಅದನ್ನು ರಕ್ಷಣೆಮಾಡುವದಕ್ಕೆ (ಹೊರಟಿರುವದ)ರಿಂದಲೂ (ಅವು ಉಪನಿಷತ್ತಿಗೆ) ಪ್ರತಿಷ್ಠೆಯಾಗಿರುವವು. ಅಥವಾ ಪ್ರತಿಷ್ಠೆ ಎಂಬ ಶಬ್ದವನ್ನು (ಉಪಯೋಗಿಸಿರುವದು) ಪಾದವೆಂಬ ರೂಪಕವನ್ನು ಕಲ್ಪಿಸುವದಕ್ಕಾದ್ದರಿಂದ ವೇದಗಳಾದರೋ ಉಳಿದ ತಲೆಯೇ ಮುಂತಾದ ಅಂಗಗಳು ಎಂದೂ ಅರ್ಥಮಾಡಬಹುದು. ಈ ಪಕ್ಷದಲ್ಲಿ ಶಿಕ್ಷೆ ಮುಂತಾದ (ಅಂಗ)ಗಳನ್ನು ವೇದ(ವನ್ನು) ಹೇಳಿದ್ದರಿಂದಲೇ ಹೇಳಿದಂತಾಯಿತೆಂದು ತಿಳಿಯಬೇಕು. ಏಕೆಂದರೆ ಪ್ರಧಾನವಾದದ್ದನ್ನು ತೆಗೆದುಕೊಂಡರೆ (ಅದರ) ಅಂಗಗಳನ್ನೂ ತೆಗೆದುಕೊಂಡು (ಹೇಳಿ)ದಂತೆಯೇ ಆಗುವದು, ಏಕೆಂದರೆ ಅಂಗಗಳು ಆ (ಪ್ರಧಾನವಾದದ್ದರ) ಅಧೀನವಾಗಿಯೇ ಇರುತ್ತವೆ.

(ಭಾಷ್ಯ)

೮೮. ಸತ್ಯಮ್ ಆಯತನಮ್ । ಯತ್ರ ತಿಷ್ಠತ್ಯುಪನಿಷತ್ ತತ್ ಆಯತನಮ್ । ಸತ್ಯಮಿತಿ ಅಮಾಯಿತಾ ಅಕೌಟಿಲ್ಯಂ ವಾಙ್ಮನಃಕಾಯಾನಾಮ್ । ತೇಷು ಹಿ ಆಶ್ರಯತಿ ವಿದ್ಯಾ ಯೇಽಮಾಯಾವಿನಃ ಸಾಧವಃ ನಾಸುರಪ್ರಕೃತಿಷು ಮಾಯಾವಿಷು । "ನ ಯೇಷು ಜಿಹ್ಮಮನೃತಂ ನ ಮಾಯಾ ಚ" (ಪ್ರ. ೧-೧೬) ಇತಿ **ಶ್ರುತೇಃ** । ತಸ್ಮಾತ್ ಸತ್ಯಮಾಯತನಮ್ ಇತಿ ಕಲ್ಪ್ಯತೇ । ತಪ ಆದಿಷ್ವೇವ ಪತ್ರಿಷ್ಠಾತ್ವೇನ ಪ್ರಾಪ್ತಸ್ಯ ಸತ್ಯಸ್ಯ ಪುನರಾಯತನತ್ವೇನ ಗ್ರಹಣಂ ಸಾಧನಾತಿಶಯತ್ವ

ಜ್ಞಾಪನಾರ್ಥಮ್ । “ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಮ್ । ಅಶ್ವಮೇಧಸಹಸ್ರಾಚ್ಚ ಸತ್ಯಮೇಕಂ ವಿಶಿಷ್ಯತೇ ॥” (ಆದಿ. ೭೪-೧೦೩) ಇತಿ ಸ್ಮೃತೇಃ॥

(ಭಾಷ್ಯಾರ್ಥ)

ಸತ್ಯವು ಆಯತನವು. ಉಪನಿಷತ್ತು ಯಾವದರಲ್ಲಿ (ಆಶ್ರಯಿಸಿಕೊಂಡು) ಇರುವದೋ ಅದು (ಅದರ) ಆಯತನವು.[1] ಸತ್ಯವೆಂದರೆ ಮಾಯೆಯಿಲ್ಲದಿರುವಿಕೆ; ವಾಕ್ಕು, ಮನಸ್ಸು, ಶರೀರ—ಇವುಗಳಲ್ಲಿ ಕೊಂಕಿಲ್ಲದಿರುವದು. ಯಾರು ಮಾಯಾವಿಗಳಲ್ಲದ ಸಾಧುಗಳಾಗಿರುವರೋ ಅವರಲ್ಲಿಯೇ ವಿದ್ಯೆಯು ಆಶ್ರಯಿಸಿರುತ್ತದೆಯೇ ಹೊರತು ಅಸುರರ ಸ್ವಭಾವದ ಮಾಯಾವಿಗಳಲ್ಲಿ (ಇರು)ವದಿಲ್ಲ. “ಯಾರಲ್ಲಿ ವಕ್ರತೆಯೂ ಸುಳ್ಳೂ ಮಾಯೆಯೂ ಇಲ್ಲವೋ (ಅವರಿಗೇ ಈ ಬ್ರಹ್ಮಲೋಕವು[2] ಸಿಕ್ಕುವದು)”. (ಪ್ರ. ೧-೧೬) ಎಂಬ **ಶ್ರುತಿಯು** ಇದಕ್ಕೆ ಪ್ರಮಾಣವು. ಆದ್ದರಿಂದ ಸತ್ಯವು (ಉಪನಿಷತ್ತಿಗೆ) ಆಯತನವೆಂದು ಕಲ್ಪಿಸಲಾಗಿದೆ. ತಪಸ್ಸೇ ಮುಂತಾದವುಗಳು ಪ್ರತಿಷ್ಠೆ ಎಂದು (ಹೇಳಿದ್ದರಿಂದಲೇ) ಬಂದಿರುವ ಸತ್ಯವನ್ನು[3] ಮತ್ತೊಂದು ಸಲ ಆಯತನವೆಂದು ಹೇಳಿರುವದು (ಅದು) ಹೆಚ್ಚಿನ ಸಾಧನವೆಂದು ತಿಳಿಸುವದಕ್ಕೆ. “ಸಾವಿರ ಅಶ್ವಮೇಧವನ್ನೂ ಸತ್ಯವನ್ನೂ ತಕ್ಕಡಿಯಲ್ಲಿ ಇಟ್ಟರೆ ಸಾವಿರ ಅಶ್ವಮೇಧಕ್ಕಿಂತ ಸತ್ಯವೊಂದೇ ಹೆಚ್ಚಾಗುವದು” (ಆದಿ. ೭೪-೧೦೩) ಎಂಬ **ಸ್ಮೃತಿಯು** ಇದಕ್ಕೆ ಆಧಾರವು.

## ಬ್ರಹ್ಮವಿದ್ಯೆಯ ಫಲದ ಉಪಸಂಹಾರ

**ಯೋ ವಾ ಏತಾಮೇವಂ ವೇದಾಪಹತ್ಯ ಪಾಪ್ಮಾನ-**
**ಮನನ್ತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿಷ್ಠತಿ ಪ್ರತಿತಿಷ್ಠತಿ ॥ ೯ ॥**

೯. ಯಾವನೇ ಇದನ್ನು ಹೀಗೆಂದು ತಿಳಿಯುತ್ತಾನೋ (ಅವನು) ಪಾಪವನ್ನು ನಾಶಮಾಡಿಕೊಂಡು ಅನಂತವಾದ ಹೆಚ್ಚಿನ ಸ್ವರ್ಗದಲ್ಲಿ ಪ್ರತಿಷ್ಠಿತನಾಗುವನು.

(ಭಾಷ್ಯ)

೮೯. ಯೋ ವೈ ಏತಾಂ ಬ್ರಹ್ಮವಿದ್ಯಾಮ್, “ಕೇನೇಷಿತಮ್” (೧-೧) ಇತ್ಯಾದಿನಾ ಯಥೋಕ್ತಾಮ್—ಏವಂ ಮಹಾಭಾಗಾಮ್ “ಬ್ರಹ್ಮ ಹ ದೇವೇಭ್ಯಃ”

---

1. ಆಶ್ರಯಸ್ಥಾನವು, ವಾಸಸ್ಥಲವು.

2. ಇಲ್ಲಿ ಸಗುಣಬ್ರಹ್ಮವನ್ನು ಹೇಳಿದ್ದರೂ ಸಮಾನನ್ಯಾಯದಿಂದ ನಿರ್ಗುಣಕ್ಕೂ ಇದು ಹೊಂದುವದು.

3. ಇತಿ ಎಂಬ ಮಾತು ಉಪಲಕ್ಷಣವೆಂದದ್ದರಿಂದ ಸತ್ಯವೂ ಪ್ರತಿಷ್ಠೆ ಎಂದು ಮೊದಲೇ ಸಿದ್ಧವಾಗಿರುವ ಸತ್ಯವನ್ನು.

(೩-೧) ಇತ್ಯಾದಿನಾ ಸ್ತುತಾಂ ಸರ್ವವಿದ್ಯಾಪ್ರತಿಷ್ಠಾಂ ವೇದ । "ಅಮೃತತ್ವಂ ಹಿ ವಿನ್ದತೇ" (೨-೪) ಇತ್ಯುಕ್ತಮಪಿ ಬ್ರಹ್ಮವಿದ್ಯಾಫಲಮನ್ತೇ ನಿಗಮಯತಿ ಅಪಹತ್ಯ ಪಾಪ್ಮಾನಮ್ ಅವಿದ್ಯಾಕಾಮಕರ್ಮಲಕ್ಷಣಂ ಸಂಸಾರಬೀಜಂ ವಿಧೂಯ ಅನನ್ತೇ ಅಪರ್ಯನ್ತೇ ಸ್ವರ್ಗೇ ಲೋಕೇ ಸುಖಾತ್ಮಕೇ ಬ್ರಹ್ಮಣಿ ಇತ್ಯೇತತ್ । ಅನನ್ತೇ ಇತಿ ವಿಶೇಷಣಾನ್ನ ತ್ರಿವಿಷ್ಟಪೇ । ಅನನ್ತಶಬ್ದ ಔಪಚಾರಿಕೋಽಪಿ ಸ್ಯಾತ್ ಇತ್ಯತ ಆಹ– "ಜ್ಯೇಯೇ" ಇತಿ । ಜ್ಯೇಯೇ ಜ್ಯಾಯಸಿ ಸರ್ವಮಹತ್ತರೇ ಸ್ವಾತ್ಮನಿ ಮುಖ್ಯೇ ಏವ ಪ್ರತಿತಿಷ್ಠತಿ । ನ ಪುನಃ ಸಂಸಾರಮಾಪದ್ಯತ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಯಾವನೇ ಆಗಲಿ ಈ ಬ್ರಹ್ಮವಿದ್ಯೆಯನ್ನು "ಕೇನೇಷಿತಮ್" (ಯಾರ ಇಷ್ಟದಂತೆ) (೧-೧) ಎಂದು ಮುಂತಾಗಿರುವ ಗ್ರಂಥಭಾಗದಿಂದ ಈವರೆಗೆ ಹೇಳಿರುವ ಇಂಥ[1] ಮಹತ್ತಿನದಾದ, "ಬ್ರಹ್ಮ ಹ ದೇವೇಭ್ಯಃ" (ಬ್ರಹ್ಮವು ದೇವತೆಗಳಿಗೆ ಜಯಿಸಿತು) (೩-೧) ಎಂದು ಮುಂತಾಗಿರುವ ಗ್ರಂಥಭಾಗದಿಂದ ಹೊಗಳಿರುವ[2] ಸರ್ವ ವಿದ್ಯೆಗಳಿಗೂ ಆಶ್ರಯವಾಗಿರುವ[3] (ಈ ವಿದ್ಯೆಯನ್ನು) ತಿಳಿದುಕೊಳ್ಳುವನೋ ಅವನು "ಏಕೆಂದರೆ ಆಗ ಅಮೃತತ್ವವನ್ನು ಪಡೆಯುತ್ತಾನೆ" (೨-೪) ಎಂದು ಬ್ರಹ್ಮವಿದ್ಯೆಯ ಫಲವನ್ನು ಮೊದಲೇ ಹೇಳಿದ್ದರೂ (ಗ್ರಂಥದ) ಕೊನೆಯಲ್ಲಿ ಅದನ್ನು (ಮತ್ತೊಮ್ಮೆ) ಮಂತ್ರವು ಉಪಸಂಹಾರಮಾಡಿ[4] ಹೇಳುತ್ತದೆ. ಪಾಪವನ್ನು ಹೋಗಲಾಡಿಸಿಕೊಂಡು ಎಂದರೆ **ಅವಿದ್ಯಾಕಾಮಕರ್ಮವೆಂಬ ಸಂಸಾರಬೀಜವನ್ನು ತೊಲಗಿಸಿಕೊಂಡು**[5] ಅನಂತವಾದ ಕೊನೆಗಾಣದ ಸ್ವರ್ಗಲೋಕದಲ್ಲಿ ಎಂದರೆ ಸುಖರೂಪ

---

1. ಆಗಮೋಪದೇಶವಿಲ್ಲದೆ ತಿಳಿಯತಕ್ಕದ್ದಲ್ಲದ, ತಿಳಿದರೆ ಹೆಚ್ಚಿನ ಫಲವನ್ನು ಕೊಡುವ.

2. ಆತ್ಮಜ್ಞಾನವನ್ನು ಹೊಗಳುವದಕ್ಕೇ ಈ ಅರ್ಥವಾದವನ್ನು ಕೊಟ್ಟಿರುತ್ತದೆ. ಇದು ವಿದ್ಯಮಾನಾರ್ಥವಾದ, ಎಂದರೆ ಬ್ರಹ್ಮದಲ್ಲಿರುವದನ್ನೇ ಹೊಗಳಿರುವದು.

3. ಮು. ೧-೧-೧ರ ಸೂಚನೆ.

4. ಉಪಕ್ರಮದಲ್ಲಿ "ಅಮೃತಾ ಭವನ್ತಿ" (ಅಮೃತರಾಗುವರು) ಎಂದಿರುವದನ್ನು ನಡುವೆ "ಅಮೃತತ್ವಂ ಹಿ ವಿನ್ದತೇ" (ಅಮೃತತ್ವವನ್ನು ಪಡೆದುಕೊಳ್ಳುತ್ತಾನಲ್ಲವೆ) ಎಂದು ಹೇಳಿರುವದಲ್ಲದೆ ಉಪಸಂಹಾರದಲ್ಲಿಯೂ ಹೇಳಿರುವದರಿಂದ ಜ್ಞಾನದಿಂದ ಮುಕ್ತಿ ಎಂಬುದೇ ಉಪನಿಷತ್ತಿನ ಪರಮತಾತ್ಪರ್ಯವೆಂದು ಸಿದ್ಧವಾಗುತ್ತದೆ.

5. ಪಾಪವನ್ನು ಧರ್ಮದಿಂದ ತೊಲಗಿಸಿಕೊಂಡವರು ಸ್ವರ್ಗಲೋಕಕ್ಕೆ ಹೋಗುವರು; ಸಂಸಾರಕ್ಕೆ ಕಾರಣವಾಗಿರುವ ಅವಿದ್ಯಾಕಾಮಕರ್ಮವೆಂಬ ಪಾಪವನ್ನು ಜ್ಞಾನದಿಂದ ತೊಲಗಿಸಿಕೊಂಡವರು ಪರಮಾತ್ಮರೂಪವಾದ ಮುಕ್ತಿಯನ್ನು ಪಡೆಯುವರು ಎಂದು ಭಾವ.

ವಾದ ಬ್ರಹ್ಮದಲ್ಲಿ[1] ಎಂದರ್ಥ ; ಮೂರನೆಯ ಲೋಕದಲ್ಲಿ ಎಂದರ್ಥವಲ್ಲ, ಏಕೆಂದರೆ "ಅನಂತವಾದ" ಎಂಬ ವಿಶೇಷಣವನ್ನು (ಇಲ್ಲಿ) ಕೊಟ್ಟಿರುತ್ತದೆ.[2] ಅನಂತವೆಂಬ ಮಾತು ಉಪಚಾರಕ್ಕೂ[3] ಬಂದಿರಬಹುದು ಎಂದಾರೆಂದು "ಹೆಚ್ಚಿನ" ಎಂದು ಹೇಳಿರುತ್ತದೆ. ಹೆಚ್ಚಿನ ಎಂದರೆ ಮಿಗಿಲಾದ ಎಲ್ಲಕ್ಕೂ ಹೆಚ್ಚಿನ ಮುಖ್ಯನೇ ಆದ ತನ್ನ ಆತ್ಮನಲ್ಲಿ[4] ನೆಲೆನಿಲ್ಲುವನು, ಮತ್ತೆ ಸಂಸಾರವನ್ನು ಹೊಂದುವದಿಲ್ಲ ಎಂದರ್ಥ.

---

1. ಬ್ರಹ್ಮವನ್ನೂ ಲೋಕವೆಂದು ಕರೆಯುವದುಂಟು. ಛಾ. ಭಾ. ೮-೩-೨ ಬೃ. ಭಾ. ೪-೪-೨೩, ಸೂ. ಭಾ. ೧-೩-೧೫ ನೋಡಿ.

2. ಇಲ್ಲಿ ಸ್ವರ್ಗಲೋಕಕ್ಕೆ ಹೋಗುತ್ತಾನೆಂದಿದ್ದರೂ ಸ್ವರ್ಗವು ಅನಂತವಾಗಲಾರದಾದ್ದರಿಂದ ಬ್ರಹ್ಮವನ್ನು ಪಡೆಯುತ್ತಾನೆಂದೇ ಅರ್ಥವನ್ನು ಮಾಡಬೇಕು_ಎಂದು ಭಾವ.

3. ಉಳಿದದ್ದಕ್ಕೆ ಹೋಲಿಸಿದರೆ ಬ್ರಹ್ಮಲೋಕವು ಬಹುಕಾಲ ಎಂದರೆ ಒಂದು ಕಲ್ಪವು ಮುಗಿದಿರುವವರೆಗೆ ಇರುತ್ತದೆ. ಅದ್ದರಿಂದ ಅದನ್ನು ಅನಂತವೆಂದು ಉಪಚಾರಕ್ಕೆ ಕರೆದಿರಬಹುದಲ್ಲ !_ಎಂಬ ಶಂಕೆಗೆ ಪರಿಹಾರವಿದು.

4. ಪ್ರತ್ಯಗಾತ್ಮರೂಪವಾದ ಪರಬ್ರಹ್ಮದಲ್ಲಿ,



ಶಾಂಕರ ವಾಕ್ಯಭಾಷ್ಯೋಪೇತ

# ಕೇನೋಪನಿಷತ್ತು

## ಭಾಷ್ಯಕಾರರ ಅವತರಣಿಕೆ

### ಹಿಂದಿನ ಗ್ರಂಥಕ್ಕೂ ಈ ಉಪನಿಷತ್ತಿಗೂ ಸಂಬಂಧ

(ಭಾಷ್ಯ)

೯೦. ಸಮಾಪ್ತಂ ಕರ್ಮಾತ್ಮಭೂತಪ್ರಾಣವಿಷಯಂ ವಿಜ್ಞಾನಮ್, ಕರ್ಮ ಚಾನೇಕಪ್ರಕಾರಮ್ । ಯಯೋರ್ವಿಕಲ್ಪಸಮುಚ್ಚಯಾನುಷ್ಠಾನಾದ್ ದಕ್ಷಿಣೋತ್ತರಾಭ್ಯಾಂ ಸೃತಿಭ್ಯಾಮ್ ಆವೃತ್ತ್ಯನಾವೃತ್ತೀ ಭವತಃ । ಅತ ಊರ್ಧ್ವಂ ಫಲಂ ನಿರಪೇಕ್ಷಜ್ಞಾನಕರ್ಮಸಮುಚ್ಚಯಾನುಷ್ಠಾನಾತ್ ಕೃತಾತ್ಮಸಂಸ್ಕಾರಸ್ಯ ಉಚ್ಛಿನ್ನಾತ್ಮಜ್ಞಾನಪ್ರತಿಬನ್ಧಕಸ್ಯ ದ್ವೈತವಿಷಯದೋಷದರ್ಶಿನೋ ನಿರ್ಜ್ಞಾತಾಶೇಷಬಾಹ್ಯವಿಷಯತ್ವಾತ್ ಸಂಸಾರಬೀಜಮುಚ್ಚಿಚ್ಛಿತ್ಸತಃ ಪ್ರತ್ಯಗಾತ್ಮವಿಷಯಜಿಜ್ಞಾಸೋಃ "ಕೇನೇಷಿತಮ್" ಇತ್ಯಾತ್ಮಸ್ವರೂಪತತ್ತ್ವವಿಜ್ಞಾನಾಯ ಅಯಮಧ್ಯಾಯ ಆರಭ್ಯತೇ । ತೇನ ಚ ಮೃತ್ಯುಪದಮಜ್ಞಾನಮುಚ್ಛೇತ್ತವ್ಯಂ ತತ್ತನ್ತ್ರೋ ಹಿ ಸಂಸಾರೋ ಯತಃ । ಅನಧಿಗತತ್ವಾದಾತ್ಮನೋ ಯುಕ್ತಾ ತದಧಿಗಮಾಯ ತದ್ವಿಷಯಾ ಜಿಜ್ಞಾಸಾ ॥

(ಭಾಷ್ಯಾರ್ಥ)

ಕರ್ಮಕ್ಕೆ ಆತ್ಮಭೂತನಾಗಿರುವ ಪ್ರಾಣನ ವಿಷಯವಾದ ಉಪಾಸನೆಯೂ ಬಹುಪ್ರಕಾರವಾದ ಕರ್ಮವೂ ಮುಗಿಯಿತು. ಇವೆರಡನ್ನೂ ಬಿಡಿಸಿ ಮತ್ತು ಒಟ್ಟುಗೂಡಿಸಿಕೊಂಡು ಅನುಷ್ಠಾನಮಾಡುವದರಿಂದ ದಕ್ಷಿಣ ಮತ್ತು ಉತ್ತರ ಮಾರ್ಗಗಳಿಂದ ಹೋಗಿಬರುವದೂ ಹಿಂತೆರಳದಿರುವದೂ ಆಗುತ್ತವೆ. ಇನ್ನು ಮೇಲೆ ಫಲವನ್ನು ಬಯಸದೆ ಜ್ಞಾನಕರ್ಮಗಳೆರಡನ್ನೂ ಒಟ್ಟುಗೂಡಿಸಿ ಅನುಷ್ಠಾನಮಾಡಿದರಿಂದ ಆತ್ಮಸಂಸ್ಕಾರವನ್ನು ಹೊಂದಿ ಆತ್ಮಜ್ಞಾನದ ಅಡ್ಡಿಯನ್ನು ನಾಶಮಾಡಿಕೊಂಡು ದ್ವೈತದ ವಿಷಯದ ದೋಷಗಳನ್ನು ಕಂಡುಕೊಂಡು ಹೊರಗಿನ ವಿಷಯಗಳನ್ನೆಲ್ಲ ಸಂಪೂರ್ಣವಾಗಿ ಅರಿತುಕೊಂಡಿರುವದರಿಂದ ಸಂಸಾರಬೀಜವನ್ನು ನಾಶಮಾಡಬೇಕೆಂಬಿಚ್ಛೆಯಿಂದ ಪ್ರತ್ಯಗಾತ್ಮನೆಂಬ ವಿಷಯವನ್ನು ತಿಳಿಯಬೇಕೆಂದು ಬಯಸುತ್ತಿರುವಾತನಿಗೆ ಆತ್ಮಸ್ವರೂಪದ ತಿಳಿವಳಿಕೆಗಾಗಿ 'ಕೇನೇಷಿತಮ್' ಎಂಬ ಈ ಅಧ್ಯಾಯವನ್ನು ಪ್ರಾರಂಭಿಸಿರುತ್ತದೆ. ಅದರಿಂದ ಮೃತ್ಯುವಿಗೆ ಕಾರಣವಾಗಿರುವ ಅಜ್ಞಾನವನ್ನು ನಾಶ

ಮಾಡಿಕೊಳ್ಳಬೇಕಾಗಿರುತ್ತದೆ; ಏಕೆಂದರೆ ಸಂಸಾರವು ಆ (ಅಜ್ಞಾನಕ್ಕೆ) ಅಧೀನವಾಗಿರುತ್ತದೆ. ಆತ್ಮನನ್ನು (ಇನ್ನೂ) ಅರಿತುಕೊಳ್ಳದೆ ಇರುವದರಿಂದ ಅವನನ್ನು ಅರಿತುಕೊಳ್ಳುವದಕ್ಕಾಗಿ ಇಚ್ಛಿಸುವದು ಯುಕ್ತವಾಗಿರುತ್ತದೆ.

## ಕರ್ಮಕ್ಕೂ ಜ್ಞಾನಕ್ಕೂ ವಿರೋಧ

(ಭಾಷ್ಯ)

೯೧. ಕರ್ಮವಿಷಯೇ ಚಾನುಕ್ತಿಸ್ತದ್ವಿರೋಧಿತ್ವಾತ್ । ಅಸ್ಯ ವಿಜಿಜ್ಞಾಸಿತವ್ಯಸ್ಯ ಆತ್ಮತತ್ತ್ವಸ್ಯ ಕರ್ಮವಿಷಯೇಽವಚನಮ್ । ಕಸ್ಮಾದಿತಿ ಚೇತ್ । ಆತ್ಮನೋ ಹಿ ಯಥಾವದ್ ವಿಜ್ಞಾನಂ ಕರ್ಮಣಾ ವಿರುಧ್ಯತೇ । ನಿರತಿಶಯಬ್ರಹ್ಮಸ್ವರೂಪೋ ಹ್ಯಾತ್ಮಾ ವಿಜಿಜ್ಞಾಪಯಿಷಿತಃ । "ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮ್ ......" (೧-೪) ಇತ್ಯಾದಿಶ್ರುತೇಃ । ನ ಹಿ ಸ್ವಾರಾಜ್ಯೇಽಭಿಷಿಕ್ತೋ ಬ್ರಹ್ಮತ್ವಂ ಗಮಿತಃ ಕಞ್ಚನ ನಮಿತುಮಿಚ್ಛತಿ * । ಅತೋ ಬ್ರಹ್ಮಾಸ್ಮೀತಿ ಸಮ್ಬುದ್ಧೋ ನ ಕರ್ಮ ಕಾರಯಿತುಂ ಶಕ್ಯತೇ । ನ ಹ್ಯಾತ್ಮಾನಮ್ ಅವಾಪ್ತಾರ್ಥಂ ಬ್ರಹ್ಮ ಮನ್ಯಮಾನಃ ಪ್ರವೃತ್ತಿಂ ಪ್ರಯೋಜನವತೀಂ ಪಶ್ಯತಿ । ನ ಚ ನಿಷ್ಪ್ರಯೋಜನಾ ಪ್ರವೃತ್ತಿಃ । ಅತೋ ವಿರುಧ್ಯತ ಏವ ಕರ್ಮಣಾ ಜ್ಞಾನಮ್ । ಅತಃ ಕರ್ಮವಿಷಯೇಽನುಕ್ತಿಃ । ವಿಜ್ಞಾನವಿಶೇಷವಿಷಯೈವ ಜಿಜ್ಞಾಸಾ ॥

(ಭಾಷ್ಯಾರ್ಥ)

ಕರ್ಮವಿಷಯದಲ್ಲಿ (ಇದನ್ನು) ಹೇಳದೆ ಇರುವದೇಕೆಂದರೆ ಅದಕ್ಕೆ ವಿರುದ್ಧವಾಗಿರುವದರಿಂದ. (ಇಲ್ಲಿ) ಅರಿತುಕೊಳ್ಳಬೇಕೆಂದು ಬಯಸುವ ಆತ್ಮತತ್ತ್ವವನ್ನು ಕರ್ಮವಿಷಯದಲ್ಲಿ ಹೇಳಿರುವದಿಲ್ಲ. ಏತಕ್ಕೆಂದರೆ ಆತ್ಮನ ಯಥಾರ್ಥಜ್ಞಾನವು ಕರ್ಮಕ್ಕೆ ವಿರುದ್ಧವಾಗಿರುತ್ತದೆ. ಮಿಗಿಲಿಲ್ಲದ ಬ್ರಹ್ಮದ ಸ್ವರೂಪನಾಗಿರುವನೆಂದಲ್ಲವೆ, ಆತ್ಮನನ್ನು (ಇಲ್ಲಿ) ತಿಳಿಸಿಕೊಡಬೇಕೆಂದಿರುವದು? "ಅದನ್ನೇ ಬ್ರಹ್ಮವೆಂದು ತಿಳಿ, (ಇದು ಎಂದು ಉಪಾಸನೆಮಾಡುವ) ಇದಲ್ಲ" (೧-೪) ಎಂದು ಮುಂತಾಗಿರುವ ಶ್ರುತಿಯು ಇದಕ್ಕೆ ಪ್ರಮಾಣವು. ಸ್ವಾರಾಜ್ಯದಲ್ಲಿ ಅಭಿಷಿಕ್ತನಾಗಿ ಬ್ರಹ್ಮವನ್ನು ಪಡೆದಿರುವಾತನು ಯಾರಿಗೂ ತಲೆಬಾಗುವದಕ್ಕೆ ಇಚ್ಛಿಸುವದಿಲ್ಲವಷ್ಟೆ. ಆದ್ದರಿಂದ 'ಬ್ರಹ್ಮವಾಗಿರುವೆನು' ಎಂದು ಚೆನ್ನಾಗಿ ತಿಳಿದುಕೊಂಡಿರುವಾತನನ್ನು ಕರ್ಮವನ್ನು ಮಾಡಿಸುವದು ಆಗಲಾರದು. ತಾನು ಪಡೆಯಬೇಕಾದದ್ದೆಲ್ಲವನ್ನೂ ಪಡೆದುಕೊಂಡಿರುವ ಬ್ರಹ್ಮವೆಂದು ಭಾವಿಸಿಕೊಂಡಿರುವಾತನು (ಕರ್ಮದಲ್ಲಿ) ಪ್ರವೃತ್ತಿಯು

---

* ಹೀಗೆ ಗುರುತುಮಾಡಿರುವ ರೂಪಗಳು ವ್ಯಾಕರಣಕ್ಕೆ ಸಮ್ಮತವಲ್ಲ.

ಪ್ರಯೋಜನವುಳ್ಳದ್ದೆಂದು ತಿಳಿಯಲಾರನಷ್ಟೆ. ಯಾವ ಪ್ರಯೋಜನವಿಲ್ಲದೆ ಪ್ರವೃತ್ತಿಯೂ ಆಗುವದಿಲ್ಲ. ಆದ್ದರಿಂದ ಕರ್ಮವು ಜ್ಞಾನಕ್ಕೆ ವಿರುದ್ಧವೇ. ಆದ್ದರಿಂದ ಕರ್ಮ ವಿಷಯದಲ್ಲಿ (ಆತ್ಮತತ್ತ್ವವನ್ನು) ಹೇಳಲಿಲ್ಲ. (ಇಲ್ಲಿ) ಈ ವಿಶೇಷವಾದ ತಿಳಿವಳಿಕೆಗಾಗಿಯೇ ಜಿಜ್ಞಾಸೆಯುಂಟಾಗುತ್ತದೆ.

## ಕರ್ಮಜ್ಞಾನವು ಸಂಸ್ಕಾರಾರ್ಥವಾಗಿರಬೇಕು

(ಭಾಷ್ಯ)

೯೨. ಕರ್ಮಾನಾರಮ್ಭ ಇತಿ ಚೇತ್ । ನ । ನಿಷ್ಕಾಮಸ್ಯ ಸಂಸ್ಕಾರಾರ್ಥತ್ವಾತ್ । ಯದಿ ಹಿ ಆತ್ಮವಿಜ್ಞಾನೇನ ಆತ್ಮಾವಿದ್ಯಾವಿಷಯತ್ವಾತ್ಪರಿತಿತ್ಯಾಜಯಿಷಿತಂ ಕರ್ಮ ತತಃ " ಪ್ರಕ್ಷಾಲನಾದ್ಧಿ ಪಙ್ಕಸ್ಯ ದೂರಾದಸ್ಪರ್ಶನಂ ವರಮ್ " (?) ಇತ್ಯನಾರಮ್ಭ ಏವ ಕರ್ಮಣಃ ಶ್ರೇಯಾನ್, ಅಲ್ಪಫಲತ್ವಾತ್, ಆಯಾಸಬಹುಲತ್ವಾತ್, ತತ್ತ್ವಜ್ಞಾನಾದೇವ ಚ ಶ್ರೇಯಃಪ್ರಾಪ್ತೇಃ—ಇತಿ ಚೇತ್ । ಸತ್ಯಮೇತತ್ । ಅವಿದ್ಯಾವಿಷಯಂ ಕರ್ಮ ಅಲ್ಪಫಲತ್ವಾದಿದೋಷವದ್ ಬನ್ಧರೂಪಂ ಚ ಸಕಾಮಸ್ಯ । " ಕಾಮಾನ್ ಯಃ ಕಾಮಯತೇ " (ಮು. ೩-೨-೨), " ಇತಿ ನು ಕಾಮಯಮಾನಃ " (ಬೃ. ೪-೪-೬) ಇತ್ಯಾದಿಶ್ರುತಿಭ್ಯಃ । ನ ನಿಷ್ಕಾಮಸ್ಯ । ತಸ್ಯ ತು ಸಂಸ್ಕಾರಾರ್ಥಾನ್ಯೇವ ಕರ್ಮಾಣಿ ಭವನ್ತಿ ತನ್ನಿರ್ವರ್ತಕಾಶ್ರಯಪ್ರಾಣವಿಜ್ಞಾನಸಹಿತಾನಿ । " ದೇವಯಾಜೀ ಶ್ರೇಯಾನಾತ್ಮಯಾಜೀ ವಾ " ಇತ್ಯುಪಕ್ರಮ್ಯ ಆತ್ಮಯಾಜೀ ತು ಕರೋತಿ " ಇದಂ ಮೇಽನೇನಾಙ್ಗಂ ಸಂಸ್ಕ್ರಿಯತೇ '' (ಶತ.) ಇತಿ ಸಂಸ್ಕಾರಾರ್ಥಮೇವ ಕರ್ಮಾಣೀತಿ **ವಾಜಸನೇಯಕೇ** । " ಮಹಾಯಜ್ಞೈಶ್ಚ ಯಜ್ಞೈಶ್ಚ ಬ್ರಾಹ್ಮೀಯಂ ಕ್ರಿಯತೇ ತನುಃ " (ಮನು. ೨-೨೮) " ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥" (ಗೀ. ೧೮-೫) ಇತ್ಯಾದಿ ಸ್ಮೃತೇಶ್ಚ । ಪ್ರಾಣಾದಿವಿಜ್ಞಾನಂ ಚ ಕೇವಲಂ ಕರ್ಮಸಮುಚ್ಚಿತಂ ವಾ ಸಕಾಮಸ್ಯ ಪ್ರಾಣಾತ್ಮಪ್ರಾಪ್ತ್ಯರ್ಥಮೇವ ಭವತಿ । ನಿಷ್ಕಾಮಸ್ಯ ತು ಆತ್ಮಜ್ಞಾನಪ್ರತಿಬನ್ಧನಿರ್ಮಾಷ್ಟ್ಯೈರ್ ಭವತಿ । ಆದರ್ಶನಿರ್ಮಾರ್ಜನವತ್ ॥

(ಭಾಷ್ಯಾರ್ಥ)

(ಶಂಕೆ):—(ಹಾಗಾದರೆ) ಕರ್ಮವನ್ನು ಮಾಡಬಾರದೆಂದೇ (ಆಯಿತು), ಎಂದರೆ ಹಾಗಲ್ಲ. ಏಕೆಂದರೆ ನಿಷ್ಕಾಮನಿಗೆ (ಅದು) ಸಂಸ್ಕಾರವನ್ನುಂಟುಮಾಡುತ್ತದೆ.

(ಶಂಕೆಯ ವಿವರ).—ಕರ್ಮವು ಆತ್ಮಾವಿದ್ಯೆಯ ವಿಷಯವಾಗಿರುವದರಿಂದ ಆತ್ಮಜ್ಞಾನದಿಂದ ಅದನ್ನು ಬಿಡಿಸಬೇಕೆಂಬುದೇ (ಶ್ರುತಿಯ) ಇಷ್ಟವಾಗಿದ್ದರೆ ಆಗ " ಕೆಸರನ್ನು ತೊಳೆದುಕೊಳ್ಳದೆ ಇರುವದಕ್ಕಿಂತ ದೂರದಿಂದ ಅದನ್ನು ಮುಟ್ಟದಿರು

ವದೇ ಮೇಲು "[1] ಎಂಬಂತೆ ಕರ್ಮವನ್ನು ಮಾಡದೆ ಇರುವದೇ ಮೇಲೆಂದಾಗುತ್ತದೆ. ಏಕೆಂದರೆ ಅದರ ಫಲವು ಅಲ್ಪವಾಗಿರುತ್ತದೆ, ಆಯಾಸವು ಬಹಳವಾಗಿರುತ್ತದೆ, ತತ್ತ್ವಜ್ಞಾನದಿಂದಲೇ ಮುಕ್ತಿಯು ದೊರಕುತ್ತದೆ. ಅಲ್ಲವೆ?

(ಪರಿಹಾರದ ವಿವರ):—ಇದು ನಿಜವೇ. ಅವಿದ್ಯಾವಿಷಯವಾಗಿರುವ ಕರ್ಮವು ಅಲ್ಪಫಲವೇ ಮುಂತಾದ ದೋಷಗಳುಳ್ಳದ್ದೂ, ಸಕಾಮನಿಗೆ ಬಂಧಕವಾದದ್ದೂ ಆಗಿರುತ್ತದೆ. "ಯಾವನು ಕಾಮಗಳನ್ನು ಬಯಸುವನೋ (ಅವನು ಅಲ್ಲಲ್ಲಿ ಜನಿಸುವನು)" (ಮು. ೩-೨-೨), "ಇದು ಕಾಮವುಳ್ಳವನ ವಿಷಯವು" (ಬೃ. ೪-೪-೬) ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. (ಆದರೆ) ನಿಷ್ಕಾಮನಿಗೆ (ಇದು) ಬಂಧಕವಲ್ಲ. ಅವನಿಗಾದರೆ ಕರ್ಮಗಳು ತಮ್ಮನ್ನು ಮಾಡುವದಕ್ಕೆ ಆಶ್ರಯನಾಗಿರುವ ಪ್ರಾಣನ ಉಪಾಸನೆಯೊಡಗೂಡಿದರೆ ಸಂಸ್ಕಾರವೆಂಬ ಪ್ರಯೋಜನವುಳ್ಳವೇ ಆಗಿರುತ್ತವೆ. "ದೇವಯಾಜಿಯು ಹೆಚ್ಚೊ, ಆತ್ಮಯಾಜಿಯೊ?" ಎಂದು ಉಪಕ್ರಮಿಸಿ ಆತ್ಮಯಾಜಿಯು "ನನ್ನ ಈ ಅಂಗವು ಸಂಸ್ಕಾರವಾಗುವದು" ಎಂದು ಕರ್ಮವನ್ನು ಮಾಡುತ್ತಾನೆಂಬುದಾಗಿ ಕರ್ಮಗಳು ಸಂಸ್ಕಾರಕ್ಕಾಗಿಯೇ ಎಂದು **ವಾಜಸನೇಯಕ**[2]ದಲ್ಲಿ ಹೇಳಿರುತ್ತದೆ. "ಮಹಾಯಜ್ಞಗಳಿಂದಲೂ ಯಜ್ಞಗಳಿಂದಲೂ ಈ ಶರೀರವು ಬ್ರಾಹ್ಮಶರೀರವಾಗುವದು" (ಗೀ. ೧೮-೫) ಎಂದು ಮುಂತಾಗಿ **ಸ್ಮೃತಿ**ಯೂ ಹೇಳುತ್ತದೆ "ಪ್ರಾಣನೇ ಮುಂತಾದವುಗಳ ಉಪಾಸನೆಯು ಅದನ್ನೊಂದನ್ನೇ (ಮಾಡಲಿ) ಕರ್ಮದೊಡಗೂಡಿಸಿಕೊಂಡು (ಮಾಡಲಿ) ಪ್ರಾಣಸ್ವರೂಪವನ್ನು ಪಡೆಯುವದೆಂಬ ಫಲವನ್ನೇ ಕೊಡುತ್ತದೆ. ನಿಷ್ಕಾಮನಿಗಾದರೋ ಆತ್ಮಜ್ಞಾನಕ್ಕಿರುವ ಅಡ್ಡಿಯನ್ನು ತೊಳೆಯುವದಕ್ಕೆ ಉಪಯೋಗವಾಗುತ್ತದೆ; ಕನ್ನಡಿಯನ್ನು ತೊಳೆಯುವಂತೆ (ಅದು ಅಡ್ಡಿಯನ್ನು ತೊಳೆಯುವದು).

## ಜ್ಞಾನಿಗೆ ಕರ್ಮವು ಬೇಕಿರುವದಿಲ್ಲ

(ಭಾಷ್ಯ)

೯೩. ಉತ್ಪನ್ನಾತ್ಮವಿದ್ಯಸ್ಯ ತು ಅನಾರಮ್ಭಃ। ನಿರರ್ಥಕತ್ವಾತ್। "ಕರ್ಮಣಾ ಬಧ್ಯತೇ ಜನ್ತುರ್ವಿದ್ಯಯಾ ಚ ವಿಮುಚ್ಯತೇ। ತಸ್ಮಾತ್ ಕರ್ಮ ನ ಕುರ್ವನ್ತಿ ಯತಯಃ ಪಾರದರ್ಶಿನಃ॥" (ಮೋ.ಧ. ೨೪೧-೭), "ಕ್ರಿಯಾಪಥಶ್ಚೈವ ಪುರಸ್ತಾತ್

---

1. ಇದು ಎಲ್ಲಿಯ ಶ್ಲೋಕವೋ ತಿಳಿಯದು. "ಪ್ರಕ್ಷಾಲನಾದ್ಧಿ ಪಙ್ಕಸ್ಯ ಶ್ರೇಯೋ ನ ಸ್ಪರ್ಶನಂ ನೃಣಾಮ್" (ವನ. ೨-೪೯) ಎಂಬ ಪಾಠವು ಭಾರತದಲ್ಲಿದೆ.

2. ಶತಪಥಬ್ರಾಹ್ಮಣದಲ್ಲಿ ಈ ವಾಕ್ಯವು ಯಾವ ರೂಪದಲ್ಲಿದೆ ಎಂಬುದು ತಿಳಿಯದು; ಬೃ. ಭಾ. ೩-೩ರಲ್ಲಿಯೂ ೪-೪-೨೧ರಲ್ಲಿಯೂ ಇದನ್ನು ಉದಾಹರಿಸಿದೆ.

ಸಂನ್ಯಾಸಶ್ಚ, ತಯೋಃ ಸಂನ್ಯಾಸ ಏವಾತ್ಯರೇಚಯತ್" (?), "ತ್ಯಾಗೇನೈಕೇ" (ತೈ. ನಾ. ೨೮), "ನಾನ್ಯಃ ಪನ್ಥಾ ವಿದ್ಯತೇ" (ಶ್ವೇ. ೩-೮) ಇತ್ಯಾದಿಶ್ರುತಿಭ್ಯಶ್ಚ। ನ್ಯಾಯಾಚ್ಚ। ಉಪಾಯಭೂತಾನಿ ಹಿ ಕರ್ಮಾಣಿ ಸಂಸ್ಕಾರದ್ವಾರೇಣ ಜ್ಞಾನಸ್ಯ। ಜ್ಞಾನೇನ ತ್ವಮೃತತ್ವಪ್ರಾಪ್ತಿಃ। "ಅಮೃತತ್ವಂ ಹಿ ವಿನ್ದತೇ" (೨-೪), "ವಿದ್ಯಯಾ ವಿನ್ದತೇಽಮೃತಮ್" (೨-೪)–ಇತ್ಯಾದಿಶ್ರುತಿಸ್ಮೃತಿಭ್ಯಶ್ಚ (?) ನ ಹಿ ನದ್ಯಾಃ ಪಾರಗೋ ನಾವಂ ನ ಮುಞ್ಚತಿ ಯಥೇಷ್ಟದೇಶಗಮನಂ ಪ್ರತಿ ಸ್ವಾತನ್ತ್ರ್ಯೇ ಸತಿ। ನ ಹಿ ಸ್ವಭಾವಸಿದ್ಧಂ ವಸ್ತು ಸಿಷಾಧಯಿಷತಿ ಸಾಧನೈಃ। ಸ್ವಭಾವಸಿದ್ಧಶ್ಚಾತ್ಮಾ। ತಥಾ* ನಾಪಿಪಯಿಷಿತಃ (?)। ಆತ್ಮತ್ವೇ ಸತಿ ನಿತ್ಯಾಪ್ತತ್ವಾತ್। ನಾಪಿ * ವಿಚಿಕಾರಯಿಷಿತಃ। ಆತ್ಮತ್ವೇ ಸತಿ ನಿತ್ಯತ್ವಾತ್, ಅವಿಷಯತ್ವಾತ್, ಅಮೂರ್ತತ್ವಾಚ್ಚ। ಶ್ರುತೇಶ್ಚ "ನ ವರ್ಧತೇ ಕರ್ಮಣಾ" (ಬೃ. ೪-೪-೨೩) ಇತ್ಯಾದಿ। ಸ್ಮೃತೇಶ್ಚ "ಅವಿಕಾರ್ಯೋಽಯಮುಚ್ಯತೇ" (ಗೀ. ೨-೨೫) ಇತಿ। ನ ಚ * ಸಞ್ಚಿಕೀರ್ಷಿತಃ। "ಶುದ್ಧಮಪಾಪವಿದ್ಧಮ್" (ಈ. ೮) ಇತ್ಯಾದಿಶ್ರುತಿಭ್ಯಃ। ಅನನ್ಯತ್ವಾಚ್ಚ। ಅನ್ಯೇನಾನ್ಯತ್ ಸಂಸ್ಕ್ರಿಯತೇ। ನ ಚಾತ್ಮನೋಽನ್ಯಭೂತಾ ಕ್ರಿಯಾ ಅಸ್ತಿ। ನ ಚ ಸ್ವೇನೈವಾತ್ಮನಾ ಸ್ವಮಾತ್ಮಾನಂ ಸಞ್ಚಿಕೀರ್ಷೇತ್। ನ ಚ ವಸ್ತ್ವನ್ತರಾಧಾನಂ ನಿತ್ಯ (?) ಪ್ರಾಪ್ತಿರ್ವಾ ವಸ್ತ್ವನ್ತರಸ್ಯ ನಿತ್ಯಾ। ನಿತ್ಯತ್ವಂ ಚೇಷ್ಟಂ ಮೋಕ್ಷಸ್ಯ। ಅತ ಉತ್ಪನ್ನವಿದ್ಯಸ್ಯ ಕರ್ಮಾರಮ್ಭೋಽನುಪಪನ್ನಃ ॥

(ಭಾಷ್ಯಾರ್ಥ)

ಆತ್ಮಜ್ಞಾನವುಂಟಾದವನಿಗೆ ಮಾತ್ರ ಕರ್ಮವನ್ನು ಮಾಡಬೇಕಾದದ್ದಿರುವದಿಲ್ಲ, ಏಕೆಂದರೆ (ಅವನಿಗೆ ಅವುಗಳಿಂದ) ಯಾವ ಪ್ರಯೋಜನವೂ ಇರುವದಿಲ್ಲ. "ಜೀವನು ಕರ್ಮದಿಂದ ಬದ್ಧನಾಗುತ್ತಾನೆ, ಮತ್ತು ವಿದ್ಯೆಯಿಂದ ಮುಕ್ತನಾಗುತ್ತಾನೆ; ಆದ್ದರಿಂದ ಪಾರವನ್ನು ಕಂಡ ಯತಿಗಳು ಕರ್ಮವನ್ನು ಮಾಡುವದಿಲ್ಲ" (ಮೋ. ದ. ೨೪೧-೭) ಎಂದು (ಸ್ಮೃತಿ ಇದೆ)[1]. "ಕ್ರಿಯೆಯ ಹಾದಿಯೇ ಮೊದಲನೆಯದು, ಸಂನ್ಯಾಸವೂ (ಎರಡನೆಯದು), ಅವೆರಡರಲ್ಲಿ ಸಂನ್ಯಾಸವೇ ಹೆಚ್ಚಿನದು"[2] (?) ಎಂದು, "ತ್ಯಾಗದಿಂದಲೇ ಕೆಲವರು ಅಮೃತತ್ವವನ್ನು ಪಡೆದರು" (ತೈ. ನಾ. ೨೮) "(ಅದನ್ನು ಪಡೆಯುವದಕ್ಕೆ) ಬೇರೆ ಯಾವ ಹಾದಿಯೂ ಇಲ್ಲ" (ಶ್ವೇ. ೩-೮)–ಎಂದು ಮುಂತಾದ ಶ್ರುತಿಗಳೂ ಇದಕ್ಕೆ ಪ್ರಮಾಣವು.

---

1. ಸ್ಮೃತಿಯನ್ನು ಮೊದಲು ಉದಾಹರಿಸಿ ಬಳಿಕ ಶ್ರುತಿಯನ್ನು ಏಕೆ ಉದಾಹರಿಸಿದೆಯೋ ತಿಳಿಯದು.

2. ಈ ಶ್ರುತಿಯನ್ನು ಈಶಾವಾಸ್ಯ ಭಾ, ೨ರಲ್ಲಿ ಉದಾಹರಿಸುವದನ್ನು ಇದಕ್ಕೆ ಹೋಲಿಸಿರಿ.

ಯುಕ್ತಿಯೂ (ಇದಕ್ಕೆ ಬೆಂಬಲವಾಗಿ)ರುತ್ತದೆ. ಹೇಗೆಂದರೆ: ಕರ್ಮಗಳು ಸಂಸ್ಕಾರವನ್ನುಂಟುಮಾಡುವ ಮೂಲಕ ಜ್ಞಾನಕ್ಕೆ ಸಾಧನವಾಗಿರುತ್ತವೆ; ಜ್ಞಾನದಿಂದಲಾದರೆ ಅಮೃತತ್ವವೇ ದೊರಕುತ್ತದೆ. "ಏಕೆಂದರೆ ಅಮೃತತ್ವವನ್ನು ಪಡೆದುಕೊಳ್ಳುತ್ತಾನೆ" (೨-೪), "ವಿದ್ಯೆಯಿಂದ ಅಮೃತವನ್ನು ಪಡೆಯುತ್ತಾನೆ" (೨-೪) ಎಂದು ಮುಂತಾಗಿ ಶ್ರುತಿಸ್ಮೃತಿಗಳಿವೆ.[1] ನದಿಯ ದಡವನ್ನು ಸೇರಿದವನು ತನಗೆ ಇಷ್ಟವಾದ ಸ್ಥಲಕ್ಕೆ ಹೋಗುವ ಸ್ವಾತಂತ್ರ್ಯವಿರುವಾಗ ದೋಣಿಯನ್ನು ಬಿಡುವದಿಲ್ಲವೆನ್ನಲಾಗುವದೇ ಇಲ್ಲ. ಸ್ವಭಾವಸಿದ್ಧವಾದ[2] ವಸ್ತುವನ್ನು (ಯಾವನೂ) ಸಾಧನಗಳಿಂದ ಸಂಪಾದಿಸುವದಕ್ಕೆ ಇಚ್ಛಿಸುವದಿಲ್ಲವಲ್ಲವೆ? ಆತ್ಮನು ಸ್ವಭಾವಸಿದ್ಧನೇ (ಆಗಿರುತ್ತಾನೆ). ಇದರಂತೆ (ಆತ್ಮನು) ಪಡೆಯಲಿಕ್ಕೆ ಇಚ್ಛಿಸಬೇಕಾದವನೂ ಅಲ್ಲ;[3] ಏಕೆಂದರೆ ಆತ್ಮನೇ ಆಗಿರುವದರಿಂದ (ಅವನು) ಎಂದೆಂದಿಗೂ ಪಡೆಯಲ್ಪಟ್ಟವನೇ (ಆಗಿರುತ್ತಾನೆ). ವಿಕಾರಪಡಿಸುವದಕ್ಕೆ ಇಚ್ಛಿಸಬೇಕಾದವನೂ ಅಲ್ಲ; ಏಕೆಂದರೆ ಆತ್ಮನಾಗಿರುವದರಿಂದ ನಿತ್ಯನಾಗಿರುತ್ತಾನೆ, ವಿಕಾರವಾಗದವನೂ ಆಗಿರುತ್ತಾನೆ, (ಯಾವದಕ್ಕೂ) ವಿಷಯವಲ್ಲದವನೂ ಆಗಿರುತ್ತಾನೆ, ಮೂರ್ತದ್ರವ್ಯವಲ್ಲದವನೂ ಆಗಿರುತ್ತಾನೆ. "ಕರ್ಮದಿಂದ ಹೆಚ್ಚುವದಿಲ್ಲ" (ಬೃ. ೪-೪-೨೩) ಎಂಬ ಶ್ರುತಿಯಿಂದಲೂ "ಇವನು ಯಾವ ವಿಕಾರವೂ ಇಲ್ಲದವನೆನಿಸಿರುವನು" (ಗೀ. ೨-೨೫) ಎಂಬ ಸ್ಮೃತಿಯಿಂದಲೂ (ಹೀಗೆಂದು ನಿಶ್ಚಯಿಸಬೇಕು). ಸಂಸ್ಕಾರಮಾಡಬೇಕೆಂದು ಇಚ್ಛಿಸಬೇಕಾದವನೂ ಅಲ್ಲ; ಏಕೆಂದರೆ "ಶುದ್ಧನು, ಪಾಪದ ಹೊಡೆತವಿಲ್ಲದವನು" (ಈ. ೮) ಎಂಬುದೇ ಮುಂತಾದ ಶ್ರುತಿಗಳಿವೆ. (ತನಗಿಂತ) ಬೇರೆಯಲ್ಲವಾದ್ದರಿಂದಲೂ (ಸಂಸ್ಕಾರ್ಯನಲ್ಲ); ಬೇರೆಯಾದ(ದ್ದರಿಂದ) ಬೇರೆಯಾದದ್ದು ಸಂಸ್ಕಾರವನ್ನು ಹೊಂದುತ್ತದೆ. ಆತ್ಮನಿಗಿಂತ ಬೇರೆಯಾದ ಕರ್ಮವೇ ಇಲ್ಲ; ಹಾಗಿಲ್ಲದೆ ಆತ್ಮನು ತನ್ನಿಂದಲೇ ತನ್ನನ್ನು ಎಂದರೆ ಆತ್ಮನನ್ನು ಸಂಸ್ಕಾರವನ್ನು ಮಾಡಲು ಇಚ್ಛಿಸುವನೆಂಬುದೂ ಸರಿಯಲ್ಲ. ಮತ್ತೊಂದು ವಸ್ತುವನ್ನು ಮೇಲಿಡುವದಾಗಲಿ

---

1. ಇಲ್ಲಿ ಸ್ಮೃತಿಗಳನ್ನು ಉದಾಹರಿಸಿಯೇ ಇಲ್ಲ. "ಸ್ಮೃತಿ" ಎಂಬ ಮಾತು ಬರೆದವರ ಕೈತಪ್ಪಿನಿಂದ ಬಿದ್ದಿರಲೂಬಹುದು.

2. ಆಪ್ತಿ, ಸಂಸ್ಕಾರ—ಮುಂತಾದವು ಆತ್ಮನ ಧರ್ಮಗಳಲ್ಲವೆಂಬುದು ಪ್ರಸ್ಥಾನತ್ರಯಭಾಷ್ಯದಲ್ಲಿ ಅನೇಕವೇಳೆ ಬಂದಿದೆಯಾದರೂ ಇಲ್ಲಿ ದಡಕ್ಕನೆ ಬಂದಂತೆ ಕಾಣುತ್ತದೆ.

3. ಆಪಿಪಯಿಷಿತಃ, ವಿಚಿಕಾರಯಿಷಿತಃ—ಮುಂತಾದ ಪುಲ್ಲಿಂಗಗಳು ಹಿಂದಿನ ವಾಕ್ಯದಲ್ಲಿರುವ 'ವಸ್ತು' ಶಬ್ದಕ್ಕೆ ಹೊಂದುವಂತೆ ಇಲ್ಲ. ಆದ್ದರಿಂದ ಅಧ್ಯಾಹಾರಮಾಡಿಕೊಂಡು ಕನ್ನಡಿಸಿದೆ.

ಮತ್ತೊಂದು ವಸ್ತುವಿನ ಪ್ರಾಪ್ತಿ[1]ಯಾಗಲಿ ನಿತ್ಯವಾಗಲಾರದು. ಆದರೆ ಮೋಕ್ಷವು ನಿತ್ಯವೆಂಬುದು (ವಾದಿಗಳಿಗೆಲ್ಲ) ಬೇಕಾದದ್ದು. ಆದ್ದರಿಂದ ಜ್ಞಾನವುಂಟಾದವನಿಗೆ ಕರ್ಮವನ್ನು ಮಾಡುವದೆಂಬುದು ಹೊಂದುವದಿಲ್ಲ.

(ಭಾಷ್ಯ)

೯೪. ಅತೋ ವ್ಯಾವೃತ್ತಬಾಹ್ಯಬುದ್ಧೇರಾತ್ಮವಿಜ್ಞಾನಾಯ "ಕೇನೇಷಿತಮ್" ಇತ್ಯಾದ್ಯಾರಭ್ಯತೇ ||

(ಭಾಷ್ಯಾರ್ಥ)

ಆದ್ದರಿಂದ ಹೊರಗಿನ (ವಿಷಯಗಳಿಂದ) ಬುದ್ಧಿಯು (ಯಾವನಿಗೆ) ಹಿಂತಿರುಗಿರುವದೋ (ಅವನಿಗೆ) ಆತ್ಮನ ತಿಳಿವಳಿಕೆಯನ್ನುಂಟುಮಾಡುವದಕ್ಕಾಗಿ "ಕೇನೇಷಿತಮ್" ಮುಂತಾದ (ಉಪನಿಷತ್ತು) ಪ್ರಾರಂಭವಾಗಿರುತ್ತದೆ.



1. "ನಿತ್ಯಪ್ರಾಪ್ತಿಃ" ಎಂಬಲ್ಲಿ 'ನಿತ್ಯ' ಎಂಬ ಮಾತು ಬರೆದವರ ಕೈತಪ್ಪಿನಿಂದ ಬಿದ್ದಿರಬೇಕೆಂದು ತೋರುತ್ತದೆ.

# ಒಂದನೆಯ ಖಂಡ

## ಶಿಷ್ಯನ ಪ್ರಶ್ನೆ

**ಕೇನೇಷಿತಂ............ದೇವೋ ಯುನಕ್ತಿ ॥ ೧ ॥**

(ಭಾಷ್ಯ)

ಶಂ. ಪ್ರವೃತ್ತಿಲಿಙ್ಗಾದ್ವಿಶೇಷಾರ್ಥಃ ಪ್ರಶ್ನ ಉಪಪನ್ನಃ । ರಥಾದೀನಾಂ ಹಿ ಚೇತನಾವದಧಿಷ್ಠಿತಾನಾಂ ಪ್ರವೃತ್ತಿರ್ದೃಷ್ಟಾ ನಾನಧಿಷ್ಠಿತಾನಾಮ್ । ಮನಆದೀನಾಂ ಚ ಅಚೇತನಾನಾಂ ಪ್ರವೃತ್ತಿರ್ದೃಶ್ಯತೇ । ತದ್ಧಿ ಲಿಙ್ಗಂ ಚೇತನಾವತೋಽಧಿಷ್ಠಾತುರಸ್ತಿತ್ವೇ । ಕರಣಾನಿ ಹಿ ಮನಆದೀನಿ ನಿಯಮೇನ ಪ್ರವರ್ತನ್ತೇ । ತತ್ ನಾಸತಿ ಚೇತನಾವತ್ಯಧಿಷ್ಠಾತರಿ ಉಪಪದ್ಯತೇ । ತದ್ವಿಶೇಷಸ್ಯ ಚಾನಧಿಗಮಾತ್, ಚೇತನಾವತ್ಸಾಮಾನ್ಯೇ ಚಾಧಿಗತೇ ವಿಶೇಷಾರ್ಥಃ ಪ್ರಶ್ನ ಉಪಪದ್ಯತೇ ॥

(ಭಾಷ್ಯಾರ್ಥ)

ಪ್ರವೃತ್ತಿರೂಪವಾದ ಲಿಂಗದಿಂದ ವಿಶೇಷವಾದ ವಿಷಯದಲ್ಲಿ ಪ್ರಶ್ನೆಯನ್ನು ಮಾಡುವದು ಯುಕ್ತವಾಗಿರುತ್ತದೆ. ರಥವೇ ಮುಂತಾದ (ಅಚೇತನಗಳು) ಚೇತನಗಳ ವಶದಲ್ಲಿದ್ದುಕೊಂಡೇ ಪ್ರವರ್ತಿಸುವದು ಕಂಡುಬಂದಿದೆಯೇ ಹೊರತು, (ಚೇತನಗಳ ವಶದಲ್ಲಿಲ್ಲದೆ (ಪವರ್ತಿಸುವದು) ಕಂಡುಬಂದಿಲ್ಲ. ಮನಸ್ಸೇ ಮುಂತಾದ ಆ ಚೇತನಗಳು (ವಿಷಯಗಳಲ್ಲಿ) ಪ್ರವರ್ತಿಸುವದು ಕಾಣಬರುತ್ತಿದೆ. ಅದೇ ಅವುಗಳಿಗೆ (ಒಂದು) ಚೇತನಾವಂತವಾದ ಅಧಿಷ್ಠಾತೃವಿರಬೇಕೆಂಬುದಕ್ಕೆ ಲಿಂಗವಾಗಿರುತ್ತದೆ.[1] ಮನಸ್ಸೇ ಮುಂತಾದ ಕರಣಗಳು ನಿಯಮದಿಂದ ಪ್ರವರ್ತಿಸುತ್ತಿರುತ್ತವೆ. ಚೇತನವುಳ್ಳ ಅಧಿಷ್ಠಾತೃವಿಲ್ಲದೆ ಅದು ಹೊಂದುವಹಾಗಿಲ್ಲ.[2] ಅದರ ವಿಶೇಷರೂಪವು ತಿಳಿಯದೆ ಇರುವದರಿಂದ (ಪ್ರಶ್ನೆಯನ್ನು ಮಾಡಿರುತ್ತದೆ). ಸಾಮಾನ್ಯರೂಪದಿಂದ ಚೇತನವುಳ್ಳದ್ದಿರಬೇಕೆಂದು ಗೊತ್ತಿರುವಲ್ಲಿ (ಅದರ) ವಿಶೇಷರೂಪವನ್ನು ತಿಳಿಯುವದಕ್ಕಾಗಿ ಪ್ರಶ್ನೆಯನ್ನು ಹಾಕುವದು ಯುಕ್ತವಾಗುತ್ತದೆ.

---

1. ಹೊಗೆಯಿಂದ ಬೆಂಕಿಯನ್ನು ಅನುಮಾನಿಸುವಂತೆ ಪ್ರವೃತ್ತಿಯಿಂದ ಚೇತನವನ್ನು ಅನುಮಾನಿಸಬಹುದೆಂದು ಭಾವ.

2. ಇದು ಪುನರುಕ್ತಿಯೆಂತ ಕಾಣುತ್ತದೆ. ಮನಸ್ಸೇ ಮೊದಲಾದವುಗಳೇ ಚೇತನವಲ್ಲವೆ ?_ಎಂಬ ಶಂಕೆಗೆ ಉತ್ತರವಾಗಿ ಅವು ಕರಣವಾದದ್ದರಿಂದ ದೀಪದಂತೆ ಅಚೇತನ ಎಂದು ಉತ್ತರವನ್ನು ಕೊಡುವದಕ್ಕೆ ಈ ವಾಕ್ಯವು ಬಂದಿದೆಯೆಂದು ಟೀಕಾಕಾರರು ಹೇಳುತ್ತಾರೆ.

(ಭಾಷ್ಯ)

೯೬. ಕೇನೇಷಿತಂ ಕೇನೇಷ್ಟಂ ಕಸ್ಯೇಚ್ಛಾಮಾತ್ರೇಣ ಮನಃ ಪತತಿ ಗಚ್ಛತಿ ಸ್ವವಿಷಯೇ ನಿಯಮೇನ ವ್ಯಾಪ್ರಿಯತ ಇತ್ಯರ್ಥಃ । ಮನುತೇಽನೇನೇತಿ ವಿಜ್ಞಾನ ನಿಮಿತ್ತಮನ್ತಃಕರಣಂ ಮನಃ ಪ್ರೇಷಿತಮಿವೇತ್ಯುಪಮಾರ್ಥಃ । ನತ್ವಿಷಿತಪ್ರೇಷಿತ ಶಬ್ದಯೋರರ್ಥಾವಿಹ ಸಮ್ಭವತಃ । ನ ಹಿ ಶಿಷ್ಯಾನಿವ ಮನಆದೀನಿ ವಿಷಯೇಭ್ಯಃ ಪ್ರೇಷಯತ್ಯಾತ್ಮಾ । ವಿವಿಕ್ತನಿತ್ಯಚಿತ್ಸ್ವರೂಪತಯಾ ತು ನಿಮಿತ್ತಮಾತ್ರಂ ಪ್ರವೃತ್ತೌ ನಿತ್ಯಚಿಕಿತ್ಸಾಧಿಷ್ಠಾತೃವತ್ ॥

(ಭಾಷ್ಯಾರ್ಥ)

ಕೇನೇಷಿತಂ ಎಂದರೆ ಯಾರಿಂದ ಇಷ್ಟವಾಗಿ; ಯಾರ ಇಚ್ಛಾಮಾತ್ರದಿಂದ ಮನಸ್ಸು ತನ್ನ ವಿಷಯದಲ್ಲಿ ಬೀಳುತ್ತದೆ, ತನ್ನ ವಿಷಯದ ಕಡೆಗೆ ಹೋಗುತ್ತದೆ; ನಿಯಮವಾಗಿ ವ್ಯಾಪಾರಮಾಡುತ್ತದೆ ಎಂದರ್ಥ. ಯಾವದರಿಂದ ಮನನಮಾಡುವರೋ ಅದು ಮನಸ್ಸು–ಎಂಬ ವ್ಯುತ್ಪತ್ತಿಯಿಂದ ವಿಜ್ಞಾನಕ್ಕೆ ಕಾರಣವಾಗಿರುವ ಅಂತಃಕರಣವೇ ಮನಸ್ಸು. (ಅದು) ಪ್ರೇರಿಸಿ ಕಳುಹಿಸಲ್ಪಟ್ಟಂತೆ (ಹೋಗುತ್ತದೆ) ಎಂದು ಉಪಮಾರ್ಥವು. ಹಾಗಲ್ಲದೆ 'ಇಷಿತ', 'ಪ್ರೇಷಿತ'–ಎಂಬೀ ಎರಡು ಶಬ್ದಗಳ[1] ವಾಚ್ಯಾರ್ಥಗಳೇ (ಆದರೆ) ಇಲ್ಲಿ ಹೊಂದುವದಿಲ್ಲ ಏಕೆಂದರೆ ಶಿಷ್ಯರನ್ನು (ಗುರು ಕಳುಹಿಸುವಂತೆ) ಆತ್ಮನು ಮನಸ್ಸೇ ಮುಂತಾದವನ್ನು ವಿಷಯಗಳ ಕಡೆಗೆ ಕಳುಹಿಸುವದಿಲ್ಲ. ಆದರೆ ಬೇರೆಯಾಗಿರುವ ನಿತ್ಯಚಿತ್ಸ್ವರೂಪನಾಗಿರುವದರಿಂದ **ನಿತ್ಯನಾದ ಚಿಕಿತ್ಸೆಯ ಅಧಿಷ್ಠಾತೃವಿನಂತೆ**[2] ಪ್ರವೃತ್ತಿಯಲ್ಲಿ ನಿಮಿತ್ತಮಾತ್ರನಾಗಿರುತ್ತಾನೆ.

(ಭಾಷ್ಯ)

೯೭. ಪ್ರಾಣ ಇತಿ ನಾಸಿಕಾಭವಃ । ಪ್ರಕರಣಾತ್ । ಪ್ರಥಮತ್ವಂ ಪ್ರಚಲನ ಕ್ರಿಯಾಯಾಃ ಪ್ರಾಣನಿಮಿತ್ತತ್ವಾತ್ । ಸ್ವತೋ ವಿಷಯಾವಭಾಸಮಾತ್ರಂ ಕರಣಾನಾಂ ಪ್ರವೃತ್ತಿಃ । ಚಲಿಕ್ರಿಯಾತು ಪ್ರಾಣಸ್ಯೈವ ಮನ ಆದಿಷು । ತಸ್ಮಾತ್ ಪ್ರಾಥಮ್ಯಂ ಪ್ರಾಣಸ್ಯ । ಪ್ರೈತಿ ಗಚ್ಛತಿ ಯುಕ್ತಃ ಪ್ರಯುಕ್ತ ಇತ್ಯೇತತ್ । ವಾಚೋ ವದನಂ

---

1. ಈ ಶಬ್ದಗಳ ವಿವರವನ್ನು ಹಿಂದಿನ ಪದಭಾಷ್ಯದಲ್ಲಿ ಕೊಟ್ಟಿರುವದನ್ನು ಹೋಲಿಸಿರಿ.

2. ಈ ದೃಷ್ಟಾಂತದ ಅಭಿಪ್ರಾಯವೇನೆಂಬುದು ಸ್ಪಷ್ಟವಿಲ್ಲ. ರಾಜನೇ ಮುಂತಾದವರಿಗೆ ನಿತ್ಯವೈದ್ಯನಾದವನು ಕೊಡುವ ಔಷಧಿಯನ್ನೂ ಊಟವನ್ನೂ ಮೊದಲು ಸೇವಿಸುತ್ತಾನೆಂದು ಹೇಳುತ್ತಾರೆ. ವೈದ್ಯನು ಒಪ್ಪುವದು ರಾಜನ ಪ್ರವೃತ್ತಿಗೆ ಕಾರಣವಾಗುವಂತೆ ಸನ್ನಿಧಿಯಿಂದ ಕಾರಣವೆಂದು ಅಭಿಪ್ರಾಯವಿರಬಹುದು. ಚಕೋರಪಕ್ಷಿಯು ಹತ್ತಿರವಿರುವಮಾತ್ರದಿಂದ ಅರಸನು ಊಟದಲ್ಲಿ ಪ್ರವರ್ತಿಸುವಂತೆ ಎಂದು ಟೀಕೆಯಲ್ಲಿ ಅರ್ಥವನ್ನು ಬರೆದಿದೆ; ವಿಷಮಿಶ್ರಿತಾನ್ನವನ್ನು ಚಕೋರದ ಮುಂದೆ ಇಟ್ಟರೆ ಅದರ ಕಣ್ಣಿನ ರಂಗು ಮಾರ್ಪಡುವದೆಂದು ನಂಬಿಕೆಯುಂಟಂತೆ ಈ ದೃಷ್ಟಾಂತವು ಭಾಷ್ಯದಲ್ಲಿ ಮತ್ತೆಲ್ಲಿಯೂ ಕಾಣುವದಿಲ್ಲ.

ಕಿಂನಿಮಿತ್ತಂ ಪ್ರಾಣಿನಾಂ ಚಕ್ಷುಃ ಶ್ರೋತ್ರಯೋಶ್ಚ ಕೋ ದೇವಃ ಪ್ರಯೋಕ್ತಾ? ಕರಣಾನಾಮ್ ಅಧಿಷ್ಠಾತಾ ಚೇತನಾವಾ೯ ಯಃ ಸ ಕಿಂವಿಶೇಷಣ ಇತ್ಯರ್ಥಃ ||

(ಭಾಷ್ಯಾರ್ಥ)

ಪ್ರಾಣವೆಂದರೆ ಎಂದರೆ ನಾಸಿಕದಲ್ಲಿರುವ (ಇಂದ್ರಿಯವೆಂದು) ತಿಳಿಯಬೇಕು; ಏಕೆಂದರೆ (ಇಲ್ಲಿ ಕರಣಗಳ) ಪ್ರಕರಣವೇ[1] ಇರುತ್ತದೆ. ಪ್ರಥಮನೆಂಬ (ವಿಶೇಷಣ ವನ್ನು ಪ್ರಾಣಕ್ಕೆ ಕೊಟ್ಟಿರುವದು) ಚಲಿಸುವದೆಂಬ ಕ್ರಿಯೆಯು ಪ್ರಾಣವೆಂಬ ನಿಮಿತ್ತ ದಿಂದ ಆಗುವದರಿಂದ[2]. ಇಂದ್ರಿಯಗಳು ತಾವಾಗಿ ಪ್ರವರ್ತಿಸುವದೆಂದರೆ ವಿಷಯಗ ಳನ್ನು ಬೆಳಗುವದು ಮಾತ್ರ, ಆದರೆ ಮನಸ್ಸೇ ಮುಂತಾದವುಗಳಲ್ಲಿ ಆಗುವ ಚಲನ ಕ್ರಿಯೆಯು ಮಾತ್ರ ಪ್ರಾಣದ್ದೇ. ಆದ್ದರಿಂದ ಪ್ರಾಣವು ಪ್ರಥಮವಾಗುತ್ತದೆ. ಪ್ರೈತಿ ಎಂದರೆ ಹೋಗುತ್ತದೆ, ಯುಕ್ತಃ ಎಂದರೆ ಪ್ರೇರಿಸಲ್ಪಟ್ಟು ಎಂದು ಅಭಿಪ್ರಾಯ. ವಾಗಿಂದ್ರಿಯವು ಮಾತನಾಡುವದು ಯಾವ ನಿಮಿತ್ತದಿಂದ? ಪ್ರಾಣಿಗಳ ಚಕ್ಷುಸು ಶ್ರೋತ್ರ-ಇವೆರಡಕ್ಕೂ ಯಾವ ದೇವನು ಪ್ರೇರಕನು? ಕರಣಗಳಿಗೆ ಚೇತನಾವಂತ ನಾದ ಅಧಿಷ್ಠಾತೃವಿದಾನಲ್ಲ, ಅವನು ಯಾನ ವಿಶೇಷಣಗಳುಳ್ಳವನು? ಎಂದರ್ಥ.

## ಗುರುವಿನ ಉತ್ತರ

(ಭಾಷ್ಯ)

೯೮. "ಶ್ರೋತ್ರಸ್ಯ ಶ್ರೋತ್ರಮ್" ಇತ್ಯಾದಿಪ್ರತಿವಚನಂ ನಿರ್ವಿಶೇಷಸ್ಯ ನಿಮಿತ್ತತ್ವಾರ್ಥಮ್ । ವಿಕ್ರಿಯಾದಿವಿಶೇಷರಹಿತಸ್ಯಾತ್ಮನೋ ಮನಆದಿ ಪ್ರವೃತ್ತೌ ನಿಮಿತ್ತತ್ವಮ್ ಇತ್ಯೇತತ್ "ಶ್ರೋತ್ರಸ್ಯ ಶ್ರೋತ್ರಮ್" ಇತಿ ಪ್ರತಿವಚನಸ್ಯಾರ್ಥಃ । ಅನುಗಮಾತ್ । ತದನುಗತಾನಿ ಹಿ ಅತ್ರಾಸ್ಮಿನ್ನರ್ಥೇಽಕ್ಷರಾಣಿ ||

(ಭಾಷ್ಯಾರ್ಥ)

"ಶ್ರೋತ್ರಕ್ಕೂ ಶ್ರೋತ್ರವು" ಎಂದು ಮುಂತಾಗಿ (ಹೇಳಿರುವ ಗುರುವಿನ) ಉತ್ತರವು ನಿರ್ವಿಶೇಷನಾದ (ಆತ್ಮನಿಗೆ) ನಿಮಿತ್ತತ್ವವನ್ನು (ತಿಳಿಸುವ)ದಕ್ಕೆ. ವಿಕಾರವೇ ಮುಂತಾದ (ಯಾವ) ವಿಶೇಷವೂ ಇಲ್ಲದ ಆತ್ಮನು ಮನಸ್ಸೇ ಮುಂತಾದವುಗಳ ಪ್ರವೃತ್ತಿಗೆ ನಿಮಿತ್ತನಾಗಿರುತ್ತಾನೆ ಎಂಬುದು "ಶ್ರೋತ್ರಕ್ಕೂ ಶ್ರೋತ್ರವು" ಎಂಬ ಉತ್ತರದ ಅರ್ಥವು. ಏಕೆಂದರೆ ಅನುಗಮವಿದೆ; ಇಲ್ಲಿರುವ ಮಾತುಗಳು ಈ ಅರ್ಥ ದಲ್ಲಿಯೇ ಹೊಂದುಗೆಯಾಗುತ್ತವೆ.

---

1. ಇದು ಆತ್ಮನ ಪ್ರಕರಣವಾಗಿದೆ; ಆದ್ದರಿಂದ ಇಲ್ಲಿ ಪ್ರಕರಣವೆಂಬ ಭಾಷ್ಯಕ್ಕೆ ಕರಣ ಗಳ ಸನ್ನಿಧಿಯಿಂದ ಎಂಬ ಅರ್ಥವನ್ನು ಟೀಕೆಯಲ್ಲಿ ಬರೆದಿದೆ.

2. ಮೊದಲು ಘ್ರಾಣೇಂದ್ರಿಯವನ್ನು ಗ್ರಹಿಸಿ ಈಗ ಮತ್ತೆ ಪ್ರಾಣವನ್ನೇ ತೆಗೆದುಕೊಂಡಿರು ವದನ್ನು ಲಕ್ಷಿಸಬೇಕು. ಪದಭಾಷ್ಯವನ್ನು ಇದಕ್ಕೆ ಹೋಲಿಸಿರಿ.

(ಭಾಷ್ಯ)

೯೯. ಕಥಮ್ ? ಶೃಣೋತ್ಯನೇನೇತಿ ಶ್ರೋತ್ರಂ ತಸ್ಯ ಶಬ್ದಾವಭಾಸಕತ್ವಂ ಶ್ರೋತ್ರತ್ವಮ್ । ಶಬ್ದೋಪಲಬ್ಧೃರೂಪತಯಾ ಅವಭಾಸಕತ್ವಂ ನ ಸ್ವತಃ, ಶ್ರೋತ್ರಸ್ಯ ಅಚಿದ್ರೂಪತ್ವಾತ್ ಆತ್ಮನಶ್ಚ ಚಿದ್ರೂಪತ್ವಾತ್ । ಯತ್ ಶ್ರೋತ್ರಸ್ಯೋಪಲಬ್ಧೃತ್ವೇನಾವಭಾಸಕತ್ವಂ ತತ್ ಆತ್ಮನಿಮಿತ್ತತ್ವಾತ್ ಶ್ರೋತ್ರಸ್ಯ ಶ್ರೋತ್ರಮ್ ಇತ್ಯುಚ್ಯತೇ । ಯಥಾ ಕ್ಷತ್ರಸ್ಯ ಕ್ಷತ್ರಮ್, ಯಥಾ ವಾ ಉದಕಸ್ಯೌಷ್ಣ್ಯಮ್ ಅಗ್ನಿನಿಮಿತ್ತಮಿತಿ ದಗ್ಧುರಪ್ಯುದಕಸ್ಯ ದಗ್ಧಾಗ್ನಿರುಚ್ಯತೇ । ಉದಕಮಪಿ ಹ್ಯಗ್ನಿಸಂಯೋಗಾದಗ್ನಿರುಚ್ಯತೇ । ತದ್ವತ್ । ಅನಿತ್ಯಂ ಯತ್ಸಂಯೋಗಾದುಪಲಬ್ಧೃತ್ವಂ ತತ್ಕರಣಂ ಶ್ರೋತ್ರಾದಿ । ಉದಕಸ್ಯೇವ ದಗ್ಧೃತ್ವಂ । ಅನಿತ್ಯಂ ಹಿ ತತ್ರ ತತ್ । ಯತ್ರ ತು ನಿತ್ಯಮ್ ಉಪಲಬ್ಧೃತ್ವಮ್ ಅಗ್ನಾವಿವೌಷ್ಣ್ಯಮ್, ಸ ನಿತ್ಯೋಪಲಬ್ಧಿಸ್ವರೂಪತ್ವಾತ್ ದಗ್ಧೇವ "ಉಪಲಬ್ಧಾ" ಉಚ್ಯತೇ । ಶ್ರೋತ್ರಾದಿಷು ಶ್ರೋತೃತ್ವಾದ್ಯುಪಲಬ್ಧಿರನಿತ್ಯಾ, ನಿತ್ಯಾ ಚಾತ್ಮನಿ। ಅತಃ "ಶ್ರೋತ್ರಸ್ಯ ಶ್ರೋತ್ರಮ್" ಇತ್ಯಾದ್ಯಕ್ಷರಾಣಾಮ್ ಅರ್ಥಾನುಗಮಾತ್ ಉಪಪದ್ಯತೇ ನಿರ್ವಿಶೇಷಸ್ಯೋಪಲಬ್ಧಿಸ್ವರೂಪಸ್ಯ ಆತ್ಮನೋ ಮನಆದಿಪ್ರವೃತ್ತಿನಿಮಿತ್ತತ್ವಮ್ ಇತಿ । ಮನಆದಿಷ್ವೇವಂ ಯಥೋಕ್ತಮ್ ॥

(ಭಾಷ್ಯಾರ್ಥ)

(ಅದು) ಹೇಗೆ? (ಎಂದರೆ): ಯಾವದರಿಂದ ಕೇಳುತ್ತಾರೋ ಅದು ಶ್ರೋತ್ರವು. ಅದಕ್ಕೆ ಶಬ್ದವನ್ನು ತಿಳಿಸುವ (ಶಕ್ತಿ) ಇದೆಯಷ್ಟೆ, (ಅದೇ) ಶ್ರೋತ್ರತ್ವವು. (ಶ್ರೋತ್ರವು) ಶಬ್ದವನ್ನು ಅರಿಯುವ ರೂಪದಿಂದ (ಅದನ್ನು) ತಿಳಿಸುವದಾಗಿರುವದು ತನ್ನಿಂದಲೇ ಅಲ್ಲ, ಏಕೆಂದರೆ ಶ್ರೋತ್ರವು ಜಡವಾಗಿರುತ್ತದೆ, ಆತ್ಮನು ಚಿದ್ರೂಪನಾಗಿರುತ್ತಾನೆ.[1] ಶ್ರೋತ್ರವು (ಶಬ್ದವನ್ನು) ಅರಿಯುವದಾಗಿ (ಅದನ್ನು) ತಿಳಿಸುವ (ಶಕ್ತಿಯಿದೆಯಲ್ಲ), ಅದು ಆತ್ಮನಿಮಿತ್ತಕವಾಗಿರುವದರಿಂದ (ಆತ್ಮನು) "ಶ್ರೋತ್ರಕ್ಕೂ ಶ್ರೋತ್ರವು" ಎನ್ನಿಸಿಕೊಳ್ಳುತ್ತಾನೆ. (ಧರ್ಮವು) ಹೇಗೆ "ಕ್ಷತ್ರಕ್ಕೂ ಕ್ಷತ್ರ"ವೆನಿಸುವದೋ[2] ಹಾಗೆ. ಅಥವಾ ನೀರಿನ ಬಿಸಿಯು ಬೆಂಕಿಯ ನಿಮಿತ್ತದಿಂದಾಗಿರುವದರಿಂದ ಸುಡುವ ನೀರನ್ನು ಬೆಂಕಿಯು ಸುಡುವದು ಎಂದು ಹೇಗೆ ಹೇಳುವರೋ—ನೀರೂ ಬೆಂಕಿಯ ಸಂಯೋಗದಿಂದ ಬೆಂಕಿಯೆನಿಸುವದಷ್ಟೆ[3]—ಅದರಂತೆ ಯಾವದರ ಸಂಯೋಗದಿಂದ ಅನಿತ್ಯವಾದ 'ಉಪಲಬ್ಧೃತ್ವ' (ಅರಿಯುವಾತನ ಧರ್ಮ)

---

1. ಜಡವಾಗಿರುವ ಶ್ರೋತ್ರೇಂದ್ರಿಯಕ್ಕೆ ಶಬ್ದವನ್ನು ತಿಳಿಯುವ ಶಕ್ತಿಯಿಲ್ಲ ; ಆದ್ದರಿಂದ ಚೇತನನಾಗಿರುವ ಆತ್ಮನ ಸಂಬಂಧದಿಂದಲೇ ಅದು ಶಬ್ದವನ್ನು ತಿಳಿಯುತ್ತದೆ.

2. ಬೃ. ೧-೪-೧೪ ನೋಡಿ.

3. ಸುಡುವದೆನಿಸುವದಷ್ಟೆ ಎಂದರ್ಥ.

ವಾಗಿರುವದೋ ಅದು ಶ್ರೋತ್ರವೇ ಮುಂತಾದ ಕರಣವಾಗಿರುತ್ತದೆ. ನೀರಿನ ದಗ್ಧೃತ್ವ (ಸುಡುವ ವಸ್ತುವಿನ ಸ್ವಭಾವ)ದಂತೆಯೇ (ಇದನ್ನು ಅರಿಯಬೇಕು), ಏಕೆಂದರೆ ಅದರಲ್ಲಿ ಅದು [1] ಅನಿತ್ಯವಾಗಿರುತ್ತದೆ. ಆದರೆ ಬೆಂಕಿಯಲ್ಲಿರುವ ಬಿಸಿಯಂತೆ ಉಪಲಬ್ಧೃತ್ವವು ಎಲ್ಲಿ ನಿತ್ಯವಾಗಿರುವದೋ ಆ (ಆತ್ಮನು ನಿತ್ಯವಾಗಿ) ಸುಡುವ (ಬೆಂಕಿ)ಯಂತೆ ಯಾವಾಗಲೂ ಚಿತ್ಸ್ವರೂಪನೇ ಆಗಿರುವದರಿಂದ ಉಪಲಬ್ಧೃ (ಅರಿಯುವಾತನು) ಎನಿಸುತ್ತಾನೆ. ಶ್ರೋತ್ರವೇ ಮುಂತಾದ (ಇಂದ್ರಿಯ) ಗಳಲ್ಲಿರುವ ಶ್ರೋತೃತ್ವವೇ ಮುಂತಾದ ಅರಿವು ಅನಿತ್ಯವಾಗಿರುತ್ತದೆ, ಆತ್ಮನಲ್ಲಿ ನಿತ್ಯವಾಗಿರುತ್ತದೆ, ಆದ್ದರಿಂದ " ಶ್ರೋತ್ರಕ್ಕೂ ಶ್ರೋತ್ರವು " ಮುಂತಾದ ಮಾತುಗಳು ಅರ್ಥಕ್ಕೆ ಹೊಂದುಗೆಯಾಗಿರುವದರಿಂದ ನಿರ್ವಿಶೇಷನಾಗಿ ಉಪಲಬ್ಧಿ (ಅರಿವಿನ) ಸ್ವರೂಪವೇ ಆಗಿರುವ ಆತ್ಮನು ಮನಸ್ಸೇ ಮುಂತಾದವುಗಳ ಪ್ರವೃತ್ತಿಗೆ ನಿಮಿತ್ತವಾಗಿರುತ್ತಾನೆಂಬುದು (ಹೊಂದುತ್ತದೆ) ಮನಸ್ಸೇ ಮುಂತಾದವುಗಳ ವಿಷಯದಲ್ಲಿಯೂ ಮೇಲೆ ಹೇಳಿರುವಂತೆ(ಅರ್ಥವನ್ನು ತಿಳಿಯಬೇಕು).

(ಭಾಷ್ಯ)

೧೦೦. " ವಾಚೋ ಹ ವಾಚಮ್ ", " ಪ್ರಾಣಸ್ಯ ಪ್ರಾಣಃ " ಇತಿ ವಿಭಕ್ತಿದ್ವಯಂ ಸರ್ವತ್ರೈವ ದ್ರಷ್ಟವ್ಯಮ್ । ಕಥಮ್ ? ಪೃಷ್ಟತ್ವಾತ್ ಸ್ವರೂಪನಿರ್ದೇಶಃ । ಪ್ರಥಮಯೈವ ಚ ನಿರ್ದೇಶಃ । ತಸ್ಯ ಚ ಜ್ಞೇಯತ್ವಾತ್ ಕರ್ಮತ್ವಮಿತಿ ದ್ವಿತೀಯಾ । ಅತೋ " ವಾಚೋ ಹ ವಾಚಮ್ " " ಪ್ರಾಣಸ್ಯ ಪ್ರಾಣಃ " ಇತ್ಯಸ್ಮಾತ್ ಸರ್ವತ್ರೈವ ವಿಭಕ್ತಿದ್ವಯಮ್ ॥

(ಭಾಷ್ಯಾರ್ಥ)

" ವಾಚೋ ಹ ವಾಚಮ್ ", " ಪ್ರಾಣಸ್ಯ ಪ್ರಾಣಃ " ಎಂದು (ತೋರಿಸಿರುವ ದ್ವಿತೀಯಾಪ್ರಥಮಾ) ವಿಭಕ್ತಿಗಳೆರಡನ್ನೂ ಎಲ್ಲಾ ಕಡೆಯಲ್ಲಿಯೂ ಊಹಿಸಿಕೊಳ್ಳಬೇಕು. (ಅದು) ಹೇಗೆ? (ಎಂದರೆ). ಪ್ರಶ್ನೆಯನ್ನು ಹಾಕಿರುವದರಿಂದ ಸ್ವರೂಪವನ್ನು ತಿಳಿಸಿದೆ, (ಅದನ್ನು) ಪ್ರಥಮಾವಿಭಕ್ತಿಯಿಂದಲೇ ತಿಳಿಸಿದೆ ಮತ್ತು ಅರಿಯಲ್ಪಡತಕ್ಕದ್ದಾಗಿರುವದರಿಂದ ಕರ್ಮವಾಯಿತಾಗಿ ದ್ವಿತೀಯೆ ಬಂದಿದೆ. ಆದ್ದರಿಂದ " ವಾಚೋ ಹ ವಾಚಮ್ ", " ಪ್ರಾಣಸ್ಯ ಪ್ರಾಣಃ "- ಎಂಬ ಈ (ಪ್ರಯೋಗ) ದಿಂದ ಎಲ್ಲಾ ಕಡೆಯಲ್ಲಿಯೂ ಎರಡು ವಿಭಕ್ತಿಗಳನ್ನು [2] (ಊಹಿಸಬೇಕು).

---

1. ನೀರಿನಲ್ಲಿ ಸುಡುವಿಕೆಯು ಅನಿತ್ಯ, ಇದರಂತೆ ಕರಣದಲ್ಲಿ ಉಪಲಬ್ಧೃತ್ವವೂ ಅನಿತ್ಯ; ಇವೆರಡೂ ಮತ್ತೊಂದರ ಸಂಯೋಗದಿಂದ ಆಗಿರುತ್ತವೆ.

2. ಇಲ್ಲಿ ಪ್ರಥಮಾವಿಭಕ್ತಿಯನ್ನೇ ಎಲ್ಲಾ ಕಡೆಯಲ್ಲಿಯೂ ಇಟ್ಟುಕೊಳ್ಳಬೇಕೆಂಬ **ಪದಭಾಷ್ಯ** (೧೯) ದಲ್ಲಿ ಹೇಳಿರುವದನ್ನು ಇದಕ್ಕೆ ಹೋಲಿಸಿರಿ.

(ಭಾಷ್ಯ)

೧೧. ಯದೇತತ್ ಶ್ರೋತ್ರಾದ್ಯುಪಲಬ್ಧಿನಿಮಿತ್ತಂ "ಶ್ರೋತ್ರಸ್ಯ ಶ್ರೋತ್ರಮ್" ಇತ್ಯಾದಿಲಕ್ಷಣಂ ನಿತ್ಯೋಪಲಬ್ಧಿಸ್ವರೂಪಂ ನಿರ್ವಿಶೇಷಮಾತ್ಮ ತತ್ತ್ವಮ್, ತದ್ಬುದ್ಧ್ವಾ ಅತಿಮುಚ್ಯ ಅನವಬೋಧ ನಿಮಿತ್ತಾಧ್ಯಾರೋಪಿತಾತ್ ಬುದ್ಧ್ಯಾದಿಲಕ್ಷಣಾತ್ ಸಂಸಾರಾತ್ ಮೋಕ್ಷಣಂ ಕೃತ್ವಾ, ಧೀರಾ ಧೀಮನ್ತಃ, ಪ್ರೇತ್ಯ ಅಸ್ಮಾತ್ ಲೋಕಾತ್ ಶರೀರಾತ್ ಪ್ರೇತ್ಯ ವಿಯುಜ್ಯ ಅನ್ಯಸ್ಮಿನ್ ಅಪ್ರತಿಸನ್ಧೀಯಮಾನೇ ನಿರ್ನಿಮಿತ್ತತ್ವಾತ್ ಅಮೃತಾ ಭವನ್ತಿ । ಸತಿ ಹ್ಯಜ್ಞಾನೇ ಕರ್ಮಣಿ ಶರೀರಾನ್ತರಂ ಪ್ರತಿಸನ್ಧತೇ । ಆತ್ಮಾವಬೋಧೇತು ಸರ್ವಕರ್ಮಾರಮ್ಭನಿಮಿತ್ತಾಜ್ಞಾನವಿಪರೀತವಿದ್ಯಾಗ್ನಿವಿಪ್ಲುಷ್ಟತ್ವಾತ್ ಕರ್ಮಣಾಮಿತಿ ಅನಾರಮ್ಭೇ ಅಮೃತಾ ಏವ ಭವನ್ತಿ । ಶರೀರಾದಿಸನ್ತಾನಾವಿಚ್ಛೇದಪ್ರತಿಸನ್ಧಾನಾದ್ಯಪೇಕ್ಷಯಾ ಅಧ್ಯಾರೋಪಿತಮೃತ್ಯುವಿಯೋಗಾತ್ ಪೂರ್ವಮಪ್ಯಮೃತಾಃ ಸನ್ತೋ ನಿತ್ಯಾತ್ಮಸ್ವರೂಪತ್ವಾತ್ "ಅಮೃತಾ ಭವನ್ತಿ" ಇತ್ಯುಪಚರ್ಯತೇ ॥

(ಭಾಷ್ಯಾರ್ಥ)

ಶ್ರೋತ್ರವೇ ಮುಂತಾದವುಗಳನ್ನು ಅರಿಯುವ ನಿಮಿತ್ತದಿಂದ "ಶ್ರೋತ್ರಕ್ಕೂ ಶ್ರೋತ್ರವು" ಮುಂತಾದ ರೂಪದ ನಿತ್ಯವಾದ ಅರಿವಿನ ಸ್ವರೂಪವುಳ್ಳ ನಿರ್ವಿಶೇಷವಾದ ಈ ಆತ್ಮತತ್ತ್ವವಿದೆಯಲ್ಲ ಇದನ್ನು ಅರಿತುಕೊಂಡು, "ಬಿಟ್ಟು" ಎಂದರೆ ಅಜ್ಞಾನನಿಮಿತ್ತದಿಂದ ಕಲ್ಪಿಸಿಕೊಂಡಿರುವ ಬುದ್ಧಿಯೇ ಮುಂತಾದ ರೂಪದ ಸಂಸಾರದಿಂದ ಬಿಡುಗಡೆಯನ್ನು ಮಾಡಿಕೊಂಡು, ಧೀರರು ಎಂದರೆ ಬುದ್ಧಿವಂತರು ಈ ಲೋಕದಿಂದ ಬಿಟ್ಟು ಹೊರಟುಹೋಗಿ ಎಂದರೆ (ಈ) ಶರೀರದಿಂದ ಅಗಲಿ ನಿಮಿತ್ತವಿಲ್ಲದ್ದರಿಂದ ಮತ್ತೊಂದು (ಶರೀರವು) ಉಂಟಾಗದೆ ಇರುವದರಿಂದ ಅಮೃತರಾಗುವರು. ಅಜ್ಞಾನವು ಇದ್ದರಲ್ಲವೆ, ಕರ್ಮಗಳು ಮತ್ತೊಂದು ಶರೀರವನ್ನುಂಟು ಮಾಡುವವು? ಆತ್ಮಜ್ಞಾನವುಂಟಾದರೋ ಯಾವ ಕರ್ಮವನ್ನಾದರೂ ಮಾಡುವದಕ್ಕೆ ನಿಮಿತ್ತವಾದ ಅಜ್ಞಾನಕ್ಕೆ ವಿರುದ್ಧವಾದ ವಿದ್ಯೆಯೆಂಬ ಬೆಂಕಿಯಿಂದ ಕರ್ಮಗಳು ಸುಟ್ಟುಹೋಗಿರುವದರಿಂದ (ಕರ್ಮವನ್ನು) ಮಾಡದೆ ಇರುವದರಿಂದ ಅಮೃತರೇ ಇಗುವರು. ಶರೀರವೇ ಮುಂತಾದವುಗಳ ಪ್ರವಾಹವು ಕಡಿವಡೆಯದೆ ಇರುವದನ್ನು ಭಾವಿಸುವದರಿಂದ ಕಲ್ಪಿತವಾಗಿರುವ ಮೃತ್ಯುವನ್ನು ಅಗಲುವದರಿಂದ, ನಿತ್ಯಾತ್ಮಸ್ವರೂಪರಾದ್ದರಿಂದ ಮೊದಲೂ ಅಮೃತರೇ ಆಗಿದ್ದು, (ಈಗ ಜ್ಞಾನದಿಂದ) ಅಮೃತರಾಗುವರು ಎಂದು ಉಪಚಾರಕ್ಕೆ[1] ಹೇಳಿರುತ್ತದೆ.

1. ಮೊದಲೇ ಮುಕ್ತರಾಗಿರುವದರಿಂದ ಮತ್ತೆ ಮುಕ್ತರಾಗಬೇಕಾದದ್ದೇನೂ ಇರುವದಿಲ್ಲ. ಆದ್ದರಿಂದ ವಿದೇಹಮುಕ್ತಿಯೆಂಬುದು ಗೌಣವು.

## ನ ತತ್ರ ಚಕ್ಷುರ್ಗಚ್ಛತಿ.. .....ಯಥೈತದನುಶಿಷ್ಯಾತ್ ॥ ೩ ॥

(ಭಾಷ್ಯ)

೧೦೨. "ನ ತತ್ರ ಚಕ್ಷುರ್ಗಚ್ಛತಿ" ಇತ್ಯುಕ್ತೇಽಪಿ ಪರ್ಯನುಯೋಗೇ ಹೇತುರಪ್ರತಿಪತ್ತೇಃ । "ಶ್ರೋತ್ರಸ್ಯ ಶ್ರೋತ್ರಮ್" ಇತ್ಯಾದಿನಾ ಉಕ್ತೇಽಪ್ಯಾತ್ಮತತ್ತ್ವೇ ಅಪ್ರತಿಪನ್ನತ್ವಾತ್ ಸೂಕ್ಷ್ಮತ್ವಹೇತೋರ್ವಸ್ತುನಃ ಪುನಃಪುನಃ ಪರ್ಯನ್ಮಯುಯುಕ್ಷಾಕಾರಣಮಾಹ–ನ ತತ್ರ ಚಕ್ಷುರ್ಗಚ್ಛತೀತಿ ॥

(ಭಾಷ್ಯಾರ್ಥ)

"ಅಲ್ಲಿಗೆ ಚಕ್ಷುಸ್ಸು ಹೋಗುವದಿಲ್ಲ" ಎಂಬುದು ಹೇಳಿದಮೇಲೂ ತಿಳಿಯದೆ ಕೇಳುವದಕ್ಕೆ ಕಾರಣವು. ಶ್ರೋತ್ರಕ್ಕೂ ಶ್ರೋತ್ರವು ಎಂದು ಮುಂತಾಗಿ (ಗುರು) ಆತ್ಮತತ್ತ್ವವನ್ನು ಹೇಳಿದಮೇಲೂ (ಅದನ್ನು) ತಿಳಿದುಕೊಳ್ಳದೆ ಇರುವದರಿಂದ ವಸ್ತುವು ಸೂಕ್ಷ್ಮವಾಗಿರುವದೆಂಬ ಕಾರಣದಿಂದ ಮತ್ತೆಮತ್ತೆ ಕೇಳುವದಕ್ಕೆ ಕಾರಣವನ್ನು ಅಲ್ಲಿಗೆ ಚಕ್ಷುಸ್ಸು ಹೋಗುವದಿಲ್ಲ–ಎಂದು ಹೇಳಿರುತ್ತದೆ.

(ಭಾಷ್ಯ)

೧೦೩. ತತ್ರ ಶ್ರೋತ್ರಾದ್ಯಾತ್ಮಭೂತೇ ಚಕ್ಷುರಾದೀನಿ, ವಾಕ್ಚಕ್ಷುಷೋಃ ಸರ್ವೇನ್ದ್ರಿಯೋಪಲಕ್ಷಣಾರ್ಥತ್ವಾತ್, ನ ವಿಜ್ಞಾನಮುತ್ಪಾದಯನ್ತಿ । ಸುಖಾದಿವತ್ ತರ್ಹಿ ಗೃಹ್ಯೇತಾನ್ತಃಕರಣೇನ । ಅತ ಆಹ–ನೋ ಮನಃ । ನ ಸುಖಾದಿವನ್ಮನಸೋ ವಿಷಯಸ್ತತ್ । ಇನ್ದ್ರಿಯಾವಿಷಯತ್ವಾತ್ ॥

(ಭಾಷ್ಯಾರ್ಥ)

ಅಲ್ಲಿಗೆ ಎಂದರೆ ಶ್ರೋತ್ರವೇ ಮುಂತಾದವುಗಳ ಆತ್ಮನಾಗಿರುವ (ಬ್ರಹ್ಮದ) ಬಳಿಗೆ ಚಕ್ಷುಸ್ಸೇ ಮುಂತಾದವುಗಳು (ಹೋಗುವದಿಲ್ಲ ಎಂದರೆ) ಅರಿವನ್ನು ಉಂಟು ಮಾಡುವದಿಲ್ಲ. (ಇಲ್ಲಿ) ವಾಕ್ಕು, ಚಕ್ಷುಸ್ಸು–ಇವು ಎಲ್ಲಾ ಇಂದ್ರಿಯಗಳನ್ನೂ (ತಿಳಿಸುವ) ಉಪಲಕ್ಷಣವಾಗಿರುತ್ತವೆಯಾದ್ದರಿಂದ (ಮುಂತಾದವುಗಳು ಎಂದು ಅರ್ಥ ಮಾಡಿಕೊಳ್ಳಬೇಕು). ಹಾಗಾದರೆ ಸುಖವೇ ಮುಂತಾದವುಗಳಂತೆ ಅಂತಃಕರಣದಿಂದ ತಿಳಿಯುವದಕ್ಕೆ ಬರಬಹುದಲ್ಲ! ಎಂದರೆ (ಮಂತ್ರವು) ಹೇಳುತ್ತದೆ: ಮನಸ್ಸೂ (ಹೋಗುವ)ದಿಲ್ಲ. ಸುಖಾದಿಗಳಂತೆ ಅದು ಮನಸ್ಸಿಗೆ ವಿಷಯವಲ್ಲ. ಏಕೆಂದರೆ ಇಂದ್ರಿಯಗಳಿಗೆ (ಅದು)ವಿಷಯವಲ್ಲ.

(ಭಾಷ್ಯ)

೧೦೪. ನ ವಿದ್ಮೋ ನ ವಿಜಾನೀಮಃ, ಅನ್ತಃಕರಣೇನ । ಯಥಾ ಏತದ್ ಬ್ರಹ್ಮ ಮನಆದಿಕರಣಜಾತಮ್ ಅನುಶಿಷ್ಯಾತ್, ಅನುಶಾಸನಂ ಕುರ್ಯಾತ್, ಪ್ರವೃತ್ತಿನಿಮಿತ್ತಂ ಭವೇತ್, ತಥಾ ಅವಿಷಯತ್ವಾತ್ ನ ವಿದ್ಮೋ ನ ವಿಜಾನೀಮಃ । ಅಥವಾ ಶ್ರೋತ್ರಾದೀನಾಂ ಶ್ರೋತ್ರಾದಿಲಕ್ಷಣಂ ಬ್ರಹ್ಮ ವಿಶೇಷೇಣ ದರ್ಶಯ–ಇತ್ಯುಕ್ತ ಆಚಾರ್ಯ ಆಹ । ನ ಶಕ್ಯತೇ ದರ್ಶಯಿತುಮ್ । ಕಸ್ಮಾತ್? ನ ತತ್ರ

ಚಕ್ಷುರ್ಗಚ್ಛತಿ ' ಇತ್ಯಾದಿ ಪೂರ್ವವತ್ ಸರ್ವಮ್ । ಅತ್ರ ತು ವಿಶೇಷಃ " ಯಥೈತ ದನುಶಿಷ್ಯಾತ್ '' ಇತಿ । ಯಥೈತದನುಶಿಷ್ಯಾತ್ ಪ್ರತಿಪಾದಯೇತ್ । ಅನ್ಯೋಽಪಿ ಶಿಷ್ಯಾಯ ಇತೋಽನ್ಯೇನ ವಿಧಿನಾ–ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ನಾವು ತಿಳಿಯೆವು, ನಾವು ಅರಿಯೆವು, ಅಂತಃಕರಣದಿಂದ (ಇದನ್ನು ತಿಳಿಯೆವು) ;ಮನಸ್ಸೇ ಮುಂತಾದ ಕರಣಸಮೂಹವು ಆ ಬ್ರಹ್ಮವನ್ನು ಹೇಗೆ ತಿಳಿಸಿ ಕೊಟ್ಟೇತೋ, ಅನುಶಾಸನವನ್ನು ಮಾಡೀತೋ,[1] (ಆತ್ಮನು[2] ಹೇಗೆ ಅದಕ್ಕೆ) ಪ್ರವೃತ್ತಿನಿಮಿತ್ತವಾದಾನೋ, ಅದನ್ನು (ಹೇಳುವದಕ್ಕೆ) (ಅದು) ವಿಷಯವಲ್ಲದೆ ಇರುವದರಿಂದ ನಾವು ತಿಳಿಯೆವು ನಾವರಿಯೆವು (ಎಂದರ್ಥ). ಅಥವಾ ಶ್ರೋತ್ರಾದಿ ಗಳಿಗೂ ಶ್ರೋತ್ರಾದಿಯಾಗಿರುವ ಬ್ರಹ್ಮವನ್ನು ವಿಶೇಷರೂಪದಿಂದ ತೋರಿಸಿಕೊಡಿರಿ ಎಂದು (ಶಿಷ್ಯನು) ಕೇಳಲು ಆಚಾರ್ಯನು ಹೇಳುತ್ತಾನೆ (ಹಾಗೆ) ತೋರಿಸಿಕೊಡುವ ದಕ್ಕೆ ಆಗಲಾರದು. ಏಕೆಂದರೆ, " ಅಲ್ಲಿಗೆ ಚಕ್ಷುಸ್ಸು ಹೋಗುವದಿಲ್ಲ '' ಇವೇ ಮುಂತಾದ (ವಾಕ್ಯಗಳಿಗೆಲ್ಲ) ಹಿಂದಿನಂತೆ (ಅರ್ಥವನ್ನು ಹೇಳಬೇಕು). ಆದರೆ ಇಲ್ಲಿ " ಯಥೈದನುಶಿಷ್ಯಾತ್ '' ಎಂಬ (ಮಾತಿಗೆ ಅರ್ಥ ಹೇಳುವದರಲ್ಲಿ) ವಿಶೇಷ (ವಿದೆ) ಯಥೈದನುಶಿಷ್ಯಾತ್ ಎಂದರೆ ಬೇರೊಬ್ಬ (ಆಚಾರ್ಯ)ನಾದರೂ ಶಿಷ್ಯರಿಗೆ ಈ ಮಾರ್ಗವನ್ನು ಬಿಟ್ಟು ಹೇಗೆ ತಿಳಿಸಿಕೊಡಬಲ್ಲನೋ ನಾವರಿಯೆವು ಎಂದು ಅಭಿಪ್ರಾಯ.

## ಆತ್ಮನು ಜ್ಞಾತವೂ ಅಲ್ಲ, ಅಜ್ಞಾತವೂ ಅಲ್ಲವೆಂಬ ಆಗಮ

**ಅನ್ಯದೇವ... . ಯೇನಸ್ತದ್ವ್ಯಾಚಚಕ್ಷಿರೇ ॥ ೪ ॥**

(ಭಾಷ್ಯ)

೧೦೫ ಸರ್ವಥಾಪಿ ಬ್ರಹ್ಮ ಬೋಧಯ ಇತ್ಯುಕ್ತ ಆಚಾರ್ಯ ಆಹ " ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ " ಇತ್ಯಾಗಮಮ್ । ವಿದಿತಾವಿದಿತಾಭ್ಯಾಮ್ ಅನ್ಯತ್ । ಯೋ ಹಿ ಜ್ಞಾತಾ ಸ ಏವ ಸಃ । ಸರ್ವಾತ್ಮಕತ್ವಾತ್ । ಅತಃ ಸರ್ವಾತ್ಮನೋ ಜ್ಞಾತುರ್ಜ್ಞಾತ್ರನ್ತರಾಭಾವಾದ್ ವಿದಿತಾದನ್ಯತ್ವಮ್ । " ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ " (ಶ್ವೇ. ೩-೧೯) ಇತಿ ಚ ಮನ್ತ್ರವರ್ಣಾತ್ । " ವಿಜ್ಞಾತಾರ ಮರೇ ಕೇನ ವಿಜಾನೀಯಾತ್ ।" (ಬೃ ೨-೪-೧೪) ಇತಿ ಚ **ವಾಜಸನೇಯಕೇ** ।

---

1. ಈ ಶಬ್ದವು ಇಲ್ಲಿಗೆ ಅಷ್ಟು ಹೊಂದುವದಿಲ್ಲ.

2. ಹೀಗೆ ಅಧ್ಯಾಹಾರಮಾಡಿಕೊಳ್ಳದೆ ಈಗಿರುವಂತೆ ವಾಕ್ಯದಲ್ಲಿ ಪದಗಳು ಅನ್ವಯ ವಾಗುವಂತಿಲ್ಲ.

ಅಪಿ ಚ ವ್ಯಕ್ತಮೇವ ವಿದಿತಮ್, ತಸ್ಮಾದನ್ಯತ್, ಇತ್ಯಭಿಪ್ರಾಯಃ । ಯದ್ ವಿದಿತಂ ವ್ಯಕ್ತಂ ತದನ್ಯವಿಷಯತ್ವಾತ್ ಅಲ್ಪಮ್, ಸವಿರೋಧಮ್, ತತೋಽನಿತ್ಯಮ್, ತತ ಏವಾನೇಕತ್ವಾದಶುದ್ಧಮ್, ಅತ ಏವ ತದ್ವಿಲಕ್ಷಣಂ ಬ್ರಹ್ಮ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಯಾವ ಪ್ರಕಾರದಿಂದಾದರೂ ಬ್ರಹ್ಮವನ್ನು ತಿಳಿಸಿರಿ ಎಂದು (ಶಿಷ್ಯನು) ಕೇಳಲು ಆಚಾರ್ಯನು "ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ" ಎಂಬ ಆಗಮವನ್ನು ಹೇಳಿರುತ್ತಾನೆ. (ಅದು) ವಿದಿತ (ತಿಳಿಯಲ್ಪಟ್ಟದ್ದು) ಅವಿದಿತ (ತಿಳಿಯಲ್ಪಡದೆ ಇರುವದು)–ಇವೆರಡಕ್ಕಿಂತಲೂ ಬೇರೆ. ಹೇಗೆಂದರೆ: ಯಾವನು ಜ್ಞಾತೃವೋ ಅವನು ಅವನೇ,[1] ಏಕೆಂದರೆ (ಆತನು) ಸರ್ವರ ಆತ್ಮನಾಗಿರುತ್ತಾನೆ. ಆದ್ದರಿಂದ ಎಲ್ಲರಿಗೂ ಆತ್ಮನಾಗಿರುವ ಜ್ಞಾತೃವಿಗೆ (ಅವನನ್ನರಿಯದ) ಮತ್ತೊಬ್ಬ ಅರಿಯುವಾತನು ಇಲ್ಲದ್ದರಿಂದ (ಅವನು) ವಿದಿತಕ್ಕಿಂತಲೂ ಬೇರೆಯೆಂದಾಯಿತು. "ಆತನು ಬೇಕಾದದ್ದೆಲ್ಲವನ್ನೂ ಅರಿತುಕೊಳ್ಳುತ್ತಾನೆ, ಆತನನ್ನು ಅರಿಯುವವನು (ಬೇರೊಬ್ಬ) ನಿಲ್ಲ" (ಶ್ವೇ. ೩-೧೯) ಎಂದು **ಮಂತ್ರವರ್ಣವೂ** ಇದೆ. "ಎಲೆ, ಅರಿಯುವಾತನನ್ನು ಏತರಿಂದ ಅರಿತಾನು?" (ಬೃ. ೨-೪-೧೪) ಎಂದು **ವಾಜಸನೇಯಕ**ದಲ್ಲಿಯೂ ಇದೆ ಇದಲ್ಲದೆ ವಿದಿತವೆಂದರೆ ವ್ಯಕ್ತವಾದದ್ದೇ, ಅದಕ್ಕಿಂತ (ಬ್ರಹ್ಮವು) ಬೇರೆ ಎಂದಭಿಪ್ರಾಯ ಯಾವದು ವಿದಿತವೋ ಎಂದರೆ ವ್ಯಕ್ತವೋ ಅದು ಮತ್ತೊಂದಕ್ಕೆ ವಿಷಯವಾಗಿರುವದರಿಂದ ಅಲ್ಪವು, (ತನಗೆ) ವಿರುದ್ಧವಾದ (ಮತ್ತೊಂದು)ಳ್ಳದ್ದು. ಆದ್ದರಿಂದ ಅನಿತ್ಯವು, ಅದರಿಂದಲೇ ಅನೇಕವಾಗಿರುವದರಿಂದ ಅಶುದ್ಧವು. ಆದ್ದರಿಂದಲೇ ಅದಕ್ಕಿಂತ ಬ್ರಹ್ಮವು ಬೇರೆ ಎಂದು ಸಿದ್ಧವಾಯಿತು.

(ಭಾಷ್ಯ)

೧೦೬. ಅಸ್ತು ತರ್ಹ್ಯವಿದಿತಮ್ । ನ[1] ವಿಜ್ಞಾನಾನಪೇಕ್ಷತ್ವಾತ್ । ಯದ್ ಹಿ ಅವಿದಿತಂ ತದ್ ವಿಜ್ಞಾನಾಪೇಕ್ಷಮ್ । ಅವಿದಿತವಿಜ್ಞಾನಾಯ ಹಿ ಲೋಕಪ್ರವೃತ್ತಿಃ । ಇದಂ ತು ವಿಜ್ಞಾನಾನಪೇಕ್ಷಮ್ । ಕಸ್ಮಾತ್ ? ವಿಜ್ಞಾನಸ್ವರೂಪತ್ವಾತ್ । ನ ಹಿ ಯಸ್ಯ ಯತ್ ಸ್ವರೂಪಂ ತತ್ ತೇನ ಅನ್ಯತೋಽಪೇಕ್ಷ್ಯತೇ । ನ ಚ ಸ್ವತ ಏವಾಪೇಕ್ಷಾ । ಅನಪೇಕ್ಷಮೇವ ಸಿದ್ಧತ್ವಾತ್ । ಪ್ರದೀಪಃ ಸ್ವರೂಪಾಭಿವ್ಯಕ್ತೌ ನ ಪ್ರಕಾಶಾನ್ತರಮ್ ಅನ್ಯತೋಽಪೇಕ್ಷತೇ ಸ್ವತೋ ವಾ । ಯದ್ ಹಿ ಅನಪೇಕ್ಷಂ ತತ್ ಸ್ವತ ಏವ ಸಿದ್ಧಂ ಪ್ರಕಾಶಾತ್ಮಕತ್ವಾತ್ । ಪ್ರದೀಪಸ್ಯಾನ್ಯೋಽಪೇಕ್ಷಿತೋಽಪ್ಯನರ್ಥಕಃ ಸ್ಯಾತ್, ಪ್ರಕಾಶೇ ವಿಶೇಷಾಭಾವಾತ್ । ನ ಹಿ ಪ್ರದೀಪಸ್ಯ ಸ್ವರೂಪಾಭಿವ್ಯಕ್ತೌ

---

1. ಅವನು ಜ್ಞಾತೃವೇ, ಜ್ಞೇಯವಲ್ಲ.

ಪ್ರಕಾಶೋಽರ್ಥವಾನ್ । ನ ಚೈವಮಾತ್ಮನೋಽನ್ಯತ್ರ ವಿಜ್ಞಾನಮಸ್ತಿ । ಯೇನ ಸ್ವರೂಪವಿಜ್ಞಾನೇಽಪ್ಯಪೇಕ್ಷ್ಯೇತ ॥

(ಭಾಷ್ಯಾರ್ಥ)

ಹಾಗಾದರೆ ಅದು ಅವಿದಿತವೇ ಆಗಲಿ–ಎಂದರೆ ಹಾಗಲ್ಲ. ಏಕೆಂದರೆ ಅದಕ್ಕೆ ಅರಿವಿನ ಅಪೇಕ್ಷೆಯಿರುವದಿಲ್ಲ. ಯಾವದು ಅವಿದಿತವೋ (ತಿಳಿಯದೆ ಇರುವದೋ) ಅದಕ್ಕೆ ಅರಿವಿನ ಅಪೇಕ್ಷೆಯಿರುತ್ತದೆ. ಏಕೆಂದರೆ ಅರಿಯದೆ ಇರುವದನ್ನೇ ಅರಿಯು ವದಕ್ಕೆಂದು ಜನರು ತೊಡಗುವರು. ಆದರೆ ಇದಕ್ಕೆ ಅರಿವಿನ ಅಪೇಕ್ಷೆಯಿರುವದಿಲ್ಲ. ಏಕೆಂದರೆ (ಇದು) ಅರಿವಿನ ಸ್ವರೂಪವೇ ಆಗಿರುತ್ತದೆ. ಯಾವದಕ್ಕೆ ಯಾವದು ಸ್ವರೂಪವೇ ಆಗಿರುವದೋ ಅದು ತನಗಿಂತ ಬೇರೆಯೊಂದರಿಂದ ಅದನ್ನು ಬಯಸುವ ದಿಲ್ಲ; ತನ್ನಿಂದಲೂ (ಅದನ್ನು) ಬಯಸುವದಿಲ್ಲ,[1] ಏಕೆಂದರೆ ಯಾವದರ ಬಯ ಕೆಯೂ ಇಲ್ಲದೆಯೇ ತಾನು ಸಿದ್ಧವಾಗಿರುತ್ತದೆ. ದೀಪವು ತನ್ನ ರೂಪವನ್ನು ತೋರಿಸಿಕೊಳ್ಳುವದಕ್ಕೆ ಮತ್ತೊಂದರಿಂದ ಇನ್ನೊಂದು ಬೆಳಕನ್ನಾಗಲಿ ತನ್ನಿಂದಲೇ ಆಗಲಿ ಬಯಸುವದಿಲ್ಲ. ಯಾವದು ಮತ್ತೊಂದನ್ನು ಬಯಸುವದಿಲ್ಲವೋ ಅದು ತನ್ನಿಂದತಾನೇ ಸಿದ್ಧವಾಗಿರುತ್ತದೆ, ಏಕೆಂದರೆ (ಅದು) ಪ್ರಕಾಶರೂಪವಾಗಿರುತ್ತದೆ. ದೀಪಕ್ಕೆ[2] (ಮತ್ತೊಂದು ಬೆಳಕು) ಬೇಕೆಂದರೂ ವ್ಯರ್ಥವಾಗುವದು, ಏಕೆಂದರೆ ಬೆಳಕಿನಲ್ಲಿ ಯಾವ ವಿಶೇಷವೂ ಇರುವದಿಲ್ಲ: ದೀಪವು ತನ್ನ ಸ್ವರೂಪವನ್ನು ತೋರಿಸಿ ಕೊಳ್ಳತಕ್ಕಬಗ್ಗೆ ದೀಪದ ಬೆಳಕು ಯಾವದಾದರೂ ಪ್ರಯೋಜನವುಳ್ಳದ್ದಾಗಿರುವ ದಿಲ್ಲವಲ್ಲವೆ? ಹೀಗೆಂದು ಇಟ್ಟುಕೊಂಡರೂ[3] ಆತ್ಮನಿಗಿಂತ ಬೇರೆಯಾದ ಬೆಳಕು ಇಲ್ಲವೂ ಇಲ್ಲ, ಇದಿದ್ದರೆ[4] ತನ್ನನ್ನು ಅರಿಯುವದಕ್ಕೂ ಬೇಕೆಂದು ಹೇಳಬಹು ದಾಗಿತ್ತು.

(ಭಾಷ್ಯ)

೧೦೭. ವಿರೋಧ ಇತಿ ಚೇತ್ । ನ । ಅನ್ಯತ್ವಾತ್ । ಸ್ವರೂಪವಿಜ್ಞಾನೇ ವಿಜ್ಞಾನಸ್ವರೂಪತ್ವಾದ್ ವಿಜ್ಞಾನಾನ್ತರಂ ನಾಪೇಕ್ಷ್ಯತ ಇತ್ಯೇತದಸತ್ । ದೃಶ್ಯತೇ ಹಿ

---

1. ಆತ್ಮನು ವಿಜ್ಞಾನಸ್ವರೂಪನಾದರೂ ವಿಜ್ಞಾನವು ವಿಜ್ಞಾನವನ್ನೇ (ತನ್ನನ್ನೇ) ಬೆಳಗ ಬಹುದಲ್ಲ!–ಎಂಬ ವಿಜ್ಞಾನವಾದಿಗಳ ಶಂಕೆಗೆ ಉತ್ತರವಿದು.

2. ಇಲ್ಲಿ 'ದೀಪಕ್ಕೆ' ಎಂಬ ಮಾತು ಅನವಶ್ಯಕವೆಂದು ತೋರುವದು. ಏಕೆಂದರೆ ತಾನೇ ಪ್ರಕಾಶರೂಪವಾಗಿರುವ ವಸ್ತುವಿಗೆ ತನ್ನನ್ನು ಬೆಳಗುವ ಮತ್ತೊಂದು ಬೆಳಕಿನ ಬಯಕೆ ಬೇಕಿಲ್ಲ; ಬೇಕೆಂದರೂ ಅದು ವ್ಯರ್ಥವೂ ಆಗಮುದು–ಎಂಬುದು ಇಲ್ಲಿ ವಾದವು.

3. ಬೆಳಕನ್ನು ತೋರಿಸುವದಕ್ಕೂ ಮತ್ತೊಂದು ಬೆಳಕು ಬೇಕೆಂದು ಇಟ್ಟುಕೊಂಡರೂ.

4. "ಯತ್" ಎಂದಿಷ್ಟೇ ಇದ್ದರೂ ಸಾಕಾಗುವದು.

ವಿಪರೀತಜ್ಞಾನಮಾತ್ಮನಿ ಸಮ್ಯಗ್ಜ್ಞಾನಂ ಚ ನ(?) ಜಾನಾಮ್ಯಾತ್ಮಾನಮಿತಿ । ಶ್ರುತೇಶ್ಚ "ತತ್ತ್ವಮಸಿ" (ಛಾ. ೬-೮-೭), "ಆತ್ಮಾನಮೇವಾವೇತ್" (ಬೃ. ೧-೪-೧೦), "ಏತಂ ವೈ ತಮಾತ್ಮಾನಂ ವಿದಿತ್ವಾ" (ಬೃ. ೩-೫-೧),–ಇತಿ ಚ ಸರ್ವತ್ರ ಶ್ರುತಿಷ್ವಾತ್ಮವಿಜ್ಞಾನೇ ವಿಜ್ಞಾನಾನ್ತರಾಪೇಕ್ಷತ್ವಂ ದೃಶ್ಯತೇ । ತಸ್ಮಾತ್ ಪ್ರತ್ಯಕ್ಷಶ್ರುತಿ ವಿರೋಧ ಇತಿ ಚೇತ್ । ನ । ಕಸ್ಮಾತ್ । ಅನ್ಯೋ ಹಿ ಸ ಆತ್ಮಾ ಬುದ್ಧ್ಯಾದಿಕಾರ್ಯಕರಣಸಙ್ಘಾತಾಭಿಮಾನಸನ್ತಾನಾವಿಚ್ಛೇದಲಕ್ಷಣೋಽವಿವೇಕಾತ್ಮಕೋ ಬುದ್ಧ್ಯವಭಾಸಪ್ರಧಾನಶ್ಚಕ್ಷುರಾದಿಕರಣೋ ನಿತ್ಯಚಿತ್ಸ್ವರೂಪಾತ್ಮಾನ್ತಃಸಾರೋ ಯತ್ರಾನಿತ್ಯಂ ವಿಜ್ಞಾನಮವಭಾಸತೇ । ಬೌದ್ಧಪ್ರತ್ಯಯಾನಾಮ್ ಆವಿರ್ಭಾವತಿರೋಭಾವಧರ್ಮಕತ್ವಾತ್ ತದ್ಧರ್ಮತಯೈವ ವಿಲಕ್ಷಣಮಪಿ ಚಾವಭಾಸತೇ। ಅನ್ತಃಕರಣಸ್ಯ ಮನಸೋಽಪಿ ಮನೋಽನ್ತರ್ಗತತ್ವಾತ್ (?) ಸರ್ವಾನ್ತರಶ್ರುತೇಃ ಅನ್ತರ್ಗತೇನ ನಿತ್ಯವಿಜ್ಞಾನಸ್ವರೂಪೇಣ ಆಕಾಶವದಪ್ರಚಲಿತಾತ್ಮನಾ ಅನ್ತರ್ಗರ್ಭಭೂತೇನ ಸಬಾಹ್ಯೋ ಬುದ್ಧ್ಯಾತ್ಮಾ ತದ್ವಿಲಕ್ಷಣಃ ಅನಗ್ನಿರಿವಾಗ್ನಿರರ್ಚಿಭಿರಿವಾಗ್ನೇಃ ಪ್ರತ್ಯಯೈರಾವಿರ್ಭಾವತಿರೋಭಾವಧರ್ಮಕೈರ್ವಿಜ್ಞಾನಾಭಾಸರೂಪೈರನಿತ್ಯೈಃ ಅನಿತ್ಯವಿಜ್ಞಾನ ಆತ್ಮಾ, ಸುಖೀ, ದುಃಖೀ–ಇತ್ಯಭ್ಯುಪಗತೋ ಲೌಕಿಕೈಃ । ಅತೋಽನ್ಯೋ ನಿತ್ಯವಿಜ್ಞಾನಸ್ವರೂಪಾದಾತ್ಮನಃ । ತತ್ರ ಹಿ ವಿಜ್ಞಾನಾಪೇಕ್ಷಾ ವಿಪರೀತಜ್ಞಾನತ್ವಂ(?) ಚೋಪಪದ್ಯತೇ, ನ ಪುನರ್ನಿತ್ಯವಿಜ್ಞಾನೇ ॥

(ಭಾಷ್ಯಾರ್ಥ)

(ಶಂಕೆ) :—ವಿರುದ್ಧವಲ್ಲವೆ? ಎಂದರೆ ಅಲ್ಲ, ಏಕೆಂದರೆ ಅನ್ಯನಾಗಿರುತ್ತಾನೆ, ವಿಜ್ಞಾನಸ್ವರೂಪನೇ ಆಗಿರುವದರಿಂದ (ತನ್ನ) ಸ್ವರೂಪವನ್ನು ಅರಿಯುವದಕ್ಕೆ ಮತ್ತೊಂದು ಅರಿವನ್ನು ಬಯಸುವದಿಲ್ಲ ಎಂಬುದು ಸರಿಯಲ್ಲ, ಏಕೆಂದರೆ ಆತ್ಮನ ವಿಷಯಕ್ಕೆ ತಪ್ಪು ತಿಳಿವಳಿಕೆಯೂ ಆತ್ಮನನ್ನು ಅರಿತುಕೊಂಡೆನೆಂಬ[1] ಸರಿಯಾದ ತಿಳಿವಳಿಕೆಯೂ ಕಂಡುಬರುತ್ತದೆ. ಶ್ರುತಿಯಿಂದಲೂ (ಇದು ತಿಳಿಯಬರುತ್ತದೆ): "ಅದೇ ನೀನಾಗಿರುವೆ" (ಛಾ. ೬-೮-೭), "ತನ್ನನ್ನೇ ಅರಿತುಕೊಂಡಿತು" (ಬೃ. ೧-೪-೧೦), "ಈ ಆ ಆತ್ಮನನ್ನೇ ಅರಿತುಕೊಂಡು. ...." (ಬೃ. ೩-೫-೧) ಎಂದು ಶ್ರುತಿಗಳಲ್ಲೆಲ್ಲ ಆತ್ಮನನ್ನರಿಯುವದಕ್ಕೆ ಬೇರೊಂದು ಅರಿವಿನ ಬಯಕೆಯಿರುವದು ಕಂಡುಬರುತ್ತದೆ. ಆದ್ದರಿಂದ (ನೀವು ಹೇಳುವದು) ಪ್ರತ್ಯಕ್ಷಕ್ಕೂ ಶ್ರುತಿಗೂ ವಿರೋಧವಾಗಿದೆಯಲ್ಲ!

(ಪರಿಹಾರ) :—ಹಾಗಲ್ಲ. ಏಕೆಂದರೆ ಬುದ್ಧಿಯೇ ಮುಂತಾದ ಕಾರ್ಯಕರಣಗಳ ಸಂಘಾತದಲ್ಲಿ ಅಭಿಮಾನವು ನಿಲ್ಲದೆ ನಡೆದಿರುವದೆಂಬ ಲಕ್ಷಣವುಳ್ಳವನೂ

1. "ನ ಜಾನಾಮ್ಯಾತ್ಮಾನಮ್" ಎಂಬಲ್ಲಿ ನ ಶಬ್ದವು ಹೆಚ್ಚೆಂದು ತೋರುತ್ತದೆ.

ಅವಿವೇಕಸ್ವರೂಪನೂ ಬುದ್ಧಿಯ ಅವಭಾಸವೇ ಪ್ರಧಾನವಾಗಿ ಉಳ್ಳವನೂ ಚಕ್ಷುಸ್ಸೇ ಮುಂತಾದ ಕರಣಗಳುಳ್ಳವನೂ ನಿತ್ಯಚಿತ್ಸ್ವರೂಪನಾದ ಆತ್ಮನೆಂಬ ಒಳಗಿನ ಸಾರವುಳ್ಳವನೂ (ಆಗಿರುವ) ಆ ಆತ್ಮನು ಬೇರೆಯಾಗಿರುತ್ತಾನೆ, ಅವನಲ್ಲಿ ಅನಿತ್ಯವಾದ ವಿಜ್ಞಾನವು ತೋರುತ್ತಿರುತ್ತದೆ. (ಆ ಆತ್ಮನು) ಬುದ್ಧಿಯ ಧರ್ಮಗಳು ತೋರಿಕೊಳ್ಳುವದು, ಮರೆಯಾಗುವದು-ಎಂಬ ಸ್ವಭಾವದವಾಗಿರುವದರಿಂದ, (ವಿಜ್ಞಾನವು) ತಾನು ಬೇರೆಯ ಸ್ವಭಾವದ್ದಾದರೂ [1], ಆ (ಬುದ್ಧಿಯ ಪ್ರತ್ಯಯಗಳ) ಧರ್ಮವುಳ್ಳದ್ದಾಗಿಯೇ ತೋರುತ್ತಿರುವದು. ಅದು (ತನ್ನ ಸ್ವರೂಪದಿಂದ) ಅಂತಃಕರಣವಾದ "ಮನಸ್ಸಿಗೂ ಮನಸ್ಸು"; ಏಕೆಂದರೆ (ಅದರೊಳಗೆ) ಇದ್ದುಕೊಂಡಿರುತ್ತದೆ. (ಆತ್ಮನು) **ಸರ್ವಾಂತರನೆಂಬ ಶ್ರುತಿಯು** [2] ಇದಕ್ಕೆ ಪ್ರಮಾಣವು. ತನ್ನೊಳಗಿರುವ ನಿತ್ಯವಿಜ್ಞಾನಸ್ವರೂಪನಾದ, ಆಕಾಶದಂತೆ (ಸ್ವಲ್ಪವೂ) ಅಲುಗಾಡದ ಸ್ವರೂಪವುಳ್ಳ, ಒಳಗಿರುವ ಗರ್ಭವಾಗಿರುವ, (ಆ ಆತ್ಮ)ನಿಂದ ಹೊರಗಿನ ಆ ವಿಜ್ಞಾನಾತ್ಮನು ಈ (ಶುದ್ಧಾತ್ಮನಿಗಿಂತ) ವಿಲಕ್ಷಣನಾಗಿ, ಬೆಂಕಿಯ ಜ್ವಾಲೆಗಳಿಂದ ಬೆಂಕಿಯಲ್ಲದ್ದೂ ಬೆಂಕಿಯಾಗಿರುವಂತೆ, [3] ತೋರಿಕೊಳ್ಳುವದು ಮರೆಯಾಗುವದು-ಎಂಬ ಧರ್ಮಗಳುಳ್ಳ ವಿಜ್ಞಾನದಂತೆ ಹೊಳೆಯುವ ಅನಿತ್ಯವಾದ ಪ್ರತ್ಯಯಗಳಿಂದ ಅನಿತ್ಯವಿಜ್ಞಾನವುಳ್ಳವನಾಗಿ, ಆತ್ಮನು, ಸುಖಿಯು, ದುಃಖಿಯು-ಎಂದು ಲೋಕದ ಜನರು ಅಂಗೀಕರಿಸಿರುವರಲ್ಲ, ಅವನು ನಿತ್ಯವಿಜ್ಞಾನಸ್ವರೂಪನಾದ ಈ ಆತ್ಮನಿಗಿಂತ ಬೇರೆಯಾಗಿರುತ್ತಾನೆ. ಅವನ ವಿಷಯದಲ್ಲಿಯೇ ವಿಜ್ಞಾನದ ಬಯಕೆಯೂ ತಪ್ಪುತಿಳಿವಳಿಕೆಯೂ [4] ಹೊಂದುತ್ತದೆಯೇ ಹೊರತು ನಿತ್ಯವಿಜ್ಞಾನ (ರೂಪನಾದ ಆತ್ಮನ) ವಿಷಯದಲ್ಲಿ ಹೊಂದುವದಿಲ್ಲ.

(ಭಾಷ್ಯ)

೧೦೮. "ತತ್ತ್ವಮಸಿ" (ಛಾ. ೬-೮-೭) ಇತಿ ಬೋಧೋಪದೇಶೋ ನೋಪಪದ್ಯತ ಇತಿ ಚೇತ್? "ಆತ್ಮಾನಮೇವಾವೇತ್" (ಬೃ. ೧-೪-೧೦) ಇತ್ಯೇವಮಾದೀನಿ ಚ, ನಿತ್ಯಬೋಧಾತ್ಮಕತ್ವಾತ್ । ನ ಹ್ಯಾದಿತ್ಯೋಽನ್ಯೇನ ಪ್ರಕಾಶ್ಯತೇ, ಅತಸ್ತ

1. ಪರಮಾರ್ಥರೂಪದಲ್ಲಿ ವಿಜ್ಞಾನವು, ಚೈತನ್ಯವು, ಕೂಟಸ್ಥವಾಗಿದ್ದರೂ ಅಂತಃಕರಣಧರ್ಮಗಳಿಂದ ವಿಕಾರವುಳ್ಳದ್ದಾಗಿ ತೋರುತ್ತದೆ ಎಂದರ್ಥ.

2. ಬೃ. ೩-೪-೧.

3. ಬೆಂಕಿಯಲ್ಲದ ನೀರೂ ಸುಡುವದಾಗುವಂತೆ.

4. "ವಿಪರೀತಜ್ಞಾನಂ" ಎಂದಿಷ್ಟೇ ಸಾಕು. ಅಹಂಪ್ರತ್ಯಯಗಮ್ಯನಾದ ಚಿದಾಭಾಸಸಹಿತನಾದ ಆತ್ಮನಲ್ಲಿಯೇ ವಿಜ್ಞಾನವಿಷಯತ್ವವಿರುವದು ಎಂದು ಭಾವ.

ದರ್ಥಬೋಧೋಪದೇಶೋಽನರ್ಥಕ ಇತಿ ಚೇತ್ । ನ । ಲೋಕಾಧ್ಯಾರೋಪಾಪೋಹಾರ್ಥತ್ವಾತ್ । ಸರ್ವಾತ್ಮನಿ ಹಿ ನಿತ್ಯವಿಜ್ಞಾನೇ ಬುದ್ಧ್ಯಾದ್ಯನಿತ್ಯಧರ್ಮಾ ಲೋಕೈರಧ್ಯಾರೋಪಿತಾ ಆತ್ಮಾವಿವೇಕತಃ । ತದಪೋಹಾರ್ಥೋ ಬೋಧೋಪದೇಶೋ ಬೋಧಾತ್ಮನಃ । ತತ್ರ ಚ ಬೋಧಾಬೋಧೌ ಸಮಂಜ್ಞಸೌ । ಅನ್ಯನಿಮಿತ್ತತ್ವಾತ್, ಉದಕ ಇವೌಷ್ಣ್ಯಮಗ್ನಿನಿಮಿತ್ತಮ್ । ರಾತ್ರ್ಯಹನೀ ಇವಾದಿತ್ಯನಿಮಿತ್ತೇ ಲೋಕೇ । ನಿತ್ಯಾವೌಷ್ಣ್ಯಪ್ರಕಾಶೌ ಅಗ್ನ್ಯಾದಿತ್ಯಯೋರನ್ಯತ್ರ ಭಾವಾಭಾವಯೋಃ ಸನಿಮಿತ್ತತ್ವಾತ್ [1] ಅನಿತ್ಯಾವಿವೋಪಚರ್ಯೇತೇ ಧಕ್ಷ್ಯತ್ಯಗ್ನಿಃ ಪ್ರಕಾಶಯತಿ ಸವಿತಾ ಇತಿ, ತದ್ವತ್ । ಏವಂ ಚ ಸುಖದುಃಖಬನ್ಧಮೋಕ್ಷಾದ್ಯಧ್ಯಾರೋಪೋ ಲೋಕಸ್ಯ । ತದಪೇಕ್ಷ್ಯ "ತತ್ತ್ವಮಸಿ" (ಛಾ. ೬-೮-೭), "ಆತ್ಮಾನಮೇವಾವೇತ್" (ಬೃ. ೧-೪-೧೦) ಇತ್ಯಾತ್ಮಾವಬೋಧೋಪದೇಶಿನ್ಯಃ [2] ಶ್ರುತಯಃ ಕೇವಲಮಧ್ಯಾರೋಪಾಪೋಹಾರ್ಥಾಃ । ಯಥಾ "ಸವಿತಾಸೌ ಪ್ರಕಾಶಯತ್ಯಾತ್ಮಾನಮ್" ಇತಿ ತದ್ವತ್ ಬೋಧಕರ್ತೃತ್ವಂ [3] ಚ ನಿತ್ಯಬೋಧಾತ್ಮನಿ । ತಸ್ಮಾದನ್ಯದವಿದಿತಾತ್॥

(ಭಾಷ್ಯಾರ್ಥ)

(ಶಂಕೆ) :—"ತತ್ತ್ವಮಸಿ" (ಛಾ. ೬-೮-೭) ಎಂಬ ಮತ್ತು "ಆತ್ಮಾನಮೇವಾವೇತ್" (ಛಾ. ೧-೪-೭) ಎಂಬುದೇ ಮುಂತಾದ ಜ್ಞಾನೋಪದೇಶವು ಹೊಂದುವದಿಲ್ಲವಲ್ಲ! ಏಕೆಂದರೆ (ಆತ್ಮನು) ನಿತ್ಯಜ್ಞಾನಸ್ವರೂಪನಾಗಿರುತ್ತಾನೆ. ಸೂರ್ಯನು ಮತ್ತೊಂದರಿಂದ ಬೆಳಗಲ್ಪಡುವದಿಲ್ಲವಷ್ಟೆ. ಆದ್ದರಿಂದ (ಜ್ಞಾನ)ಕ್ಕಾಗಿ ಉಪದೇಶ ಮಾಡಿರುವದು ವ್ಯರ್ಥವೇ ಆಯಿತಲ್ಲ!

(ಪರಿಹಾರ).—ಹಾಗಲ್ಲ. ಏಕೆಂದರೆ (ಅದು) ಜನರು (ಮಾಡಿಕೊಂಡಿರುವ) ಅಧ್ಯಾರೋಪವನ್ನು ಕಳೆಯುವದಕ್ಕಾಗಿ (ಬಂದಿರುತ್ತ)ದೆ. ಎಲ್ಲರ ಆತ್ಮನಾದ ನಿತ್ಯವಿಜ್ಞಾನ(ಸ್ವರೂಪನಾದ) ಆತ್ಮನಲ್ಲಿ ಅಂತಃಕರಣವೇ ಮುಂತಾದವುಗಳ ಅನಿತ್ಯಧರ್ಮಗಳು ಆತ್ಮನನ್ನು ವಿಂಗಡಿಸಿಕೊಂಡರಿಯದೆ ಇರುವದರಿಂದ ಅಧ್ಯಾರೋಪಿತವಾಗಿರುತ್ತವೆ ಜ್ಞಾನ(ಸ್ವರೂಪನಾದ) ಆತ್ಮನಿಗೆ ಜ್ಞಾನವನ್ನು ಉಪದೇಶಿಸಿರುವದು ಆ (ಅಧ್ಯಾರೋಪವನ್ನು) ಕಳೆಯುವದಕ್ಕೆ.

ಮತ್ತು ಆ (ಜ್ಞಾನಸ್ವರೂಪದಲ್ಲಿ) ಜ್ಞಾನಾಜ್ಞಾನಗಳೂ ಸಮಂಜಸವಾಗಿರುತ್ತವೆ; ಏಕೆಂದರೆ ಬೆಂಕಿಯಿಂದ ನೀರಿನಲ್ಲಿ ಆಗುವ ಬಿಸಿಯಂತೆಯೂ ಸೂರ್ಯನೆಂಬ ನಿಮಿತ್ತ

---

1. "ನಿಮಿತ್ತತ್ವಾತ್" ಎಂಬ (ಆ॥) ಪಾಠಕ್ಕಿಂತ ಈ (ವಾ॥) ಪಾಠವೇ ಮೇಲು.
2. ಇದೂ (ವಾ॥) ಪಾಠ.
3. "ಬೋಧಾಬೋಧ ಎಂಬ (ಆ॥) ಪಾಠವು ಬೇಕಿಲ್ಲ.

ದಿಂದ ಲೋಕದಲ್ಲಿ ರಾತ್ರಿಹಗಲುಗಳಂತೆಯೂ, (ಅವು) ಮತ್ತೊಂದರ ನಿಮಿತ್ತದಿಂದ (ಆಗಿರುತ್ತವೆ). ಬೆಂಕಿ, ಸೂರ್ಯ–ಇವರಲ್ಲಿ ನಿತ್ಯವಾಗಿರುವ ಬಿಸಿ, ಬೆಳಕು–ಇವು ಮಿಕ್ಕ ಕಡೆಗಳಲ್ಲಿ ಇರುವದಾಗಲಿ ಇಲ್ಲದ್ದಾಗಲಿ (ಒಂದಾನೊಂದು) ನಿಮಿತ್ತದಿಂದಾಗಿರುವದರಿಂದ (ಇಲ್ಲಿಯೂ) ಅನಿತ್ಯವೆಂಬಂತೆ "ಬೆಂಕಿಯು ಸುಡುವದು" "ಸೂರ್ಯನು ಬೆಳಗುವನು" ಎಂದು ಪ್ರಯೋಗಮಾಡುವರು ; ಅದರಂತೆಯೇ (ಆತ್ಮನ ವಿಷಯದಲ್ಲಿಯೂ ತಿಳಿಯಬೇಕು). ಈರೀತಿಯಲ್ಲಿ (ಆತ್ಮನಲ್ಲಿ) ಜನರು ಸುಖ, ದುಃಖ, ಬಂಧ, ಮೋಕ್ಷ–ಮುಂತಾದ ಅಧ್ಯಾರೋಪವನ್ನು ಮಾಡುವರಷ್ಟೆ; ಅದನ್ನು ಲಕ್ಷ್ಯದಲ್ಲಿಟ್ಟುಕೊಂಡು "ತತ್ತ್ವಮಸಿ" (ಅದೇ ನೀನು) "ಆತ್ಮಾನಮೇವಾವೇತ್" (ತನ್ನನ್ನೇ ತಿಳಿದುಕೊಂಡಿತು)–ಎಂದು ಆತ್ಮಜ್ಞಾನವನ್ನು ಉಪದೇಶಿಸುವ ಶ್ರುತಿಗಳು ಅಧ್ಯಾರೋಪವನ್ನು ಕಳೆಯುವದಕ್ಕೆ ಮಾತ್ರ (ಬಂದಿರುತ್ತವೆ). ಹೇಗೆ "ಸೂರ್ಯನು ತನ್ನನ್ನು (ತಾನು) ಬೆಳಗಿಕೊಳ್ಳುತ್ತಾನೆ" ಎನ್ನುವೆವೋ ಹಾಗೆಯೇ ನಿತ್ಯಜ್ಞಾನಸ್ವರೂಪನಾದ (ಆತ್ಮನಲ್ಲಿ) ಜ್ಞಾನಕರ್ತೃತ್ವವನ್ನು (ತಿಳಿಯಬೇಕು). ಆದ್ದರಿಂದ "(ಅದು) ಅವಿದಿತಕ್ಕಿಂತಲೂ ಬೇರೆಯೇ".

(ಭಾಷ್ಯ)

೧೦೯. ಅಧಿಶಬ್ದಶ್ಚ ಅನ್ಯಾರ್ಥೇ । ಯದ್ವಾ ಯದ್ ಹಿ ಯಸ್ಯ ಅಧಿ ತತ್ ತತೋಽನ್ಯತ್ ಸಾಮರ್ಥ್ಯಾತ್ , ಯಥಾ ಅಧಿ ಭೃತ್ಯಾದೀನಾಂ ರಾಜಾ । ಅವ್ಯಕ್ತಮೇವ ಅವಿದಿತಮ್, ತತೋಽನ್ಯತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಅಧಿ ಎಂಬ ಮಾತು ಬೇರೆ ಎಂಬರ್ಥದಲ್ಲಿ ಬಂದಿರುತ್ತದೆ. ಅಥವಾ ಯಾವದು ಏತರಮೇಲೆ ಇರುತ್ತದೆಯೋ ಅದು ಅದಕ್ಕಿಂತ ಬೇರೆಯೆಂದು (ಶಬ್ದ)ದ ಅರ್ಥದಿಂದ (ಗೊತ್ತಾಗುತ್ತದೆ). ಹೇಗೆಂದರೆ ಅರಸನು ಸೇವಕರೇ ಮುಂತಾದವರ ಮೇಲೆ, (ಆದ್ದರಿಂದ ಅವರಗಿಂತ ಬೇರೆ). ಅವ್ಯಕ್ತವೇ (ಇಲ್ಲಿ) ಅವಿದಿತವು; ಆ (ಅವ್ಯಕ್ತಕ್ಕಿಂತಲೂ ಆತ್ಮತತ್ತ್ವವು) ಬೇರೆ ಎಂದರ್ಥ.

(ಭಾಷ್ಯ)

೧೧೦. ವಿದಿತಮ್ ಅವಿದಿತಂ ಚ ವ್ಯಕ್ತಾವ್ಯಕ್ತೇ ಕಾರ್ಯಕಾರಣತ್ವೇನ ವಿಕಲ್ಪಿತೇ । ತಾಭ್ಯಾಮ್ ಅನ್ಯದ್ ಬ್ರಹ್ಮ ವಿಜ್ಞಾನಸ್ವರೂಪಂ ಸರ್ವವಿಶೇಷಪ್ರತ್ಯಸ್ತಮಿತಮ್ ಇತ್ಯಯಂ ಸಮುದಾಯಾರ್ಥಃ । ಅತ ಏವ ಆತ್ಮತ್ವಾನ್ನ ಹೇಯ ಉಪಾದೇಯೋ ವಾ । ಅನ್ಯದ್ ಹಿ ಅನ್ಯೇನ ಹೇಯಮ್, ಉಪಾದೇಯಂ ವಾ । ನ ತೇನೈವ ತದ್ ಯಸ್ಯ ಕಸ್ಯಚಿದ್ ಹೇಯಮ್ ಉಪಾದೇಯಂ ವಾ ಭವತಿ । ಆತ್ಮಾ ಚ ಬ್ರಹ್ಮ ಸರ್ವಾನ್ತರತ್ವಾದ್ ಅವಿಷಯಃ । ಅತೋಽನ್ಯಸ್ಯಾಪಿ ನ ಹೇಯಮುಪಾದೇಯಂ ವಾ । ಅನ್ಯಾಭಾವಾಚ್ಚ ॥

(ಭಾಷ್ಯಾರ್ಥ)

ವಿದಿತ ಮತ್ತು ಅವಿದಿತ–ಇವು ವ್ಯಕ್ತಾವ್ಯಕ್ತಗಳು, ಕಾರ್ಯಕಾರಣಭಾವ ದಿಂದ ಕಲ್ಪಿತವಾಗಿರುತ್ತವೆ. ಅವೆರಡಕ್ಕಿಂತಲೂ ಬ್ರಹ್ಮ ಬೇರೆಯಾಗಿದೆ, ವಿಜ್ಞಾನ ಸ್ವರೂಪವಾಗಿರುತ್ತದೆ, ಯಾವ ವಿಶೇಷಗಳೂ ಇಲ್ಲದ್ದಾಗಿದೆ–ಎಂಬುದು ಒಟ್ಟರ್ಥವು. ಆದ್ದರಿಂದಲೇ (ಎಲ್ಲರಿಗೂ) ಆತ್ಮನಾಗಿರುವದರಿಂದ (ಅದು) ಬಿಡತಕ್ಕದ್ದೂ ಅಲ್ಲ, ತೆಗೆದುಕೊಳ್ಳತಕ್ಕದ್ದೂ ಅಲ್ಲ. (ತನಗೆ) ಬೇರೆಯಾದದ್ದನ್ನಲ್ಲವೆ, (ಅದಕ್ಕಿಂತ) ಬೇರೆ ಯಾದವನು ಬಿಡುತ್ತಾನೆ, ಅಥವಾ ತೆಗೆದುಕೊಳ್ಳುತ್ತಾನೆ? ಯಾವದೇ ಆಗಲಿ ತನಗೆ ತಾನೇ ಬಿಡತಕ್ಕದ್ದಾಗಲಿ ತೆಗೆದುಕೊಳ್ಳತಕ್ಕದ್ದಾಗಲಿ ಆಗುವದಿಲ್ಲ. ಆತ್ಮನೇ ಬ್ರಹ್ಮವು, ಎಲ್ಲಕ್ಕೂ ಒಳಗಿರುವದರಿಂದ (ಏತಕ್ಕೂ) ವಿಷಯವಲ್ಲ. ಆದ್ದರಿಂದ (ಆ ಬ್ರಹ್ಮವು) ಮತ್ತೊಂದಕ್ಕೂ ಬಿಡತಕ್ಕದ್ದಲ್ಲ, ತೆಗೆದುಕೊಳ್ಳತಕ್ಕದ್ದೂ ಅಲ್ಲ. ಮತ್ತೊಂದು ಇಲ್ಲವೂ ಇಲ್ಲವಾದ್ದರಿಂದಲೂ (ಹೀಗೆಂದು ನಿಶ್ಚಯಿಸಬೇಕು).

(ಭಾಷ್ಯ)

೧೧೧. "ಇತಿ ಶುಶ್ರುಮ ಪೂರ್ವೇಷಾಮ್" ಇತ್ಯಾಗಮೋಪದೇಶಃ । ವ್ಯಾಚ ಚಕ್ಷಿರೇ ಇತ್ಯಸ್ವಾತನ್ತ್ರ್ಯಂ ತರ್ಕಪ್ರತಿಷೇಧಾರ್ಥಮ್ । ಯೇ ನಃ ತದ್ ಬ್ರಹ್ಮ ಉಕ್ತ ವನ್ತಃ ತೇ ನಿತ್ಯಮೇವ ಆಗಮಂ ಬ್ರಹ್ಮಪ್ರತಿಪಾದಕಂ ವ್ಯಾಖ್ಯಾತವನ್ತಃ । ನ ಪುನಃ ಸ್ವಬುದ್ಧಿಪ್ರಭವೇಣ ತರ್ಕೇಣೋಕ್ತವನ್ತ ಇತ್ಯಾಗಮಪಾರಮ್ಪರ್ಯಾವಿಚ್ಛೇದಂ ದರ್ಶ ಯತಿ ವಿದ್ಯಾಸ್ತುತಯೇ । ತರ್ಕಸ್ತು ಅನವಸ್ಥಿತೋ ಭ್ರಾನ್ತೋಽಪಿ ಭವತಿ ॥

(ಭಾಷ್ಯಾರ್ಥ)

"ಹೀಗೆಂದು ಹಿಂದಿನವರ (ವಚನವನ್ನು) ಕೇಳಿರುತ್ತೇವೆ" ಎಂಬುದು ಆಗ ಮದ ಉಪದೇಶವು. "ವ್ಯಾಚಚಕ್ಷಿರೇ" ಎಂದು ಸ್ವಾತಂತ್ರ್ಯವನ್ನು ಅಲ್ಲಗಳೆದಿರು ವದು, ತರ್ಕವನ್ನು ತಿರಸ್ಕರಿಸುವದಕ್ಕೆ. ಯಾರು ನಮಗೆ ಆ ಬ್ರಹ್ಮವನ್ನು ಹೇಳಿರು ವರೋ ಅವರು ಬ್ರಹ್ಮವನ್ನು ತಿಳಿಸುವ **ನಿತ್ಯವಾದ ಆಗಮವನ್ನೇ** ವಿವರಿಸಿ ಹೇಳಿರು ವರಲ್ಲದೆ ತಮ್ಮ ಬುದ್ಧಿಯಿಂದ ಉಂಟಾಗಿರುವ **ತರ್ಕದಿಂದ ಹೇಳಲಿಲ್ಲ** ಎಂದು ಆಗಮ ಪರಂಪರೆಯು ಕಡಿವಡೆಯದೆ ಬಂದಿರುವದೆಂದು, ಜ್ಞಾನವನ್ನು ಹೊಗಳುವದಕ್ಕಾಗಿ, ತಿಳಿಸಿರುತ್ತದೆ. ತರ್ಕವಾದರೋ ನಿಲುಗಡೆಯಿಲ್ಲದ್ದು, ಭ್ರಮೆಯಿಂದಾದದ್ದೂ ಆಗಿರ ಬಹುದು. ಆದ್ದರಿಂದ (ಹೀಗೆ ಹೇಳಿರುತ್ತದೆ).

## ಹಿಂದೆ ಹೇಳಿದ್ದರ ಪುಷ್ಟೀಕರಣ

**ಯದ್ವಾಚಾನಭ್ಯುದಿತಂ.... ನೇದಂ ಯದಿದಮುಪಾಸತೇ ॥ ೫ ॥**

(ಭಾಷ್ಯ)

೧೧೨. "ಯದ್ವಾಚಾ" ಇತಿ ಮನ್ತ್ರಾನುವಾದೋ ದೃಢಪ್ರತೀತ್ಯೈ ।

“ಅನ್ಯದೇವ ತದ್ವಿದಿತಾತ್” ಇತಿ ಯೋಽಯಮಾಗಮಾರ್ಥೋ ಬ್ರಾಹ್ಮಣೋಕ್ತಃ, ಅಸ್ಯೈವ ದ್ರಢಿಮ್ನೇ ಇಮೇ ಮನ್ತ್ರಾಃ “ಯದ್ವಾಚಾ” ಇತ್ಯಾದಯಃ ಪಠ್ಯನ್ತೇ ||

(ಭಾಷ್ಯಾರ್ಥ)

“ಯದ್ವಾಚಾ” ಎಂಬಿವೇ (ಮುಂತಾದ) ಮಂತ್ರಗಳ(ಲ್ಲಿ ಕಾಣುವ) ಅನುವಾದವು ದೃಢವಾಗಿ ತಿಳಿಯುವದಕ್ಕಾಗಿ “ಅನ್ಯದೇವ ತದ್ವಿದಿತಾತ್” (ಅದು ತಿಳಿಯಲ್ಪಟ್ಟದ್ದಕ್ಕಿಂತಲೂ ಬೇರೆಯೇ) ಎಂದು ಯಾವ ಈ ಆಗಮಾರ್ಥವನ್ನು ಬ್ರಾಹ್ಮಣದಲ್ಲಿ ಹೇಳಿತ್ತೋ ಇದನ್ನೇ ಗಟ್ಟಿಗೊಳಿಸುವದಕ್ಕಾಗಿ ಈ “ಯದ್ವಾಚಾ” ಮುಂತಾದ ಮಂತ್ರಗಳನ್ನು ಹೇಳಲಾಗಿದೆ.

(ಭಾಷ್ಯ)

೧೧೩. ಯತ್ ಬ್ರಹ್ಮ ವಾಚಾ ಶಬ್ದೇನ ಅನಭ್ಯುದಿತಮ್ ಅನಭ್ಯುಕ್ತಮ್ | ಅಪ್ರಕಾಶಿತಮ್ ಇತ್ಯೇತತ್ | “ಯೇನ ವಾಗಭ್ಯುದ್ಯತೇ” ಇತಿ ವಾಕ್ಪ್ರಕಾಶಹೇತುತ್ವೋಕ್ತಿಃ | ಯೇನ ಪ್ರಕಾಶ್ಯತ ಇತಿ ವಾಚೋಽಭಿಧಾನಸ್ಯ ಅಭಿಧೇಯಪ್ರಕಾಶಕತ್ವಸ್ಯ ಹೇತುತ್ವಮುಚ್ಯತೇ ಬ್ರಹ್ಮಣಃ | ಉಕ್ತಂ ಚ “ಕೇನೇಷಿತಾಂ ವಾಚಮಿಮಾಂ ವದನ್ತಿ” (೧-೧), “ಯದ್ವಾಚೋ ಹ ವಾಚಮ್” (೧-೨) ಇತಿ ||

(ಭಾಷ್ಯಾರ್ಥ)

ಯಾವ ಬ್ರಹ್ಮವು ವಾಕ್ಕಿನಿಂದ ಎಂದರೆ ಶಬ್ದದಿಂದ ಹೇಳಲ್ಪಡುವದಿಲ್ಲವೋ, ತಿಳಿಸಲ್ಪಡುವದಿಲ್ಲವೋ, ಬೆಳಗಲ್ಪಡುವದಿಲ್ಲವೋ ಎಂದರ್ಥ. “ಯೇನ ವಾಗಭ್ಯುದ್ಯತೇ” ಎಂಬುದರಿಂದ ವಾಕ್ಕನ್ನು ಪ್ರಕಾಶಗೊಳಿಸುವ ಹೇತುವೆಂದು ಹೇಳಲಾಗಿರುತ್ತದೆ. “ಯಾವದರಿಂದ (ಹೇಳಲ್ಪಡುವದೋ) ಬೆಳಗಲ್ಪಡುವದೋ” ಎಂದು ಅಭಿದಾನವಾದ ವಾಕ್ಕು ಅಭಿಧೇಯವಾದ (ವಸ್ತುವನ್ನು) ಬೆಳಗುತ್ತಿರುವದಕ್ಕೆ ಬ್ರಹ್ಮವೇ ಹೇತುವೆಂದು ಹೇಳಿರುತ್ತದೆ. ಹಿಂದೆಯೂ “ಯಾವದರ ಇಚ್ಛೆಯಿಂದ ಈ ವಾಕ್ಕನ್ನು ನುಡಿಯುತ್ತಾರೆ”, (೧-೧) “ಯಾವದು ವಾಕ್ಕಿಗೆ ವಾಕ್ಕೋ” (೧-೨) ಎಂದು ಹೇಳಿರುತ್ತದೆ.

(ಭಾಷ್ಯ)

೧೧೪. “ತದೇವ ಬ್ರಹ್ಮ ತ್ವಂ ವಿದ್ಧಿ” ಇತ್ಯವಿಷಯತ್ವೇನ ಬ್ರಹ್ಮಣ ಆತ್ಮನ್ಯವಸ್ಥಾಪನಾರ್ಥ ಆಮ್ನಾಯಃ | ಯದ್ವಾಚಾ ಅನಭ್ಯುದಿತಂ ವಾಕ್ಪ್ರ[1]ಕಾಶನಿಮಿತ್ತಂ ಚೇತಿ ಬ್ರಹ್ಮಣೋಽವಿಷಯತ್ವೇನ ವಸ್ತ್ವನ್ತರಜಿಘೃಕ್ಷಾಂ ನಿವರ್ತ್ಯ ಸ್ವಾತ್ಮನ್ಯೇವಾವಸ್ಥಾಪಯತ್ಯಾಮ್ನಾಯಃ “ತದೇವ ಬ್ರಹ್ಮ ತ್ವಂ ವಿದ್ಧೀ”ತಿ | ಯತ್ನಾತ ಉಪರಮಯತಿ “ನೇದಮ್” ಇತಿ, ಉಪಾಸ್ಯಪ್ರತಿಷೇಧಾಚ್ಚ ||

---

1. ವಾ|| ಪಾಠ.

(ಭಾಷ್ಯಾರ್ಥ)

"ತದೇವ ಬ್ರಹ್ಮ ತ್ವಂ ವಿದ್ಧಿ" (ಅದೇ ಬ್ರಹ್ಮವೆಂದು ನೀನು ತಿಳಿ) ಎಂದು ಬ್ರಹ್ಮವು ವಿಷಯವಲ್ಲವಾದ್ದರಿಂದ ಆತ್ಮನಲ್ಲಿಯೇ ನಿಲ್ಲಿಸುವದಕ್ಕಾಗಿ ವೇದವು ಬಂದಿರುತ್ತದೆ. "ಯಾವದು ವಾಕ್ಕಿನಿಂದ ಹೇಳಲ್ಪಡುವದಿಲ್ಲವೋ (ಯಾವದು) ವಾಕ್ಕು ಬೆಳಗುವದಕ್ಕೆ ನಿಮಿತ್ತವೂ ಆಗಿರುವದೋ" ಎಂದು ಬ್ರಹ್ಮವು ವಿಷಯವಲ್ಲವೆಂದು ಹೇಳಿ ಮತ್ತೊಂದು ವಸ್ತುವನ್ನು (ಬ್ರಹ್ಮವೆಂದು) ಗ್ರಹಣೆಮಾಡುವ ಹವಣಿಕೆಯನ್ನು ತಪ್ಪಿಸಿ, "ತದೇವ ಬ್ರಹ್ಮ ತ್ವಂ ವಿದ್ಧಿ" ಎಂಬ ವೇದವು ತನ್ನ ಆತ್ಮನಲ್ಲಿಯೇ (ಬ್ರಹ್ಮವನ್ನು) ನಿಲ್ಲಿಸುತ್ತದೆ. "ಇದಲ್ಲ" ಎಂದೂ "ಉಪಾಸ್ಯನಲ್ಲ"ವೆಂದೂ ಹೇಳಿ ಯತ್ನಪೂರ್ವಕವಾಗಿ (ಮತ್ತೊಂದು ವಸ್ತುವನ್ನು) ಬಿಡಿಸುತ್ತದೆ,

**ಯನ್ಮನಸಾ　　ಯದಿದಮುಪಾಸತೇ ॥ ೬ ॥**

**ಯಚ್ಚಕ್ಷುಷಾ　　ಯದಿದಮುಪಾಸತೇ ॥ ೭ ॥**

**ಯಚ್ಛ್ರೋತ್ರೇಣ. . .. ಯದಿದಮುಪಾಸತೇ ॥ ೮ ॥**

**ಯತ್ಪ್ರಾಣೇನ　... ಯದಿದಮುಪಾಸತೇ ॥ ೯ ॥**

(ಭಾಷ್ಯ)

೧೧೫. "ಯನ್ಮನಸಾ" ಇತ್ಯಾದಿ ಸಮಾನಮ್ । "ಮನೋ ಮತಮ್" ಇತಿ । ಯೇನ ಬ್ರಹ್ಮಣಾ ಮನೋಽಪಿ ವಿಷಯೀಕೃತಂ ನಿತ್ಯವಿಜ್ಞಾನಸ್ವರೂಪೇಣ–ಇತ್ಯೇತತ್ । ಸರ್ವಕರಣಾನಾಮವಿಷಯಸ್ತಾನಿ ಚ ಸವ್ಯಾಪಾರಾಣಿ ಸವಿಷಯಾಣಿ ನಿತ್ಯವಿಜ್ಞಾನಸ್ವರೂಪಾವಭಾಸತಯಾ ಯೇನಾವಭಾಸ್ಯನ್ತೇ ಇತಿ ಶ್ಲೋಕಾರ್ಥಃ । "ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ" (ಗೀ. ೧೩-೩೩) ಇತಿ ಸ್ಮೃತೇಃ । "ತಸ್ಯ ಭಾಸಾ" (ಮು. ೨-೨-೧೦) ಇತಿ ಚಾಥರ್ವಣೇ । "ಯೇನ ಪ್ರಾಣ" ಇತಿ । ಕ್ರಿಯಾಶಕ್ತಿರಪ್ಯಾತ್ಮವಿಜ್ಞಾನನಿಮಿತ್ತಾ ಇತ್ಯೇತತ್ ॥

(ಭಾಷ್ಯಾರ್ಥ)

"ಯನ್ಮನಸಾ" ಮುಂತಾದ (ಮಂತ್ರಗಳಿಗೆ ಅರ್ಥವು) ಸಮಾನವಾಗಿರುತ್ತದೆ. "ಮನಸ್ಸು ಮನನಮಾಡಲ್ಪಡುವದೋ" ಎಂದರೆ ನಿತ್ಯವಿಜ್ಞಾನಸ್ವರೂಪವಾದ ಯಾವ ಬ್ರಹ್ಮದಿಂದ ಮನಸ್ಸುಕೂಡ ವಿಷಯೀಕರಿಸಲ್ಪಡುವದೋ ಎಂದರ್ಥ. (ಯಾವದು) ಯಾವ ಕರಣಗಳಿಗೂ ವಿಷಯವಲ್ಲವೋ, ಆ (ಕರಣಗಳು) ತಮ್ಮ ವ್ಯಾಪಾರದೊಡನೆ ತಮ್ಮ ವಿಷಯದೊಡನೆ ನಿತ್ಯ ವಿಜ್ಞಾನಸ್ವರೂಪದಿಂದ ಬೆಳಗುವ ಯಾವದರಿಂದ ಬೆಳಗುತ್ತಿರುವವೋ ಎಂದು ಶ್ಲೋಕಗಳ ಅರ್ಥವು. "ಹಾಗೆ ಕ್ಷೇತ್ರವೆಲ್ಲವನ್ನೂ ಕ್ಷೇತ್ರಿಯು ಬೆಳಗುತ್ತಿರುವನು" (ಗೀ. ೧೩-೩೩) ಎಂಬ ಸ್ಮೃತಿಯು ಇದಕ್ಕೆ ಪ್ರಮಾಣವು.

"ಆ (ಆತ್ಮನ) ಬೆಳಕಿನಿಂದ (ಇದೆಲ್ಲವೂ ಬೆಳಗುತ್ತಿರುವದು)" (ಮು. ೨-೨-೧೦) ಎಂದು ಆಥರ್ವಣದಲ್ಲಿಯೂ ಹೇಳಿರುತ್ತದೆ. "ಯಾವದರಿಂದ ಪ್ರಾಣವು........" ಎಂದರೆ ಕ್ರಿಯಾಶಕ್ತಿಯೂ ಆತ್ಮವಿಜ್ಞಾನದ ನಿಮಿತ್ತದಿಂದಲೇ (ಆಗಿರುತ್ತದೆ)-ಎಂದರ್ಥ.



# ಎರಡನೆಯ ಖಂಡ

## ಗುರು ಶಿಷ್ಯನ ಬುದ್ಧಿಯನ್ನು ಕದಲಿಸುವದು

**ಯದಿ ಮನ್ಯಸೇ. . .. ವಿದಿತಮ್ ॥ ೧ ॥**

**(ಭಾಷ್ಯ)**

೧೧೬. "ಯದಿ ಮನ್ಯಸೇ ಸುವೇದೇತಿ'' (ಇತಿ) ಶಿಷ್ಯಬುದ್ಧಿವಿಚಾಲನಾ ಗೃಹೀತಸ್ಥಿರತಾಯೈ । ವಿದಿತಾವಿದಿತಾಭ್ಯಾಂ ನಿವರ್ತ್ಯ ಬುದ್ಧಿಂ ಶಿಷ್ಯಸ್ಯ ಸ್ವಾತ್ಮನ್ಯೇವ ಸ್ಥಾಪ್ಯ "ತದೇವ ಬ್ರಹ್ಮ ತ್ವಂ ವಿದ್ಧಿ" ಇತಿ ಸ್ವಾರಾಜ್ಯೇಽಭಿಷಿಚ್ಯ ಉಪಾಸ್ಯಪ್ರತಿಷೇಧೇನ, ಅಥಾಸ್ಯ ಬುದ್ಧಿಂ ವಿಚಾಲಯತಿ–ಯದಿ ಮನ್ಯಸೇ "ಸುವೇದಾಹಂ ಬ್ರಹ್ಮ" ಇತಿ ತ್ವಂ ತತೋಽಲ್ಪಮೇವ ಬ್ರಹ್ಮಣೋ ರೂಪಂ ವೇತ್ಥ ತ್ವಮಿತಿ ನೂನಂ ನಿಶ್ಚಿತಂ ಮನ್ಯತೇ ಇತ್ಯಾಚಾರ್ಯಃ । ಸಾ ಪುನರ್ವಿಚಾಲನಾ ಕಿಮರ್ಥೇತಿ ? ಉಚ್ಯತೇ । ಪೂರ್ವಗೃಹೀತೇ ವಸ್ತುನಿ ಬುದ್ಧೇಃ ಸ್ಥಿರತಾಯೈ । ದೇವೇಷ್ವಪಿ ಸುವೇದಾಹಮಿತಿ ಮನ್ಯತೇ ಯಃ ಸೋಽಪ್ಯಸ್ಯ ಬ್ರಹ್ಮಣೋ ರೂಪಂ ದಹರಮೇವ[1] ವೇತ್ತಿ ನೂನಮ್ । ಕಸ್ಮಾತ್ ? ಅವಿಷಯತ್ವಾತ್ ಕಸ್ಯಚಿದ್ ಬ್ರಹ್ಮಣಃ । ಅಥವಾಽಲ್ಪಮೇವಾಸ್ಯ ಆಧ್ಯಾತ್ಮಿಕಂ ಮನುಷ್ಯೇಷು, ದೇವೇಷು ಚಾಧಿದೈವಿಕಮ್ ಅಸ್ಯ ಬ್ರಹ್ಮಣೋ ಯದ್ರೂಪಂ ತತ್–ಇತಿ ಸಮ್ಬನ್ಧಃ ॥

**(ಭಾಷ್ಯಾರ್ಥ)**

"ಯದಿ ಮನ್ಯಸೇ ಸುವೇದೇತಿ" (ಎಂದು) ಶಿಷ್ಯನ ಬುದ್ಧಿಯನ್ನು ಕದಲಿಸಿರುವದು ಗ್ರಹಿಸಿದ್ದನ್ನು ಗಟ್ಟಿಗೊಳಿಸುವದಕ್ಕೆ. ತಿಳಿಯಲ್ಪಟ್ಟದ್ದು, ತಿಳಿಯಲ್ಪಡದ್ದು–ಈ ಎರಡರಿಂದಲೂ ಶಿಷ್ಯನ ಬುದ್ಧಿಯನ್ನು ಹಿಂತಿರುಗಿಸಿ ಅವನ ಆತ್ಮನಲ್ಲಿ ಅದನ್ನಿಟ್ಟು "ಅದೇ ಬ್ರಹ್ಮವೆಂದು ನೀನು ತಿಳಿ" ಎಂದು ಸ್ವಾರಾಜ್ಯದಲ್ಲಿ ಅಭಿಷೇಕ ಮಾಡಿ ಅದು ಉಪಾಸ್ಯವಲ್ಲವೆಂದು ಹೇಳಿದ ಬಳಿಕ ಈ (ಶಿಷ್ಯನ) ಬುದ್ಧಿಯನ್ನು "ನಾನು ಬ್ರಹ್ಮವನ್ನು ಚೆನ್ನಾಗಿ ಅರಿತುಕೊಂಡಿರುವೆನು ಎಂದು ನೀನು ಎಣಿಸುವೆಯಾದರೆ ಆಗ ಬ್ರಹ್ಮದ ರೂಪವನ್ನು ನೀನು ಅಲ್ಪವೇ ತಿಳಿದುಕೊಂಡಿರುವೆ ಎಂದು ನಿಜವಾಗಿ ನಿಶ್ಚಿತವಾಗಿ ತಿಳಿಯಬರುತ್ತದೆ" ಎಂದು ಆಚಾರ್ಯನು ಕದಲಿಸುತ್ತಾನೆ. ಆ ಕದಲಿಸುವಿಕೆಯಾದರೂ ಏತಕ್ಕೆ?–ಎಂದರೆ ಹೇಳುತ್ತೇವೆ. ಹಿಂದೆ ಗ್ರಹಿಸಿರುವ

---

1. "ದಭ್ರ''ವೆಂಬ ಪಾಠದ ಬದಲು 'ದಹರ' ವೆಂಬ ಪಾಠವೇ ವಾಕ್ಯಭಾಷ್ಯಕ್ಕೆ ಸಮ್ಮತವೆಂದು ತೋರುತ್ತದೆ.

(ಬ್ರಹ್ಮ) ವಸ್ತುವಿನಲ್ಲಿ ಬುದ್ಧಿಯು ನೆಲೆಯಾಗಿರುವದಕ್ಕೆ[1]. ದೇವತೆಗಳಲ್ಲಿಯು
ಯಾವನು '(ಬ್ರಹ್ಮವನ್ನು) ಚೆನ್ನಾಗಿ ನಾನು ಅರಿತುಕೊಂಡಿರುವೆನು' ಎಂದೆಣಿಸಿ
ವನೋ ಅವನೂ ಬ್ರಹ್ಮದ ರೂಪವನ್ನು ಸ್ವಲ್ಪವಾಗಿಯೇ ತಿಳಿದಿರುತ್ತಾನೆಂಬು
ನಿಶ್ಚಯ. ಅದೇಕೆ? (ಎಂದರೆ) ಬ್ರಹ್ಮವು ಯಾವದಕ್ಕೂ ವಿಷಯವಲ್ಲವಾದ್ದರಿಂ
ಅಥವಾ[2] ಮನುಷ್ಯರಲ್ಲಿರುವ ಆಧ್ಯಾತ್ಮಿಕ, ದೇವತೆಗಳಲ್ಲಿರುವ ಆಧಿದೈವಿಕ–ಎಂಬ
ಬ್ರಹ್ಮದ ರೂಪವುಂಟಲ್ಲ, ಅದನ್ನು–ಎಂದು ಅನ್ವಯ (ಮಾಡಿಕೊಳ್ಳಬೇಕು).

(ಭಾಷ್ಯ)

೧೧೭. "ಅಥ ನು" ಇತಿ ಹೇತುರ್ಮೀಮಾಂಸಾಯಾಃ । ಯಸ್ಮಾದ್ದಹ
ಮೇವ ಸುವಿದಿತಂ ಬ್ರಹ್ಮಣೋರೂಪಮ್ "ಅನ್ಯದೇವ ತದ್ವಿದಿತಾದ್" ಇತ್ಯು
ತ್ವಾತ್ । "ಸುವೇದ" ಇತಿ ಚ ಮನ್ಯಸೇ । ಅತೋಽಲ್ಪಮೇವ ರೇತ್ಥ ತ್ವಂ ಬ್ರಹ್ಮಣೋ
ರೂಪಂ ಯಸ್ಮಾತ್, ಅಥನು ತಸ್ಮಾತ್ । ಮೀಮಾಂಸ್ಯಮೇವ ಅದ್ಯಾಪಿ ತೇ ತ
ಬ್ರಹ್ಮ । ವಿಚಾರ್ಯಮೇವ ಯಾವದ್ವಿದಿತಾವಿದಿತಪ್ರತಿಷೇಧಾಗಮಾರ್ಥಾನುಭ
ಇತ್ಯರ್ಥಃ ॥

(ಭಾಷ್ಯಾರ್ಥ)

"ಅಥ ನು" ಎಂಬುದು (ಬ್ರಹ್ಮವನ್ನು) ಮೀಮಾಂಸೆಮಾಡತಕ್ಕದ್ದಿದೆ ಎಂ
ದಕ್ಕೆ ಕಾರಣವನ್ನು (ತಿಳಿಸುವದು). ಚೆನ್ನಾಗಿ ತಿಳಿದುಕೊಂಡೆನೆಂಬ ಬ್ರಹ್ಮದ ರೂಪ
ಅಲ್ಪವೇ ಆಗಿರುತ್ತದೆ; ಏಕೆಂದರೆ "ಅದು ತಿಳಿಯಲ್ಪಟ್ಟದ್ದಕ್ಕಿಂತಲೂ ಬೇರೆಯೇ
ಎಂದು (ಹಿಂದೆ) ಹೇಳಲಾಗಿದೆ. ಆದರೂ "ಚೆನ್ನಾಗಿ ಅರಿತುಕೊಂಡಿರುವೆನು
ಎಂದು ಎಣಿಸಿರುತ್ತೀಯೆ. ಆದ್ದರಿಂದ ನೀನು ಬ್ರಹ್ಮದ ರೂಪವನ್ನು ಸ್ವಲ್ಪವೇ ತಿಳಿ
ಕೊಂಡಿರುತ್ತೀಯೆಯೆಂದಾಯಿತಷ್ಟೆ; 'ಅಥ ನು' ಎಂದರೆ ಆದಕಾರಣ ನಿನ್ನ ಬ್ರಹ್ಮ
ಇನ್ನೂ ಮೀಮಾಂಸೆಮಾಡತಕ್ಕದ್ದೇ; "ವಿದಿತವೂ ಅಲ್ಲ, ಅವಿದಿತವೂ ಅಲ್ಲ
ಎಂಬ ಆಗಮಾರ್ಥದ ಅನುಭವವು ಆಗುವವರೆಗೂ ವಿಚಾರಮಾಡತಕ್ಕದ್ದೇ (ಆಗಿರುತ್ತದೆ
ಎಂದರ್ಥ

(ಭಾಷ್ಯ)

೧೧೮. "ಮನ್ಯೇ ವಿದಿತಮ್" ಇತಿ ಶಿಷ್ಯಸ್ಯ ಮೀಮಾಂಸಾನನ್ತರೋಕ್ತಿ
ಪ್ರತ್ಯಯತ್ರಯಸಙ್ಗತೇಃ । ಸಮ್ಯಗ್ವಸ್ತುನಿಶ್ಚಯಾಯ ವಿಚಾಲಿತಃ ಶಿಷ್ಯಃ ಆಚ
ರ್ಯೇಣ "ಮೀಮಾಂಸ್ಯಮೇವ ತೇ" ಇತಿ ಚೋಕ್ತಃ ಏಕಾನ್ತೇ ಸಮಾಹಿತೋ

---

1. ಬ್ರಹ್ಮವು ಅವಿಷಯವೇ ಎಂಬುದನ್ನು ಗಟ್ಟಿಗೊಳಿಸುವದಕ್ಕೆ.

2. ಪದಭಾಷ್ಯದಲ್ಲಿರುವ ಈ ವ್ಯಾಖ್ಯಾನವನ್ನು ಮೊದಲು ಹೇಳದೆ ಎರಡನೆಯದಾ
ಹೇಳಿರುವದೇಕೆಂಬುದು ಯೋಚಿಸತಕ್ಕದ್ದಾಗಿದೆ.

ಭೂತ್ವಾ ವಿಚಾರ್ಯ ಯಥೋಕ್ತಂ ಸುಪರಿನಿಶ್ಚಿತಃ ಸ್ನ್ ಆಹ ಆಗಮಾಚಾರ್ಯಾತ್ಮಾನುಭವಪ್ರತ್ಯಯತ್ರಯಸ್ಯ ಏಕವಿಷಯತ್ವೇನ ಸಙ್ಗತ್ಯರ್ಥಮ್ । ಏವಂ ಹಿ ಸುಪರಿನಿಷ್ಠಿತಾ (ನಿಶ್ಚಿತಾ ?) ವಿದ್ಯಾ ಸಫಲಾ ಸ್ಯಾತ್, ನಾನಿಶ್ಚಿತಾ ಇತಿ ನ್ಯಾಯಃ ಪ್ರದರ್ಶಿತೋ ಭವತಿ "ಮನ್ಯೇ ವಿದಿತಮ್" ಇತಿ । ಪರಿನಿಷ್ಠಿತ (ನಿಶ್ಚಿತ ?) ನಿಶ್ಚಿತವಿಜ್ಞಾನಪ್ರತಿಜ್ಞಾಹೇತೂಕ್ತೇಃ । ಪರಿನಿಷ್ಠಿತಂ ಸಫಲಂ ವಿಜ್ಞಾನಂ ಪ್ರತಿಜಾನೀತೇ ಆಚಾರ್ಯಾತ್ಮನಿಶ್ಚಯಯೋಸ್ತುಲ್ಯತಾಯೈ । ಯಸ್ಮಾದ್ ಹೇತುಮಾಹ "ನಾಹ ಮನ್ಯೇ ಸುವೇದೇತಿ" (ಇತಿ) ॥

(ಭಾಷ್ಯಾರ್ಥ)

"ಮನ್ಯೇ ವಿದಿತಮ್" (ತಿಳಿಯಲ್ಪಟ್ಟಿತೆಂದು ಎಣಿಸುತ್ತೇನೆ) ಎಂದು ಶಿಷ್ಯನು ವಿಚಾರಮಾಡಿದಬಳಿಕ ಹೇಳಿರುವದು ಮೂರು ಅರಿವುಗಳ ಹೊಂದಿಕೆಗಾಗಿ. ವಸ್ತುವನ್ನು ಚೆನ್ನಾಗಿ ನಿಶ್ಚಯಿಸಲಿ ಎಂದು (ಬುದ್ಧಿಯನ್ನು) ಕದಲಿಸಿ ಆಚಾರ್ಯನು "ನಿನ್ನ (ಬ್ರಹ್ಮವು) ವಿಚಾರಮಾಡತಕ್ಕದ್ದೇ" ಎಂದು ಹೇಳಿದ (ಬಳಿಕ) ಶಿಷ್ಯನು ಏಕಾಂತದಲ್ಲಿ ಸಮಾಹಿತ (ಚಿತ್ತ)ನಾಗಿ ಮೇಲೆ ಹೇಳಿದ್ದನ್ನು ವಿಚಾರಮಾಡಿ ಅತ್ಯಂತವಾಗಿ ಸರಿಯಾಗಿ ನಿಶ್ಚಯಿಸಿಕೊಂಡವನಾಗಿ **ಆಗಮ, ಆಚಾರ್ಯ, ಆತ್ಮಾನುಭವ-ಎಂಬ ಮೂರು ಅರಿವುಗಳೂ ಒಂದೇ ವಿಷಯದಲ್ಲಿ ಹೊಂದಿಕೊಳ್ಳುವದಕ್ಕಾಗಿ** (ಈಗ ತಿಳಿಯಿತೆಂದು ಎಣಿಸುತ್ತೇನೆ) ಎಂದು ಹೇಳಿರುತ್ತಾನೆ ಹೀಗೆ ಅತ್ಯಂತವಾಗಿ ನೆಲೆನಿಂತ ನಿಶ್ಚಯಿಸಿದ ವಿದ್ಯೆಯೇ ಸಫಲವಾದೀತೇ ಹೊರತು ನಿಶ್ಚಯವಿಲ್ಲದ್ದು (ಸಫಲ)ವಾಗಲಾರದು ಎಂಬ ನ್ಯಾಯವನ್ನು "ತಿಳಿಯಲ್ಪಟ್ಟಿತೆಂದು ಎಣಿಸುತ್ತೇನೆ'' ಎಂಬ ವಾಕ್ಯದಿಂದ ತೋರಿಸಿಕೊಟ್ಟಂತೆ ಆಯಿತು. ಏಕೆಂದರೆ (ಮುಂದೆ) ನೆಲೆನಿಂತ ನಿಶ್ಚಯಿಸಿದ ಜ್ಞಾನವೆಂಬುದಕ್ಕೆ ಹೇತುವನ್ನು (ಶಿಷ್ಯನು) ಹೇಳಿರುತ್ತಾನೆ: ಆಚಾರ್ಯರ ಮತ್ತು ತನ್ನ ನಿಶ್ಚಯಗಳೆರಡೂ ಸಮಾನವೆಂದು (ತಿಳಿಸು)ವದಕ್ಕಾಗಿಯೇ (ಹೀಗೆ ಹೇಳಿರುತ್ತಾನೆನ್ನಬೇಕು), ಏಕೆಂದರೆ (ತನ್ನ ಅಭಿಪ್ರಾಯಕ್ಕೆ) ಹೇತುವನ್ನು "ನಾಹ ಮನ್ಯೇ" ಎಂಬ (ಮುಂದಿನ ಮಂತ್ರದಿಂದ) ಹೇಳಿರುತ್ತಾನೆ.

## ಶಿಷ್ಯನ ಉತ್ತರ

**ನಾಹ ಮನ್ಯೇ........ನೋ ನ ವೇದೇತಿ ವೇದ ಚ ॥ ೨ ॥**

(ಭಾಷ್ಯ)

೧೧೯. "ಅಹ" ಇತ್ಯವಧಾರಣಾರ್ಥೋ ನಿಪಾತಃ । ನೈವ ಮನ್ಯೇ ಇತ್ಯೇತತ್ । ಯಾವದಪರಿನಿಷ್ಠಿತಂ (ನಿಶ್ಚಿತಂ ?) ವಿಜ್ಞಾನಮ್, ತಾವತ್ "ಸುವೇದ' ಸುಷ್ಠು ವೇದಾಹಂ ಬ್ರಹ್ಮ-ಇತಿ ವಿಪರೀತೋ ಮಮ ನಿಶ್ಚಯ ಆಸೀತ್ । ಸೋಽಪಜಗಾಮ ಭವದ್ಭಿರ್ವಿಚಾಲಿತಸ್ಯ ಯಥೋಕ್ತಾರ್ಥಮೀಮಾಂಸಾಫಲಭೂತಾತ್,

ಸ್ವಾತ್ಮಬ್ರಹ್ಮತ್ವನಿಶ್ಚಯರೂಪಾತ್, ಸಮ್ಯಕ್ಪ್ರತ್ಯಯಾತ್ । ವಿರುದ್ಧತ್ವಾತ್ । ಅತೋ ನಾಹ ಮನ್ಯೇ ಸುವೇದೇತಿ । ಯಸ್ಮಾಚ್ಚ ತತ್ ನ ವೇದೇತಿ ನೋ 'ಮನ್ಯೇ' ಇತ್ಯನುವರ್ತತೇ, ಅವಿದಿತಬ್ರಹ್ಮಪ್ರತಿಷೇಧಾತ್ ॥

(ಭಾಷ್ಯಾರ್ಥ)

"ಅಹ"[1] ಎಂಬುದು ಅವಧಾರಣೆಯನ್ನು ಹೇಳುವ ನಿಪಾತವು ಎಣಿಸುವದೇ ಇಲ್ಲ ಎಂದರ್ಥ ಎಲ್ಲಿಯವರೆಗೆ ಸರಿಯಾಗಿ ನಿಶ್ಚಿತವಾದ ತಿಳಿವಳಿಕೆಯಾಗಿರಲಿಲ್ಲವೋ ಅಲ್ಲಿಯವರೆಗೆ ಚೆನ್ನಾಗಿ ಅರಿತಿರುವೆನು, ಬ್ರಹ್ಮವನ್ನು ಚೆನ್ನಾಗಿ ಅರಿತುಕೊಂಡಿದ್ದೇನೆ ಎಂಬ ತಪ್ಪು ನಿಶ್ಚಯವು ನನಗೆ ಆಗಿತ್ತು ನೀವು (ಬುದ್ಧಿಯನ್ನು) ಕದಲಿಸಿದಮೇಲೆ ಹಿಂದೆ ಹೇಳಿದ ವಿಷಯವನ್ನು ವಿಚಾರಮಾಡಿದ್ದರ ಫಲವಾಗಿ ನನ್ನ ಆತ್ಮನೇ ಬ್ರಹ್ಮವೆಂದು ನಿಶ್ಚಯಿಸಿರುವ ರೂಪದ ಸರಿಯಾದ ಜ್ಞಾನದಿಂದ ಆ (ತಪ್ಪು ನಿಶ್ಚಯವು) ತೊಲಗಿತು ಏಕೆಂದರೆ (ಸರಿಯಾದ ತಿಳಿವಳಿಕೆಗೆ ತಪ್ಪುತಿಳಿವಳಿಕೆಯು) ವಿರುದ್ಧವಾಗಿರುತ್ತದೆ ಆದ್ದರಿಂದ (ನಾನು) ಚೆನ್ನಾಗಿ ಅರಿತುಕೊಂಡಿರುವೆನೆಂದು ಎಣಿಸುವದೇ ಇಲ್ಲ. ಮತ್ತು ಆ (ಬ್ರಹ್ಮವನ್ನು) ಅರಿತುಕೊಂಡಿಲ್ಲವೆಂದೂ 'ಎಣಿಸಿಯೇ ಇಲ್ಲ' ಎಂದು (ಹಿಂದಿನ) ಮನ್ಯೇ ಎಂಬ ಮಾತನ್ನು ಸೇರಿಸಿಕೊಳ್ಳಬೇಕು. ಏಕೆಂದರೆ ಅವಿದಿತವಾದದ್ದು (ಅರಿಯಲ್ಪಡದೆ ಇದ್ದದ್ದು) ಬ್ರಹ್ಮವಲ್ಲವೆಂದೂ (ಹಿಂದೆ) ಹೇಳಿರುತ್ತದೆ.

(ಭಾಷ್ಯ)

೧೨೦. "ಕಥಂ ತರ್ಹಿ ಮನ್ಯಸೇ?" ಇತ್ಯುಕ್ತ ಆಹ–ವೇದ ಚ । ಚಶಬ್ದಾದ್ ವೇದ ಚ ನ ವೇದಚೇತ್ಯಭಿಪ್ರಾಯಃ । ವಿದಿತಾವಿದಿತಾಭ್ಯಾಮ್ ಅನ್ಯತ್ವಾದ್ ಬ್ರಹ್ಮಣಃ । ತಸ್ಮಾತ್ ಮಯಾ ವಿದಿತಂ ಬ್ರಹ್ಮ ಇತಿ ಮನ್ಯೇ ಇತಿ ವಾಕ್ಯಾರ್ಥಃ । ಅಥವಾ ವೇದ ಚ ಇತಿ ನಿತ್ಯವಿಜ್ಞಾನಬ್ರಹ್ಮಸ್ವರೂಪತಯಾ ನೋ ನ ವೇದ ವೇದೈವ ಚಾಹಮ್, ಸ್ವರೂಪವಿಕ್ರಿಯಾಭಾವಾತ್ । ವಿಶೇಷವಿಜ್ಞಾನಂ ಚ ಪರಾಧ್ಯಸ್ತಂ ನ ಸ್ವತ ಇತಿ ಪರಮಾರ್ಥತೋ ನ ಚ ವೇದೇತಿ ॥

(ಭಾಷ್ಯಾರ್ಥ)

"ಹಾಗಾದರೆ ಏನೆಂತ ಎಣಿಸಿರುವೆ ಎಂದು (ಆಚಾರ್ಯನು) ಕೇಳಲು ಹೇಳುತ್ತಾನೆ. ಅರಿತೂ ಇದ್ದೇನೆ. 'ಚ' (ಊ) ಎಂಬ ಶಬ್ದವನ್ನು ಪಯೋಗಿಸಿರುವದರಿಂದ ಅರಿತೂ ಇಲ್ಲ ಎಂದು ಅಭಿಪ್ರಾಯ ಏಕೆಂದರೆ ಬ್ರಹ್ಮವು ವಿದಿತ, ಅವಿದಿತ–ಈ ಎರಡಕ್ಕಿಂತಲೂ ಬೇರೆಯಾಗಿರುತ್ತದೆ. ಆದ್ದರಿಂದ ನಾನು ಬ್ರಹ್ಮವನ್ನು ಅರಿತಿರುವೆಂದು ಎಣಿಸುತ್ತೇನೆ ಎಂಬುದು (ಒಟ್ಟು) ವಾಕ್ಯದ ಅರ್ಥವು. ಅಥವಾ ವೇದ ಚ ಎಂಬುದಕ್ಕೆ

1. ಪದಭಾಷ್ಯದಂತೆ "ನಾಹಮ್" ಎಂದು ಪಾಠ; ವಾಕ್ಯಭಾಷ್ಯದಂತೆ "ನಾಹ" ಎಂದು.

(ಹೀಗೂ ಅರ್ಥಮಾಡಬಹುದು), ನಿತ್ಯವಿಜ್ಞಾನವಾದ ಬ್ರಹ್ಮಸ್ವರೂಪನಾಗಿರುವದ ರಿಂದ ಅರಿತಿಲ್ಲವೆಂಬುದಿಲ್ಲ, ನಾನು ಅರಿತುಕೊಂಡೇ ಇದ್ದೇನೆ, ಏಕೆಂದರೆ ಸ್ವರೂಪ ವಾದ (ಜ್ಞಾನ)ದಲ್ಲಿ (ಯಾವ) ವಿಕಾರವೂ ಇರುವದಿಲ್ಲ.[1] ಬಿಡಿಯರಿವು ಎಂಬುದು ಮತ್ತೊಬ್ಬರಿಂದ ಆರೋಪಿತವಾಗಿರುವದೇ ಹೊರತು ತನ್ನಲ್ಲಿಯೇ ಇರುವದಿಲ್ಲ; ಆದ್ದರಿಂದ ಪರಮಾರ್ಥವಾಗಿ ಅರಿಯುವದೆಂಬುದೂ ಇಲ್ಲ ಎಂದು (ಅರ್ಥ).

(ಭಾಷ್ಯ)

೧೨೧. "ಯೋ ನ ಸ್ತದ್ವೇದ ತದ್ವೇದ" ಇತಿ ಪಕ್ಷಾನ್ತರನಿರಾಸಾರ್ಥಮಾಮ್ನಾಯಃ। ಉಕ್ತಾರ್ಥಾನುವಾದಾತ್। ಯೋ ನಃ ಅಸ್ಮಾಕಂ ಮಧ್ಯೇ ತದ್ವೇದ[2] ಸ ಏವ ತದ್ ಬ್ರಹ್ಮ ವೇದ ನಾನ್ಯಃ। ಉಪಾಸ್ಯ ಬ್ರಹ್ಮವಿತ್ತ್ವಾತ್। ಅತೋಽನ್ಯಸ್ಯ ಯಥಾಹಂ ವೇದೇತಿ ಪಕ್ಷಾನ್ತರೇ ಬ್ರಹ್ಮವಿತ್ತ್ವಂ ನಿರಸ್ಯತೇ। ಕುತೋಽಯಮರ್ಥೋಽವಸೀಯತೇ ಇತಿ?। ಉಚ್ಯತೇ। ಉಕ್ತಾನುವಾದಾತ್। ಉಕ್ತಂ ಹ್ಯನುವದತಿ "ನೋ ನ ವೇದೇತಿ ವೇದ ಚ" ಇತಿ ॥

(ಭಾಷ್ಯಾರ್ಥ)

"ಯೋ ನ ಸ್ತದ್ವೇದ ತದ್ವೇದ" ಎಂದು ಬಂದಿರುವ ವೇದವಾಕ್ಯವು ಮತ್ತೊಂದು ಪಕ್ಷವನ್ನು ತಿರಸ್ಕರಿಸುವದಕ್ಕೆ, ಏಕೆಂದರೆ ಹೇಳಿದ್ಧ ವಿಷಯವನ್ನು ಮತ್ತೆ ಅನುವಾದ ಮಾಡಿರುತ್ತದೆ. ಯಾವನು ನಮ್ಮಗಳ ಎಂದರೆ ನಮ್ಮಗಳೊಳಗೆ (ಯಾವನು) ಅದನ್ನು ತಿಳಿದಿರುವನೋ ಅವನೇ ಅದನ್ನು ತಿಳಿದಿರುವನೇ ಹೊರತು ಮಿಕ್ಕವನಲ್ಲ. ಏಕೆಂದರೆ (ಆ ಮಿಕ್ಕವನು) ಉಪಾಸ್ಯವೇ ಬ್ರಹ್ಮವೆಂದು ತಿಳಿದಿರುತ್ತಾನೆ. ಆದ್ದರಿಂದ "ನಾನು ಅರಿತುಕೊಂಡಿದೇನೆ ಅರಿತೂ ಇಲ್ಲ" ಎಂಬಂತೆ ತಿಳಿಯದೆ ಮತ್ತೊಂದು ಪಕ್ಷದಲ್ಲಿ ಯಾವನಿರುವನೋ ಅವನಲ್ಲಿ ಬ್ರಹ್ಮವಿತ್ತ್ವವನ್ನು ತಿರಸ್ಕರಿಸಿರುತ್ತದೆ.

(ಶಂಕೆ) :—ಈ ಅರ್ಥವನ್ನು ಏತರಿಂದ ನಿಶ್ಚಯಿಸಲಾಗಿದೆ?

(ಪರಿಹಾರ) :—ಹೇಳುತ್ತೇವೆ. ಏಕೆಂದರೆ ಹೇಳಿದ್ದನ್ನೇ (ಮತ್ತೆ) ಅನುವಾದಮಾಡಿದೆ. "ಅರಿತುಕೊಂಡಿಲ್ಲವೆಂತಲೂ ಇಲ್ಲ, ಅರಿತೂ ಇದ್ದೇನೆ" (ಎಂದು ಯಾವನು ಅರಿಯುತ್ತಾನೋ ಅವನೇ ಬಲ್ಲನು) ಎಂದು ಹಿಂದೆ ಹೇಳಿರುವದನ್ನೇ (ಇಲ್ಲಿ ಮತ್ತೆ) ಅನುವಾದಮಾಡಿಕೊಂಡಿರುತ್ತದೆಯಲ್ಲವೆ?[3] (ಆದ್ದರಿಂದ ಹೀಗೆಂದು ನಿಶ್ಚಯಿಸಬೇಕು).

---

1. ಆದ್ದರಿಂದ ಜ್ಞಾತೃತ್ವವಿಲ್ಲವೆಂದು ಹೇಳುವದಕ್ಕೆ ಬರುವದಿಲ್ಲ; ನಿತ್ಯಪ್ರಕಾಶನಾದ ಸೂರ್ಯನು ಬೆಳಗುವದಿಲ್ಲವೆನ್ನುವದಕ್ಕೆ ಹೇಗೆ ಬರುವದಿಲ್ಲವೋ ಹಾಗೆ.

2 (ವಾ॥) ಪಾಠವೇ ಉತ್ತಮ.

3. ಹೀಗೆ ಅರಿತುಕೊಂಡವನೇ ಬಲ್ಲನು ಎಂದದ್ದರಿಂದ ವಿಷಯವಾಗಿ ಅರಿತುಕೊಂಡವನು ಅರಿಯನು—ಎಂದು ಹೇಳಿದಂತಾಯಿತು.

## ಶ್ರುತಿಯ ಉಪಸಂಹಾರ

**ಯಸ್ಯಾಮತಂ........ವಿಜ್ಞಾತಮವಿಜಾನತಾಮ್ ॥ ೩ ॥**

(ಭಾಷ್ಯ)

೧೨೨. "ಯಸ್ಯಾಮತಮ್" ಇತಿ ಶ್ರೌತಮ್ ಆಖ್ಯಾಯಿಕಾರ್ಥೋಪಸಂಹಾರಾರ್ಥಮ್ । ಶಿಷ್ಯಾಚಾರ್ಯೋಕ್ತಿಪ್ರತ್ಯುಕ್ತಿಲಕ್ಷಣಯಾ ಅನುಭವಯುಕ್ತಿಪ್ರಧಾನಯಾ ಆಖ್ಯಾಯಿಕಯಾ ಯೋಽರ್ಥಃ ಸಿದ್ಧಃ, ಸ ಶ್ರೌತೇನ ವಚನೇನ ಆಗಮಪ್ರಧಾನೇನ ನಿಗಮನಸ್ಥಾನೀಯೇನ ಸಙ್ಕ್ಷೇಪತ ಉಚ್ಯತೇ ॥

(ಭಾಷ್ಯಾರ್ಥ)

"ಯಸ್ಯಾಮತಮ್" ಎಂಬ ಶ್ರುತಿವಚನವು ಕಥೆಯ ಅರ್ಥವನ್ನು ಉಪಸಂಹಾರಮಾಡುವದಕ್ಕೆ. ಶಿಷ್ಯನೂ ಆಚಾರ್ಯನೂ ಕೇಳಿದಂತೆ ಉತ್ತರಕೊಟ್ಟಂತೆ ಇರುವ ಅನುಭವ ಮತ್ತು ಯುಕ್ತಿಗಳೇ ಮುಖ್ಯವಾಗಿರುವ ಕಥೆಯಲ್ಲಿ ಯಾವ ವಿಷಯವು ಸಿದ್ಧವಾಯಿತೋ ಅದನ್ನು ಆಗಮಪ್ರಧಾನವಾದ[1] ನಿಗಮನಸ್ಥಾನದಲ್ಲಿರುವ[2] ಶ್ರುತಿಯ ವಚನದಿಂದ ಸಂಕ್ಷೇಪವಾಗಿ ಹೇಳಿರುತ್ತದೆ.

(ಭಾಷ್ಯ)

೧೨೩. ಯದುಕ್ತಂ ವಿದಿತಾದನ್ಯದ್ ವಾಗಾದೀನಾಮಗೋಚರತ್ವಾತ್ ಮೀಮಾಂಸಿತಂ ಚ ಅನುಭವೋಪಪತ್ತಿಭ್ಯಾಂ ಬ್ರಹ್ಮ, ತತ್ ತಥೈವ ಜ್ಞಾತವ್ಯಮ್ । ಕಸ್ಮಾತ್? ಯಸ್ಯಾಮತಂ ಯಸ್ಯ ವಿವಿದಿಷಾಪ್ರಯುಕ್ತಪ್ರವೃತ್ತಸ್ಯ ಸಾಧಕಸ್ಯ ಅಮತಮ್ ಅವಿಜ್ಞಾನಮ್ । ಅವಿದಿತಂ ಬ್ರಹ್ಮ ಇತಿ ಆತ್ಮತತ್ತ್ವನಿಶ್ಚಯಫಲಾವಸಾನಾವಬೋಧತಯಾ ವಿವಿದಿಷಾ ನಿವೃತ್ತಾ ಇತ್ಯಭಿಪ್ರಾಯಃ । ತಸ್ಯ ಮತಂ ಜ್ಞಾತಮ್ । ತೇನ ವಿದಿತಂ ಬ್ರಹ್ಮ ಯೇನ ಅವಿಷಯತ್ವೇನಾತ್ಮತ್ವೇನ ಪ್ರತಿಬುದ್ಧಮ್ ಇತ್ಯರ್ಥಃ । ಸ ಸಮ್ಯಗ್ದರ್ಶೀ ಯಸ್ಯ ವಿಜ್ಞಾನಾನನ್ತರಮೇವಬ್ರಹ್ಮಾತ್ಮಭಾವಸ್ಯಾವಸಿತತ್ವಾತ್ ಸರ್ವತಃ ಕಾರ್ಯಾಭಾವಃ । ವಿಪರ್ಯಯೇಣ ಮಿಥ್ಯಾಜ್ಞಾನೋ ಭವತಿ । ಕಥಮ್? ಮತಂ ವಿದಿತಮ್, ಜ್ಞಾತಂ ಮಯಾ ಬ್ರಹ್ಮ ಇತಿ ಯಸ್ಯ ವಿಜ್ಞಾನಮ್, ಸ ಮಿಥ್ಯಾದರ್ಶೀ ವಿಪರೀತವಿಜ್ಞಾನೋ, ವಿದಿತಾದ್ ಅನ್ಯತ್ವಾದ್ ಬ್ರಹ್ಮಣಃ, ನ ವೇದ ಸಃ ನ ವಿಜಾನಾತಿ ॥

(ಭಾಷ್ಯಾರ್ಥ)

ವಾಕ್ಕೇ ಮುಂತಾದವುಗಳಿಗೆ ವಿಷಯುವಲ್ಲದಿರುವದರಿಂದ ವಿದಿತಕ್ಕಿಂತಲೂ ಬೇರೆ ಎಂದು ಯಾವದನ್ನು ಹೇಳಿದೆಯೋ, ಅನುಭವ ಮತ್ತು ಯುಕ್ತಿ–ಈ ಎರಡರಿಂದಲೂ (ಯಾವದನ್ನು) ವಿಚಾರಮಾಡಲಾಗಿದೆಯೋ ಆ ಬ್ರಹ್ಮವನ್ನು ಹಾಗೆಯೇ

---

1. ಉಪದೇಶಪ್ರಧಾನವಾದ.
2. ಹೇತುವಿನಿಂದ ಸಮರ್ಥನೆಮಾಡಿದಬಳಿಕ ಬರುವ ಉಪಸಂಹಾರವಾಕ್ಯದಂತಿರುವ.

ಅರಿತುಕೊಳ್ಳಬೇಕು. ಏಕೆ ?–ಎಂದರೆ : 'ಯಸ್ಯಾಮತಮ್' ಯಾವ ಜಿಜ್ಞಾಸೆಯಿಂದ ಪ್ರೇರಿತನಾಗಿ ತೊಡಗಿರುವ ಸಾಧಕನಿಗೆ ಅಮತವಾಗಿರುವದೋ ಅವಿಜ್ಞಾತವಾಗಿರುವದೋ, ಎಂದರೆ ಬ್ರಹ್ಮವು ತಿಳಿಯಲ್ಪಡತಕ್ಕದ್ದಲ್ಲ ಎಂದು ಆತ್ಮತತ್ತ್ವವನ್ನು ನಿಶ್ಚಯಿಸುವದೆಂಬ ಫಲದಲ್ಲಿ ಕೊನೆಗಾಣುವ ಜ್ಞಾನವುಂಟಾಗಿ ತಿಳಿದುಕೊಳ್ಳಬೇಕೆಂಬ ಇಚ್ಛೆಯು ನೀಗಿರುವದೋ ಎಂದು ಅಭಿಪ್ರಾಯ. ಅವನಿಗೆ ಮತವಾಗಿರುವದು, ಜ್ಞಾತವಾಗಿರುವದು. ಯಾವನಿಗೆ ಅವಿಷಯವಾಗಿರುವ ಆತ್ಮನೇ ಎಂದು ತಿಳಿದಿರುವದೋ ಅವನಿಗೇ ಬ್ರಹ್ಮವು ತಿಳಿದಿರುತ್ತದೆ ಎಂದರ್ಥ. ಯಾವನಿಗೆ ಜ್ಞಾನವುಂಟಾದಕೂಡಲೆ ಬ್ರಹ್ಮವು (ತನ್ನ) ಆತ್ಮನೇ ಎಂಬ ನಿಶ್ಚಯವಾಗಿರುವದರಿಂದ ಎಲ್ಲೆಲ್ಲಿಯೂ (ಯಾವ) ಕಾರ್ಯವೂ ಇರುವದಿಲ್ಲವೋ ಅವನಿಗೇ (ಬ್ರಹ್ಮವು) ಸರಿಯಾಗಿ ತಿಳಿದಿರುವದು. ಹಾಗಿಲ್ಲದೆ ಇದ್ದರೆ ತಪ್ಪುತಿಳಿವಳಿಕೆಯುಳ್ಳವನಾಗಿರುತ್ತಾನೆ. (ಅದು) ಹೇಗೆ ? ಎಂದರೆ ಮತವಾಗಿದೆ, ವಿದಿತವಾಗಿದೆ, ನನಗೆ ಬ್ರಹ್ಮವು ತಿಳಿದಿರುತ್ತದೆ–ಎಂದು ಯಾವನಿಗೆ ಅರಿವಾಗಿರುವದೋ ಅವನು ತಪ್ಪುತಿಳಿವಳಿಕೆಯವನು, ವಿರುದ್ಧವಾಗಿ ತಿಳಿದುಕೊಂಡಿರುವವನು, ಏಕೆಂದರೆ ಬ್ರಹ್ಮವು (ನಿಜವಾಗಿ) ವಿದಿತಕ್ಕಿಂತ ಬೇರೆಯೇ ಆಗಿರುತ್ತದೆ (ಆದ್ದರಿಂದ) ಅವನು ತಿಳಿಯನು, ಅವನು (ತತ್ತ್ವವನ್ನು) ಅರಿಯನು.

(ಭಾಷ್ಯ)

೧೨೪. ತತಶ್ಚ ಸಿದ್ಧಮ್ ಅವೈದಿಕಸ್ಯ ವಿಜ್ಞಾನಸ್ಯ ಮಿಥ್ಯಾತ್ವಮ್ । ಅಬ್ರಹ್ಮವಿಷಯತಯಾ ನಿನ್ದಿತತ್ವಾತ್ । ತಥಾ ಕಪಿಲಕಣಭುಗಾದಿಸಮಯಸ್ಯಾಪಿ ವಿದಿತಬ್ರಹ್ಮವಿಷಯತ್ವಾತ್, ಅನವಸ್ಥಿತತರ್ಕಜನ್ಯತ್ವಾತ್, ವಿವಿದಿಷಾನಿವೃತ್ತೇಶ್ಚ ಮಿಥ್ಯಾತ್ವಮಿತಿ । ಸ್ಮೃತೇಶ್ಚ–"ಯಾ ವೇದಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ । ಸರ್ವಾಸ್ತಾ ನಿಷ್ಫಲಾಃ ಪ್ರೋಕ್ತಾ (?) ಸ್ತಮೋನಿಷ್ಠಾ ಹಿ ತಾಃ ಸ್ಮೃತಾಃ॥" (ಮನು, ೧೨-೯೫) ಇತಿ ॥

(ಭಾಷ್ಯಾರ್ಥ)

ಇದರಿಂದ ವೇದವಿರುದ್ಧವಾದ[1] ತಿಳಿವಳಿಕೆಯು ತಪ್ಪು (ತಿಳಿವಳಿಕೆ) ಎಂದು ಸಿದ್ಧವಾಯಿತು. ಏಕೆಂದರೆ (ಅದಕ್ಕೆ) ಬ್ರಹ್ಮವು ವಿಷಯವಲ್ಲವೆಂದು ನಿಂದಿಸಿರುತ್ತದೆ.[2] ಇದರಂತೆ **ಕಪಿಲ, ಕಣಾದ**–ಮುಂತಾದವರ ಶಾಸ್ತ್ರಜ್ಞಾನವೂ ವಿದಿತಬ್ರಹ್ಮವನ್ನೇ ತಿಳಿಸುವದರಿಂದಲೂ, ನಿಲುಗಡೆಯಿಲ್ಲದ ತರ್ಕದಿಂದ ಹುಟ್ಟುವದಾಗಿರು

1. ವೇದವು ಅನುಭವಾನುಸಾರಿಯಾಗಿದೆ ; ಅವಿಷಯವನ್ನು ವಿಷಯವೆಂದು ತಿಳಿಸುವ ಬೌದ್ಧಾದಿಗಳ ಮತವು ಅನುಭವವಿರುದ್ಧ.

2. "ಮಿಕ್ಕವರು ತಿಳಿಯಲಾರರು" ಎಂಬ ವಚನವು ನಿಂದಿಸುತ್ತದೆ.

ವದರಿಂದಲೂ, ಜಿಜ್ಞಾಸೆಯನ್ನು ನೀಗದೆ ಇರುವದರಿಂದಲೂ (ಅದೂ) ತಪ್ಪು (ತಿಳಿವಳಿಕೆಯೇ) ಎಂದು (ಸಿದ್ಧವಾಯಿತು). "ಯಾವಯಾವವು ವೇದಕ್ಕೆ ಹೊರಚ್ಚಾಗಿರುವ ಸ್ಮೃತಿಗಳೋ, ಯಾವಯಾವವು ಕುದರ್ಶನಗಳಾಗಿರುವವೋ, ಅವುಗಳೆಲ್ಲವೂ ನಿಷ್ಫಲವೆನಿಸುವವು, ಏಕೆಂದರೆ ಅವು ತಮಸ್ಸಿನಲ್ಲಿ ಕೊನೆಗಾಣುವವಾಗಿರುತ್ತವೆ" (ಮನು. ೧೨-೯೫) ಎಂಬ ಸ್ಮೃತಿಯೂ ಇದಕ್ಕೆ ಪ್ರಮಾಣವು.

(ಭಾಷ್ಯ)

೧೨೫ "ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್" ಇತಿ ಪೂರ್ವಹೇತೂಕ್ತಿಃ, ಅನುವಾದಸ್ಯಾನರ್ಥಕ್ಯಾತ್ । ಅನುವಾದಮಾತ್ರೇ ಅನರ್ಥಕಂ ವಚನಮ್, ವಿಪರೀತಮಿಥ್ಯಾಜ್ಞಾನಯೋ (?) ರ್ನಷ್ಟತ್ವಾತ್ [1] ಇತಿ ಪೂರ್ವೋಕ್ತಯೋ "ರ್ಯಸ್ಯಾಮತಮ್" ಇತ್ಯಾದಿನಾ ಜ್ಞಾನಾಜ್ಞಾನಯೋರ್ಹೇತ್ವರ್ಥತ್ವೇನ ಇದಮುಚ್ಯತೇ । ಅವಿಜ್ಞಾತಮ್ ಅವಿದಿತಮ್, ಆತ್ಮತ್ವೇನಾವಿಷಯತಯಾ ಬ್ರಹ್ಮ ವಿಜಾನತಾಂ ಯಸ್ಮಾತ್, ತಸ್ಮಾತ್ ತದೇವ ಜ್ಞಾನಮ್ । ಯತ್ ತೇಷಾಂ (?) ವಿಜ್ಞಾತಂ ವಿದಿತಂ ವ್ಯಕ್ತಮೇವ ಬುದ್ಧ್ಯಾದಿವಿಷಯಂ ಬ್ರಹ್ಮ ಅವಿಜಾನತಾಮ್ ವಿದಿತಾವಿದಿತವ್ಯಾವೃತ್ತಾತ್ಮಭೂತಂ ನಿತ್ಯವಿಜ್ಞಾನಸ್ವರೂಪಮ್ ಆತ್ಮಸ್ಥಮ್ ಅವಿಕ್ರಿಯಮಮೃತಮಜರಮಭಯಮ್ ಅನನ್ಯತ್ವಾದವಿಷಯಮ್ ಇತ್ಯೇವಮವಿಜಾನತಾಂ ಬುದ್ಧ್ಯಾದಿವಿಷಯಾತ್ಮತಯೈವ ನಿತ್ಯಂ ವಿಜ್ಞಾತಂ ಬ್ರಹ್ಮ । ತಸ್ಮಾತ್, ವಿದಿತಾವಿದಿತವ್ಯಕ್ತಾವ್ಯಕ್ತಧರ್ಮಾಧ್ಯಾರೋಪೇಣ ಕಾರ್ಯಕಾರಣಭಾವೇನ ಸವಿಕಲ್ಪಮ್ ಅಯಥಾರ್ಥವಿಷಯತ್ವಾತ್, ಶುಕ್ತಿಕಾದೌ ರಜತಾದ್ಯಧ್ಯಾರೋಪಣಜ್ಞಾನವನ್ಮಿಥ್ಯಾಜ್ಞಾನಂ ತೇಷಾಮ್ ॥

(ಭಾಷ್ಯಾರ್ಥ)

"ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್" ಎಂಬುದು ಹಿಂದೆ (ಹೇಳಿದ್ದಕ್ಕೆ) ಹೇತುವನ್ನು ಹೇಳಿದ್ದು, ಏಕೆಂದರೆ ಅನುವಾದವು ವ್ಯರ್ಥವಾಗುತ್ತದೆ. ಸುಮ್ಮನೆ (ಹಿಂದೆ ಹೇಳಿದ್ದನ್ನೇ ಇಲ್ಲಿಯೂ) ಅನುವಾದಮಾಡಿದ್ದರೆ [2] ವಚನವು ವ್ಯರ್ಥವಾಗುತ್ತದೆ, ಏಕೆಂದರೆ (ಹಿಂದಿನ ಜ್ಞಾನದಿಂದಲೇ) ವಿರುದ್ಧವಾದ ತಿಳಿವಳಿಕೆಯೂ ತಪ್ಪುತಿಳಿವಳಿ-ಯೂ (?) ಕಳೆದುಹೋಗಿರುತ್ತವೆ [1] ಆದ್ದರಿಂದ ಹಿಂದೆ

---

1 "ವಿಪರೀತಮಿಥ್ಯಾಜ್ಞಾನಯೋರ್ನಷ್ಟತ್ವಾತ್" ಎಂಬ ಮಾತುಗಳು (ಆ॥) ಪಾಠದಲ್ಲಿ ಹೆಚ್ಚು.

2. ಪೂರ್ವಾರ್ಧದಲ್ಲಿ ಹೇಳಿರುವವನ್ನೇ ಉತ್ತರಾರ್ಧದಲ್ಲಿಯೂ ಹೇಳಿದ್ದರೆ.

3. ಇದು (ವಾ॥) ಪಾಠದಂತೆ. ಅಜ್ಞಾನವನ್ನು ಕಳೆದಮೇಲೆ ಮತ್ತೆ ಉಪದೇಶಮಾಡುವದು ವ್ಯರ್ಥವೆಂದು ಭಾವ.

" ಯಸ್ಯಾಮತಮ್ '' ಎಂಬ (ಪೂರ್ವಾರ್ಧದಲ್ಲಿ) ಹೇಳಿರುವ ಜ್ಞಾನಾಜ್ಞಾನಗಳಿಗೆ ಹೇತುವನ್ನು (ತಿಳಿಸು)ವದಕ್ಕೋಸ್ಕರ (ಇದನ್ನು) ಹೇಳಿರುತ್ತದೆ (ಎನ್ನಬೇಕು).

ಅವಿಜ್ಞಾತವಾಗಿರುತ್ತದೆ, ಎಂದರೆ ತಿಳಿಯಲ್ಪಡದೆ ಇರುತ್ತದೆ ; ಆತ್ಮನಾಗಿರುವದರಿಂದ ವಿಷಯವಲ್ಲವೆಂದು ಬ್ರಹ್ಮವನ್ನು ಅರಿತುಕೊಂಡಿರುವವರಿಗೆ (ಅವಿಜ್ಞಾತವಾಗಿರುತ್ತದೆ), ಆದಕಾರಣ ಅದೇ (ಸರಿಯಾದ) ಜ್ಞಾನವು. ಆದರೆ ಅರಿಯದವರಿಗೆ ವಿಜ್ಞಾತವಾಗಿರುತ್ತದೆ, ತಿಳಿಯಲ್ಪಟ್ಟಿರುತ್ತದೆ ಎಂದರೆ ಬ್ರಹ್ಮವು ಬುದ್ಧಿಯೇ ಮುಂತಾದವುಗಳಿಗೆ ವಿಷಯವೇ ಆಗಿರುತ್ತದೆ. ವಿದಿತ, ಅವಿದಿತ–ಇವೆರಡಕ್ಕಿಂತಲೂ ಬೇರೆಯಾಗಿರುವ ಸ್ವರೂಪವುಳ್ಳದ್ದಾಗಿ ನಿತ್ಯವಿಜ್ಞಾನಸ್ವರೂಪವುಳ್ಳದ್ದಾಗಿ ಆತ್ಮನೇ ಆಗಿ ವಿಕಾರವಿಲ್ಲದೆ ಅಮೃತಸ್ವರೂಪವಾಗಿ ಮುಪ್ಪಿಲ್ಲದೆ ಅಂಜಿಕೆಯಿಲ್ಲದೆ, ತನಗಿಂತ ಬೇರೆಯಲ್ಲದ್ದರಿಂದ ವಿಷಯವಲ್ಲದೆ ಇರುವದು ಎಂದು (ಬ್ರಹ್ಮವನ್ನು) ಅರಿತುಕೊಳ್ಳದೆ ಇರುವವರಿಗೆ ಬುದ್ಧಿಯೇ ಮುಂತಾದವುಗಳಿಗೆ ವಿಷಯವಾಗಿರುವ ಸ್ವರೂಪದಿಂದಲೇ ಬ್ರಹ್ಮವು ಯಾವಾಗಲೂ ವಿಜ್ಞಾತವಾಗಿರುತ್ತದೆ ಆದ್ದರಿಂದ ವಿದಿತ, ಅವಿದಿತ, ವ್ಯಕ್ತ, ಅವ್ಯಕ್ತ-ಎಂಬ ಧರ್ಮಗಳನ್ನು ಹುಟ್ಟುಗಟ್ಟಿಕೊಂಡು ಕಾರ್ಯಕಾರಣಭಾವದಿಂದ ಸವಿಕಲ್ಪವಾಗಿರುವ ಅವರ ಜ್ಞಾನವು ಯಥಾರ್ಥವಿಷಯವನ್ನು ತಿಳಿಸದ ಇರುವದರಿಂದ ಕಪ್ಪೆಯಚಿಪ್ಪು ಮುಂತಾದವುಗಳಲ್ಲ ಬೆಳ್ಳಿಯೇ ಮುಂತಾದವುಗಳನ್ನು ಹುಟ್ಟುಗಟ್ಟುವ ಜ್ಞಾನದಂತೆ ತಪ್ಪುತಿಳಿವಳಿಕೆಯೇ (ಆಗಿರುತ್ತದೆ)

**ಪ್ರತಿಬೋಧವಿದಿತಂ . . ವಿನ್ದತೇಽಮೃತಮ್ ॥ ೪ ॥**

## ಪ್ರತ್ಯಯಗಳೇ ಆತ್ಮನನ್ನು ತಿಳಿದುಕೊಳ್ಳುವ ದ್ವಾರವು

(ಭಾಷ್ಯ)

೧೨೬ " ಪ್ರತಿಬೋಧವಿದಿತಮ್ '' ಇತಿ ವೀಪ್ಸಾ ಪ್ರತ್ಯಯಾನಾಮ್ ಆತ್ಮಾವಬೋಧದ್ವಾರತ್ವಾತ್ । ಬೋಧಂ ಪ್ರತಿ ಬೋಧಂ ಪ್ರತಿ ಇತಿ ವೀಪ್ಸಾ ಸರ್ವಪ್ರತ್ಯಯವ್ಯಾಪ್ತ್ಯರ್ಥಾ । ಬೌದ್ಧಾ ಹಿ ಸರ್ವೇ ಪ್ರತ್ಯಯಾಃ ತಪ್ತಲೋಹವನ್ನಿತ್ಯವಿಜ್ಞಾನಸ್ವರೂಪಾತ್ಮವ್ಯಾಪ್ತತ್ವಾದ್ ವಿಜ್ಞಾನಸ್ವರೂಪಾವಭಾಸಾಃ । ತದನ್ಯಾವಭಾಸಶ್ಚಾತ್ಮಾ ತದ್ವಿಲಕ್ಷಣೋಽಗ್ನಿವದುಪಲಭ್ಯತೇ ಇತಿ ತೇನ ತೇ ದ್ವಾರೀಭವನ್ತಿ ಆತ್ಮೋಪಲಬ್ಧೌ । ತಸ್ಮಾತ್ ಪ್ರತಿಬೋಧಾವಭಾಸಪ್ರತ್ಯಗಾತ್ಮತಯಾ ಯದ್ ವಿದಿತಂ ಬ್ರಹ್ಮ ತದೇವ ಮತಮ್ ತದೇವ ಸಮ್ಯಗ್ಜ್ಞಾನಂ ಯತ್[1] ಪ್ರತ್ಯಗಾತ್ಮಜ್ಞಾನಂ, ನ ವಿಷಯವಿಜ್ಞಾನಮ್ ಆತ್ಮತ್ವೇನ (?) । " ಪ್ರತ್ಯಗಾತ್ಮಾನಮೈಕ್ಷತ್ " (ಕ. ೨-೧-೧) ಇತಿ ಚ ಕಾಠಕೇ ॥

1 (ವಾ॥) ಪಾಠ.

(ಭಾಷ್ಯಾರ್ಥ)

"ಪ್ರತಿಬೋಧವಿದಿತಮ್" ಎಂದು ವೀಪ್ಸೆಯನ್ನು (ತಿಳಿಸಿರುವದು) ಪ್ರತ್ಯಯಗಳು ಆತ್ಮಜ್ಞಾನಕ್ಕೆ ದ್ವಾರವಾಗಿರುವದರಿಂದ. "ಬೋಧದಲ್ಲಿ", "ಬೋಧದಲ್ಲಿ" ಎಂದು ವೀಪ್ಸೆಯನ್ನು (ತಿಳಿಸಿರುವದು) ಎಲ್ಲಾ ಪ್ರತ್ಯಯಗಳನ್ನೂ ವ್ಯಾಪಿಸುವದಕ್ಕಾಗಿ. ಬುದ್ಧಿಯ ಪ್ರತ್ಯಯಗಳೆಲ್ಲ ಕಾಯಿಸಿದ ಕಬ್ಬಿಣದಂತೆ ನಿತ್ಯವಿಜ್ಞಾನಸ್ವರೂಪನಾದ ಆತ್ಮನಿಂದ ವ್ಯಾಪ್ತವಾಗಿರುವದರಿಂದ ವಿಜ್ಞಾನಸ್ವರೂಪವುಳ್ಳವುಗಳಂತೆಯೇ ತೋರುತ್ತಿರುವವು. ಅವುಗಳಿಗಿಂತ ಬೇರೆಯಾಗಿ ತೋರುತ್ತಿರುವ ಅವುಗಳಿಗಿಂತ ಬೇರೆಯ ಸ್ವಭಾವದವನಾದ ಆತ್ಮನು ಬೆಂಕಿಯಂತೆ[1] (ಬೇರೆ) ತೋರುತ್ತಿರುತ್ತಾನೆ. ಆದ್ದರಿಂದ ಆ ಪ್ರತ್ಯಯಗಳು ಆತ್ಮನನ್ನು ಅರಿತುಕೊಳ್ಳುವದಕ್ಕೆ ದ್ವಾರವಾಗಿರುತ್ತವೆ.

ಆದ್ದರಿಂದ ಪ್ರತಿಯೊಂದು ಪ್ರತ್ಯಯದ ತೋರಿಕೆಗೆ ಒಳ ಆತ್ಮನಾಗಿರುವದೆಂದು ಯಾವ ಬ್ರಹ್ಮವನ್ನು ಅರಿಯುವೆವೋ ಅದೇ ಮತವು ಪ್ರತ್ಯಗಾತ್ಮನೆಂಬ ಜ್ಞಾನವೇ ಸರಿಯಾದ ತಿಳಿವಳಿಕೆ, ವಿಷಯವೆಂದು ತಿಳಿಯುವದಲ್ಲ ಏಕೆಂದರೆ ಅದು ಆತ್ಮನೇ ಆಗಿರುತ್ತದೆ[2] "(ವಿವೇಕಿಯಾದವನು) ಒಳಗಿನ ಆತ್ಮನನ್ನು ನೋಡುತ್ತಾನೆ" (ಕ. ೨-೧-೧) ಎಂದು ಕಾಠಕದಲ್ಲಿ ಹೇಳಿಯೂ ಇರುತ್ತದೆ

(ಭಾಷ್ಯ)

೧೨೭. "ಅಮೃತತ್ವಂ ಹಿ ವಿನ್ದತೇ" ಇತಿ ಹೇತುವಚನಂ ವಿಪರ್ಯಯೇ ಮೃತ್ಯುಪ್ರಾಪ್ತೇಃ । ವಿಷಯಾತ್ಮವಿಜ್ಞಾನೇ ಹಿ ಮೃತ್ಯುಃ ಪ್ರಾರಭತೇ (?) ಇತ್ಯಾತ್ಮವಿಜ್ಞಾನಮ್ ಅಮೃತತ್ವನಿಮಿತ್ತಮಿತಿ ಯುಕ್ತಂ ಹೇತುವಚನಮ್ "ಅಮೃತತ್ವಂ ಹಿ ವಿನ್ದತೇ" ಇತಿ । ಆತ್ಮಜ್ಞಾನೇನ ಕಿಮಮೃತತ್ವಮ್ ಉತ್ಪಾದ್ಯತೇ? ನ । ಕಥಂ ತರ್ಹಿ? ಆತ್ಮನಾ ವಿನ್ದತೇ ಸ್ವೇನೈವ ನಿತ್ಯಾತ್ಮಸ್ವಭಾವೇನ ಅಮೃತತ್ವಂ ವಿನ್ದತೇ, ನಾಲಮ್ಬನಪೂರ್ವಕಮ್ । "ವಿನ್ದತೇ" ಇತ್ಯಾತ್ಮವಿಜ್ಞಾನಾಪೇಕ್ಷಮ್ । ಯದಿ ಹಿ ವಿದ್ಯೋತ್ಪಾದ್ಯಮ್ ಅಮೃತತ್ವಂ ಸ್ಯಾತ್, ಅನಿತ್ಯಂ ಭವೇತ್ ಕರ್ಮಕಾರ್ಯವತ್ । ಅತೋ ನ ವಿದ್ಯೋತ್ಪಾದ್ಯಮ್ ॥

(ಭಾಷ್ಯಾರ್ಥ)

"ಏಕೆಂದರೆ ಅಮೃತತ್ವವನ್ನು ಹೊಂದುತ್ತಾನೆ" ಎಂದು ಹೇತುವನ್ನು ಹೇಳಿರುವದೇಕೆಂದರೆ ಹಾಗಿ ದಿದ್ದರೆ ಮೃತ್ಯುಪ್ರಾಪ್ತಿಯಾಗುವದರಿಂದ. ವಿಷಯರೂಪನಾದ

---

1. ಕಾಯಿಸಿದ ಕಬ್ಬಿಣಕ್ಕಿಂತ ಕಾವಿನಸ್ವರೂಪವಾದ ಬೆಂಕಿಯು ಬೇರೆಯಾಗಿರುವಂತೆ.

2. "ಆತ್ಮತ್ವೇನ" ಎಂಬ ಮಾತಿಗೆ ಟೀಕೆಯಲ್ಲಿ ಈ ಅರ್ಥವನ್ನು ಕೊಟ್ಟಿದೆ. ಈ ಮಾತು ಇಲ್ಲಿ ಅವಶ್ಯವೇ ಇಲ್ಲವೆಂದು ತೋರುವದು.

ಆತ್ಮನನ್ನು ಅರಿತುಕೊಂಡರೆ[1] ಮೃತ್ಯುವು (ಭಯವನ್ನುಂಟು)ಮಾಡುತ್ತದೆಯಾದ್ದರಿಂದ (?)[2] ಆತ್ಮವಿಜ್ಞಾನವೇ ಅಮೃತತ್ವಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ "ಏಕೆಂದರೆ ಅಮೃತತ್ವವನ್ನು ಹೊಂದುತ್ತಾನೆ" ಎಂದು ಹೇತುವನ್ನು ಹೇಳಿರುವದು ಸರಿಯಾಗಿದೆ.

(ಶಂಕೆ) – ಆತ್ಮಜ್ಞಾನದಿಂದ ಅಮೃತತ್ವವು (ಹೊಸದಾಗಿ) ಹುಟ್ಟಿಸಲ್ಪಡುವದೇನು ?

(ಪರಿಹಾರ) – ಇಲ್ಲ ಮತ್ತೇನೆಂದರೆ ತನ್ನಿಂದಲೇ ಪಡೆದುಕೊಳ್ಳುತ್ತಾನೆ. ತನ್ನದೇ ಆಗಿರುವ ನಿತ್ಯವಾದ ಆತ್ಮಸ್ವಭಾವದಿಂದ ಅಮೃತತ್ವವನ್ನು ಹೊಂದುತ್ತಾನೆ, (ಮತ್ತೊಂದನ್ನು) ಆಶ್ರಯಿಸುವ ಮೂಲಕವಾಗಿ (ಹೊಂದುವ)ದಿಲ್ಲ. (ಇಲ್ಲಿ) "ಹೊಂದುತ್ತಾನೆ" ಎಂದು (ಹೇಳಿರುವದು) ವಿಜ್ಞಾನದ ಅಪೇಕ್ಷೆಯಿಂದ[3], ಜ್ಞಾನದಿಂದ ಅಮೃತತ್ವವು (ಹೊಸದಾಗಿ) ಹುಟ್ಟತಕ್ಕದ್ದಾಗಿದ್ದರೆ ಕರ್ಮದ ಕಾರ್ಯದಂತೆ (ಅದೂ) ಅನಿತ್ಯವಾಗುತ್ತಿತ್ತು. ಆದ್ದರಿಂದ (ಅದು) ಜ್ಞಾನದಿಂದ ಹುಟ್ಟತಕ್ಕದ್ದಲ್ಲ

(ಭಾಷ್ಯ)

೧೨೮ ಯದಿ ಚಾತ್ಮನೈವಾಮೃತತ್ವಂ ವಿನ್ದತೇ ಕಿಂ ಪುನರ್ವಿದ್ಯಯಾ ಕ್ರಿಯತ ಇತಿ । ಉಚ್ಯತೇ । ಅನಾತ್ಮವಿಜ್ಞಾನಂ ನಿವರ್ತಯನ್ತೀ ಸಾ ತನ್ನಿವೃತ್ತ್ಯಾ ಸ್ವಾಭಾವಿಕಸ್ಯ ಅಮೃತತ್ವಸ್ಯ ನಿಮಿತ್ತಮ್ ಇತಿ ಕಲ್ಪ್ಯತೇ । ಯತ ಆಹ "ವೀರ್ಯಂ ವಿದ್ಯಯಾ ವಿನ್ದತೇ" । ವೀರ್ಯಂ ಸಾಮರ್ಥ್ಯಮ್, ಅನಾತ್ಮಾಧ್ಯಾರೋಪಮಾಯಾಸ್ವಾನ್ತಧ್ವಾನ್ತಾನಭಿಭಾವ್ಯಲಕ್ಷಣಂ ಬಲಂ ವಿದ್ಯಯಾ ವಿನ್ದತೇ । ತಚ್ಚ ಕಿಂ ವಿಶಿಷ್ಟಮ್ ? ಅಮೃತಮ್, ಅವಿನಾಶಿ । ಅವಿದ್ಯಾಜಂ ಹಿ ವೀರ್ಯಂ ವಿನಾಶಿ । ವಿದ್ಯಯಾ ಅವಿದ್ಯಾಯಾ ಬಾಧ್ಯತ್ವಾತ್ । ನ ತು ವಿದ್ಯಾಯಾ ಬಾಧಕೋಽಸ್ತೀತಿ ವಿದ್ಯಾಜಮ್ ಅಮೃತಂ ವೀರ್ಯಮ್ । ಅತೋ ವಿದ್ಯಾ ಅಮೃತತ್ವೇ ನಿಮಿತ್ತಮಾತ್ರಂ ಭವತಿ । 'ನಾಯಮಾತ್ಮಾ ಬಲಹೀನೇನ ಲಭ್ಯಃ" (ಮು. ೩-೨-೪) ಇತಿ ಚಾಥರ್ವಣೇ । ಲೋಕೇಽಪಿ ವಿದ್ಯಾಜಮೇವ ಬಲಮ್ ಅಭಿಭವತಿ ನ ಶರೀರಾದಿ ಸಾಮರ್ಥ್ಯಂ ಯಥಾ ಹಸ್ತ್ಯಾದೇಃ ॥

---

1 ಆತ್ಮನು ವಿಷಯನೆಂದೂ ಉಪಾಸ್ಯನೆಂದೂ ಅರಿತುಕೊಂಡರೆ.

2. ಇದು ಟೀಕಾನುಸಾರವಾಗಿ ಕನ್ನಡಿಸಿದ್ದು. "ಮೃತ್ಯುಂ ಪ್ರಾಪ್ನೋತಿ" ಅಥವಾ "ವಿಷಯಾತ್ಮಜ್ಞಾನಂ ಹಿ ಮೃತ್ಯುಂ ಪ್ರಾರಭತೇ" ಎಂದು ಮೂಲವಿದ್ದಿರಬೇಕೆಂದು ತೋರುವದು.

3. ಅರಿತುಕೊಂಡರೆ ಮೊದಲು ಇದ್ದದ್ದೇ ಹೊಸದಾಗಿ ಪ್ರಾಪ್ತವಾದಂತೆ ಆಗುತ್ತದೆ_ ಎಂದು ಭಾವ.

(ಭಾಷ್ಯಾರ್ಥ)

(ಶಂಕೆ) :—ಹೀಗೆ ಆತ್ಮನಿಂದಲೇ ಅಮೃತತ್ವವನ್ನು ಹೊಂದುತ್ತಾನೆಂದಾದರೆ ವಿದ್ಯೆಯಿಂದ ಆಗುವದಾದರೂ ಏನು ?

(ಪರಿಹಾರ) —ಹೇಳುತ್ತೇವೆ (ಕೇಳಿರಿ) : ಆ (ವಿದ್ಯೆಯು) ಅನಾತ್ಮದ ತಿಳಿವಳಿಕೆಯನ್ನು ತೊಲಗಿಸಿ ಅದರ ನಿವೃತ್ತಿಯಿಂದ(ಲೇ) ಸ್ವಾಭಾವಿಕವಾಗಿರುವ ಅಮೃತತ್ವಕ್ಕೆ ಕಾರಣವಾಗಿರುತ್ತದೆಯೆಂದು ಕಲ್ಪಿಸಲಾಗಿದೆ. ಆದ್ದರಿಂದಲೇ (ಮಂತ್ರವು) "ವಿದ್ಯೆಯಿಂದ ವೀರ್ಯವನ್ನು ಹೊಂದುತ್ತಾನೆ "[1] ಎಂದು ಹೇಳುತ್ತದೆ. ವೀರ್ಯವೆಂದರೆ ಸಾಮರ್ಥ್ಯವು. ಅನಾತ್ಮವನ್ನು ಹುಟ್ಟುಗಟ್ಟುವದೆಂಬ ಮಾಯೆಯ ಹೃದಯಭ್ರಾಂತಿಯಿಂದ[2] ಸೋಲಿಸಲಾಗದ ಸ್ವರೂಪವುಳ್ಳ ಬಲವನ್ನು ವಿದ್ಯೆಯಿಂದ ಹೊಂದುತ್ತಾನೆ. ಅದು ಎಂಥ ವಿಶೇಷಣವುಳ್ಳದ್ದು ? ಎಂದರೆ ಅಮೃತವಾದದ್ದು, ನಾಶವಿಲ್ಲದ್ದು[3] ಅವಿದ್ಯೆಯಿಂದ ಉಂಟಾಗಿರುವ ವೀರ್ಯವೇ ವಿನಾಶಿಯಾಗಿರುವದು , ಏಕೆಂದರೆ ವಿದ್ಯೆಯಿಂದ ಅವಿದ್ಯೆಯು ಬಾಧಿತವಾಗುತ್ತದೆ. ಆದರೆ ವಿದ್ಯೆಗೆ (ಯಾವ) ಬಾಧಕವೂ ಇರುವದಿಲ್ಲವಾದ್ದರಿಂದ ವಿದ್ಯೆಯಿಂದ ಉಂಟಾಗುವ ವೀರ್ಯವು ಅಮೃತವಾಗಿರುತ್ತದೆ. ಆದ್ದರಿಂದ ವಿದ್ಯೆಯು ಅಮೃತತ್ವಕ್ಕೆ ನಿಮಿತ್ತಮಾತ್ರವಾಗಿರುತ್ತದೆ, (ಅದನ್ನು ಹೊಸದಾಗಿ ಉಂಟುಮಾಡುವದಿಲ್ಲ). "ಈ ಆತ್ಮನು ಬಲಹೀನನಿಗೆ ಸಿಕ್ಕುವನಲ್ಲ" (ಮು. ೩-೨ ೪) ಎಂದು **ಆಥರ್ವಣದಲ್ಲಿ** (ಹೇಳಿಯೂ ಇರುತ್ತದೆ) ಲೋಕದಲ್ಲಿಯೂ ವಿದ್ಯೆಯಿಂದ ಆಗಿರುವ ಬಲವೇ (ಮಿಕ್ಕದ್ದನ್ನು) ಗೆಲ್ಲುತ್ತದೆಯೇ ಹೊರತು ಆನೆಯೇ ಮುಂತಾದವುಗಳ ಶರೀರವೇ ಮುಂತಾದವುಗಳ ಸಾಮರ್ಥ್ಯವು (ಗೆಲ್ಲುವ)ದಿಲ್ಲ.

(ಭಾಷ್ಯ)

೧೫. ಅಥವಾ "ಪ್ರತಿಬೋಧವಿದಿತಂ ಮತಮ್" ಇತಿ ಸಕೃದೇವ ಅಶೇಷವಿಪರೀತನಿರಸ್ತಸಂಸ್ಕಾರೇಣ (?) ಸ್ವಪ್ನಪ್ರತಿಬೋಧವದ್ ಯದ್ ವಿದಿತಂ ತದೇವ ಮತಂ ಜ್ಞಾತಂ ಭವತೀತಿ । ಅಥವಾ ಗುರೂಪದೇಶಃ ಪ್ರತಿಬೋಧಃ । ತೇನ ವಾ ವಿದಿತಂ ಮತಮಿತಿ । ಉಭಯತ್ರ ಪ್ರತಿಬೋಧಶಬ್ದಪ್ರಯೋಗೋಽಸ್ತಿ "ಸುಪ್ತಪ್ರತಿಬುದ್ಧಃ", "ಗುರುಣಾ ಪ್ರತಿಬೋಧಿತಃ" ಇತಿ । ಪೂರ್ವಂ ತು ಯಥಾರ್ಥಮ್ ॥

1. ಪದಭಾಷ್ಯದಲ್ಲಿ ಆತ್ಮನಿಂದ ವೀರ್ಯವನ್ನು ಹೊಂದುತ್ತಾನೆ ಎಂದು ಅನ್ವಯಿಸಿದೆ.

2 ಈ ಸಮಸ್ತಪದಕ್ಕೆ ಟೀಕೆಯಲ್ಲಿ ಕೊಟ್ಟಿರುವ ವಿವರಣೆ ಹೀಗಿದೆ . (ಸ್ವಸ್ಥ ಎಂದರೆ) ತನ್ನ (?) ಅಂತವು ಯಾವ ಧ್ವಾಂತದಿಂದಾಗುವದೋ ಅದು ಸ್ವಾಂತಧ್ವಾಂತವು, ಅನಾತ್ಮಾರೋಪವು. ಮಾಯೆಯೆಂದರೆ ಪರಮೇಶ್ವರಶಕ್ತಿ ; ಜೀವತ್ವನಿಮಿತ್ತವಾದ ಅಜ್ಞಾನವು ಸ್ವಾಂತಧ್ವಾಂತವು (?)—ಈ ಯಾವದರಿಂದಲೂ ಆತ್ಮನು ಸೋಲಿಸಲಾಗದವನಾಗುವದಕ್ಕೆ ಕಾರಣವಾದದ್ದು ವಿದ್ಯೆ.

3. ಪದಭಾಷ್ಯದಲ್ಲಿ ವೀರ್ಯಕ್ಕೆ ಅಮೃತವೆಂಬುದನ್ನು ವಿಶೇಷಣವಾಗಿ ಮಾಡಿಲ್ಲ.

(ಭಾಷ್ಯಾರ್ಥ)

ಅಥವಾ “ಪ್ರತಿಬೋಧವಿದಿತಂ ಮತಮ್” ಎಂಬುದಕ್ಕೆ ಒಂದೇಪಟ್ಟಿಗೆ ಸ್ವಲ್ಪವೂ ಉಳಿಯದಂತೆ ವಿಪರೀತಸಂಸ್ಕಾರವನ್ನು ಬಾಧಿಸಿರುವ (ಜ್ಞಾನದಿಂದ)[1] ಕನಸಿನಿಂದ ಎಚ್ಚತ್ತಂತೆ ಯಾವದು ವಿದಿತವಾಗುವದೋ ಅದೇ ಮತವು, ಜ್ಞಾತವಾಗುತ್ತದೆ-ಎಂದಾಗಲಿ, ಅಥವಾ ಗುರೂಪದೇಶವೇ ಪ್ರತಿಬೋಧವು, ಆ (ಪ್ರತಿಬೋಧದಿಂದ) ತಿಳಿದದ್ದೇ (ಸರಿಯಾಗಿ) ಮತವಾಗುತ್ತದೆ ಎಂದಾಗಲಿ (ಅರ್ಥವನ್ನು ಹೇಳಬಹುದು). ಈ ಎರಡು ಅರ್ಥ[2]ಗಳಲ್ಲಿಯೂ ಪ್ರತಿಬೋಧಶಬ್ದಕ್ಕೆ ಪ್ರಯೋಗವಿದೆ ಹೇಗೆಂದರೆ “ಸುಪ್ತಪ್ರತಿಬುದ್ಧಃ” (ನಿದ್ರಿಸುತ್ತಿದ್ದು ಎಚ್ಚತ್ತನು), “ಗುರುಣಾ ಪ್ರತಿಬೋಧಿತಃ” (ಗುರುವಿನಿಂದ ಉಪದಿಷ್ಟನಾದನು). ಆದರೆ ಮೊದಲನೆಯ ಅರ್ಥವೇ ಸರಿಯಾದದ್ದು.

## ಆತ್ಮನನ್ನು ಇಲ್ಲಿಯೇ ಅರಿಯಬೇಕು

**ಇಹ ಚೇದವೇದೀದಥ ... ಭವನ್ತಿ ॥ ೫ ॥**

(ಭಾಷ್ಯ)

೧೩೦ “ಇಹ ಚೇದವೇದೀತ್” ಇತ್ಯವಶ್ಯಕರ್ತವ್ಯತೋಕ್ತಿಃ, ವಿಪರ್ಯಯೇ ವಿನಾಶಶ್ರುತೇಃ । ಇಹ ಮನುಷ್ಯಜನ್ಮನಿ ಸತಿ, ಅವಶ್ಯಮಾತ್ಮಾ ವೇದಿತವ್ಯಃ ಇತ್ಯೇತದ್ ವಿಧೀಯತೇ । ಕಥಮ್ ? ಇಹ ಚೇದವೇದೀತ್ ವಿದಿತವಾನ್ । ಅಥ ಸತ್ಯಂ ಪರಮಾರ್ಥತತ್ತ್ವಮ್ ಅಸ್ತ್ಯವಾಪ್ತಮ್ । ತಸ್ಯ ಜನ್ಮ ಸಫಲಮ್ ಇತ್ಯಭಿಪ್ರಾಯಃ । ನ ಚೇದಿಹಾವೇದೀತ್ ನ ವಿದಿತವಾನ್ ವೃಥೈವ ಜನ್ಮ । ಅಪಿ ಚ ಮಹತೀ ವಿನಷ್ಟಿಃ ಮಹಾನ್ ವಿನಾಶೋ ಜನ್ಮಮರಣಪ್ರಬನ್ಧಾವಿಚ್ಛೇದಪ್ರಾಪ್ತಿಲಕ್ಷಣಃ ಸ್ಯಾತ್ । ಯತಃ ತಸ್ಮಾತ್ ಅವಶ್ಯಂ ತದ್ವಿಚ್ಛೇದಾಯ ಜ್ಞೇಯ ಆತ್ಮಾ ॥

(ಭಾಷ್ಯಾರ್ಥ)

“ಇಹ ಚೇದವೇದೀತ್” ಎಂಬುದು (ಆತ್ಮಜ್ಞಾನವನ್ನು) ಅವಶ್ಯವಾಗಿ ಮಾಡಿಕೊಳ್ಳಬೇಕೆಂದು ಹೇಳುತ್ತದೆ. ಏಕೆಂದರೆ ಹೀಗಿಲ್ಲದೆಹೋದರೆ ವಿನಾಶವಾಗುವದೆಂದು ಶ್ರುತಿಯು (ಹೇಳುತ್ತಿದೆ). ಇಲ್ಲಿ ಎಂದರೆ ಮನುಷ್ಯಜನ್ಮವಿರುವಾಗ ಅವಶ್ಯವಾಗಿ ಆತ್ಮನನ್ನು ತಿಳಿದುಕೊಳ್ಳಬೇಕು ಎಂಬುದನ್ನು ವಿಧಿಸಿರುತ್ತದೆ. ಹೇಗೆಂದರೆ : ಇಲ್ಲಿ ತಿಳಿದುಕೊಂಡರೆ, ತಿಳಿದುಕೊಂಡನಾದರೆ, ಆಗ ಸತ್ಯವಿದೆ ಎಂದರೆ ಪರ

---

1. ಟೀಕೆಯಂತೆ ಕನ್ನಡಿಸಿದೆ. ‘ನಿರಸ್ತಾಶೇಷವಿಪರೀತಸಂಸ್ಕಾರೇಣ’ ಎಂದು ಇದ್ದರೆ ಚೆನ್ನಾಗಿತ್ತು. ಇದು ಸದ್ಯೋಮುಕ್ತಿವಾದವೆಂದು ಟೀಕೆಯಲ್ಲಿದೆ. ಈ ವ್ಯಾಖ್ಯಾನವನ್ನು ಪದಭಾಷ್ಯದಲ್ಲಿ ನಿರಾಕರಿಸಿದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು.

2. ಪ್ರತಿಬೋಧಶಬ್ದಕ್ಕೆ ಎಚ್ಚರ, ಉಪದೇಶ–ಎಂಬ ಎರಡು ಅರ್ಥಗಳೂ ಇವೆಯೆಂದಭಿಪ್ರಾಯ.

ಮಾರ್ಥತತ್ತ್ವವನ್ನು ಪಡೆದಂತಾಯಿತು, ಅವನ ಜನ್ಮವು ಸಫಲವು ಎಂದಭಿಪ್ರಾಯ. ಇಲ್ಲಿ ಅರಿಯಲಿಲ್ಲವಾದರೆ ಅರಿತುಕೊಂಡನಿಲ್ಲವಾದರೆ ಜನ್ಮವು ವ್ಯರ್ಥವೇ. ಇದೂ ಅಲ್ಲದೆ ಮಹತ್ತಾದ ವಿನಷ್ಟಿಯು ಎಂದರೆ ಜನ್ಮಮರಣಗಳ ಸಾಲುಗಳು ಕಡಿವಡಿಯದೆ ಇರುವದೆಂಬ ದೊಡ್ಡ ವಿನಾಶವಾಗುವದು. ಹೀಗಿರುವದರಿಂದ ಅದನ್ನು ಕಡಿದುಹಾಕುವದಕ್ಕಾಗಿ ಅವಶ್ಯವಾಗಿ ಆತ್ಮನನ್ನು ಅರಿತುಕೊಳ್ಳಬೇಕು.

(ಭಾಷ್ಯ)

೧೩೧. ಜ್ಞಾನೇನ ತು ಕಿಂ ಸ್ಯಾತ್ ಇತಿ? ಉಚ್ಯತೇ। ಭೂತೇಷು ಭೂತೇಷು ಚರಾಚರೇಷು ಸರ್ವೇಷ್ವಿತ್ಯರ್ಥಃ। ವಿಚಿತ್ಯ ಪೃಥಙ್ನಿಷ್ಕೃಷ್ಯ। ಏಕಮಾತ್ಮತತ್ತ್ವಂ ಸಂಸಾರಧರ್ಮೈರಸ್ಪೃಷ್ಟಮ್ ಆತ್ಮಭಾವೇನೋಪಲಭ್ಯ ಇತ್ಯರ್ಥಃ। ಅನೇಕಾರ್ಥತ್ವಾದ್ಧಾತೂನಾಮ್। ನ ಪುನಃ "ಚಿತ್ವಾ" ಇತಿ ಸಮ್ಭವತಿ, ವಿರೋಧಾತ್। ಧೀರಾಃ ಧೀಮನ್ತಃ, ವಿವೇಕಿನಃ, ವಿನಿವೃತ್ತಬಾಹ್ಯವಿಷಯಾಭಿಲಾಷಾಃ। ಪ್ರೇತ್ಯ ವ್ಯಾವೃತ್ಯ ಅಸ್ಮಾಲ್ಲೋಕಾತ್ ಶರೀರಾದ್ಯನಾತ್ಮಲಕ್ಷಣಾದ್, ವ್ಯಾವೃತ್ತಮಮತ್ವಾಹಙ್ಕಾರಾಃ ಸನ್ತ ಇತ್ಯರ್ಥಃ। ಅಮೃತಾ ಅಮರಣಧರ್ಮಾಣೋ ನಿತ್ಯವಿಜ್ಞಾನಾಮೃತಸ್ವಭಾವಾ ಏವ ಭವನ್ತಿ ॥

(ಭಾಷ್ಯಾರ್ಥ)

ಜ್ಞಾನದಿಂದ ಏನಾಗುವದು? ಎಂದರೆ ಹೇಳಲಾಗುತ್ತದೆ. ಭೂತಗಳಲ್ಲಿ ಭೂತಗಳಲ್ಲಿ ಚರಾಚರರೂಪವಾದ ಸಮಸ್ತಭೂತಗಳಲ್ಲಿ ಎಂದರ್ಥ. ವಿಚಿತ್ಯ ಎಂದರೆ ಬೇರೆಯಾಗಿ ವಿಂಗಡಿಸಿಕೊಂಡು, ಸಂಸಾರಧರ್ಮಗಳ ಸೋಂಕಿಲ್ಲದ ಒಂದೇ ಆಗಿರುವ ಆತ್ಮತತ್ತ್ವವನ್ನು (ತಮ್ಮ) ಆತ್ಮನೆಂದು ಕಂಡುಕೊಂಡು ಎಂದರ್ಥ. ಏಕೆಂದರೆ ಧಾತುಗಳಿಗೆ ಅನೇಕ ಅರ್ಥಗಳುಂಟು. ಇದಕ್ಕೆ ಬದಲು "ವಿಚಿತ್ಯ" ಎಂಬುದಕ್ಕೆ ರಾಶಿಹಾಕಿ ಎಂದು ಅರ್ಥವನ್ನು ಮಾಡುವದಕ್ಕೆ ಆಗುವದೇ ಇಲ್ಲ, ಏಕೆಂದರೆ ಅದು (ಪ್ರಕೃತಕ್ಕೆ) ವಿರುದ್ಧವಾಗುವದು. ಧೀರರಾಗಿ ಎಂದರೆ ಬುದ್ಧಿವಂತರಾಗಿ, ಹೊರಗಿನ ವಿಷಯಗಳಲ್ಲಿ ಅಭಿಲಾಷೆಯನ್ನು ತೊರೆದವರಾಗಿ ಎಂದರ್ಥ. ಪ್ರೇತ್ಯ ಎಂದರೆ ಸತ್ತು[1]. ಈ ಲೋಕದಿಂದ ಶರೀರವೇ ಮುಂತಾದ ಅನಾತ್ಮರೂಪವಾಗಿರುವ ಲೋಕದಿಂದ ನನ್ನದು ನಾನು ಎಂಬಿವನ್ನು ಬಿಟ್ಟು ಎಂದರ್ಥ. ಅಮೃತರು ಎಂದರೆ ಮರಣವೆಂಬ ಧರ್ಮವಿಲ್ಲದವರು, ನಿತ್ಯಜ್ಞಾನವಾದ ಅಮೃತಸ್ವಭಾವದವರೇ ಆಗುವರು.



1. ಇದು ಹೆಚ್ಚಿಗೆಯ ಮಾತೆಂದು ತೋರುವದು.

## ಮೂರನೆಯ ಖಂಡ

### ಯಕ್ಷೋಪಾಖ್ಯಾನದ ಸಂಬಂಧ

(ಭಾಷ್ಯ)

೧೩೨. ಬ್ರಹ್ಮ ಹ ದೇವೇಭ್ಯಃ '' ಇತಿ ಬ್ರಹ್ಮಣೋ ದುರ್ವಿಜ್ಞೇಯತೋಕ್ತಿರ್ಯತ್ನಾಧಿಕ್ಯಾರ್ಥಾ । ಸಮಾಪ್ತಾ ಬ್ರಹ್ಮವಿದ್ಯಾ ಯದಧೀನಃ ಪುರುಷಾರ್ಥಃ । ಅತ ಊರ್ಧ್ವಮ್ ಅರ್ಥವಾದೇನ ಬ್ರಹ್ಮಣೋ ದುರ್ವಿಜ್ಞೇಯತಾ ಉಚ್ಯತೇ । ತದ್ವಿಜ್ಞಾನೇ ಕಥಂ ನು ನಾಮ ಯತ್ನಮಧಿಕಂ ಕುರ್ಯಾತ್ ಇತಿ ॥

(ಭಾಷ್ಯಾರ್ಥ)

"ಬ್ರಹ್ಮ ಹ ದೇವೇಭ್ಯಃ'' ಎಂಬ ಗ್ರಂಥದಲ್ಲಿ ಬ್ರಹ್ಮವು ತಿಳಿಯುವದಕ್ಕೆ ಕಷ್ಟವಾದದ್ದು ಎಂದು ಹೇಳಿರುವದು ಯತ್ನವು ಹೆಚ್ಚಾಗಲಿ ಎಂಬುದಕ್ಕಾಗಿ. ಬ್ರಹ್ಮ ವಿದ್ಯೆಯು ಮುಗಿಯಿತು, ಪುರುಷಾರ್ಥವು ಅದರ ಅಧೀನವಾಗಿರುತ್ತದೆ. ಇನ್ನು ಮೇಲೆ ಅರ್ಥವಾದಮೂಲಕವಾಗಿ ಬ್ರಹ್ಮವು ತಿಳಿಯುವದಕ್ಕೆ ಕಷ್ಟವಾಗಿರುವದು ಎಂದು ಹೇಳಲಾಗುತ್ತದೆ. (ಏಕೆಂದರೆ) ಹೇಗಾದರೂ ಆ ಬ್ರಹ್ಮವನ್ನು ತಿಳಿಯುವದರಲ್ಲಿ ಹೆಚ್ಚಿನ ಯತ್ನವನ್ನು (ಸಾಧಕರು) ಮಾಡಲಿ ಎಂಬುದೇ (ಉದ್ದೇಶವು).

(ಭಾಷ್ಯ)

೧೩೩ ಶಮಾದ್ಯರ್ಥೋ ವಾಮ್ನಾಯಃ, ಅಭಿಮಾನಶಾತನಾತ್ । ಶಮಾದಿ ವಾ ಬ್ರಹ್ಮವಿದ್ಯಾಸಾಧನಂ ವಿಧಿತ್ಸಿತಮ್, ತದರ್ಥೋಽಯಮರ್ಥವಾದಾಮ್ನಾಯಃ । ನ ಹಿ ಶಮಾದಿಸಾಧನರಹಿತಸ್ಯ ಅಭಿಮಾನರಾಗದ್ವೇಷಾದಿಯುಕ್ತಸ್ಯ ಬ್ರಹ್ಮವಿಜ್ಞಾನೇ ಸಾಮರ್ಥ್ಯಮಸ್ತಿ । ವ್ಯಾವೃತ್ತಬಾಹ್ಯಮಿಥ್ಯಾಪ್ರತ್ಯಯಗ್ರಾಹ್ಯತ್ವಾದ್ ಬ್ರಹ್ಮಣಃ । ಯಸ್ಮಾಚ್ಚ ಅಗ್ನ್ಯಾದೀನಾಂ ಜಯಾಭಿಮಾನಂ ಶಾತಯತಿ ತತಶ್ಚ ಬ್ರಹ್ಮವಿಜ್ಞಾನಂ ದರ್ಶಯತ್ಯಭಿಮಾನೋಪಶಮೇ । ತಸ್ಮಾತ್ ಶಮಾದಿಸಾಧನವಿಧಾನಾರ್ಥೋಽಯಮರ್ಥವಾದ ಇತ್ಯವಸೀಯತೇ ॥

(ಭಾಷ್ಯಾರ್ಥ)

ಈ ವೇದವಾಕ್ಯವು ಶಮಾದಿಗಳಿಗೋಸ್ಕರ ಎಂದಾದರೂ (ಹೇಳಬಹುದು). ಏಕೆಂದರೆ (ಇಲ್ಲಿ) ಅಭಿಮಾನವನ್ನು ಕತ್ತರಿಸಿರುತ್ತದೆ. ಶಮವೇ ಮುಂತಾದ ಬ್ರಹ್ಮ ವಿದ್ಯಾಸಾಧನವನ್ನು (ಇಲ್ಲಿ) ವಿಧಿಸಬೇಕೆಂದಿರುತ್ತದೆ, ಅದಕ್ಕಾಗಿಯೇ ಈ ಅರ್ಥ ವಾದವನ್ನು ಹೇಳುವ ವೇದವಾಕ್ಯವು (ಬಂದಿದೆ). ಶಮವೇ ಮುಂತಾದ ಸಾಧನ ವಿಲ್ಲದೆ ಅಭಿಮಾನ, ರಾಗ, ದ್ವೇಷ ಮುಂತಾದವುಗಳಿಂದೊಡಗೂಡಿರುವಾತನಿಗೆ

ಬ್ರಹ್ಮವಿಜ್ಞಾನದಲ್ಲಿ ಸಾಮರ್ಥ್ಯವಿರುವದೇ ಇಲ್ಲ. ಏಕೆಂದರೆ ಹೊರಗಿನ (ವಿಷಯದ) ಮಿಥ್ಯಾಜ್ಞಾನವನ್ನು ಬಿಟ್ಟು ಹಿಂತಿರುಗಿದವರಿಗೇ ಬ್ರಹ್ಮವು ತಿಳಿಯಬರುವಂಥದ್ದು. ಮತ್ತು ಅಗ್ನಿಯೇ ಮೊದಲಾದವರ (ನಾವು) ಗೆದ್ದೆವೆಂಬ ಅಭಿಮಾನವನ್ನು ಕತ್ತರಿಸಿರುತ್ತದೆ, ಆಮೇಲೆ ಅಭಿಮಾನವು ಹೋದಮೇಲೆಯೇ ಬ್ರಹ್ಮವಿಜ್ಞಾನವನ್ನು (ಅವರಿಗೆ) ತೋರಿಸಿಕೊಟ್ಟಿರುತ್ತದೆ. ಆದ್ದರಿಂದಲೂ ಶಮವೇ ಮುಂತಾದ ಸಾಧನಗಳನ್ನು ವಿಧಾನಮಾಡುವದಕ್ಕೆ ಈ ಅರ್ಥವಾದವು ಬಂದಿದೆ ಎಂದು ನಿಶ್ಚಯವಾಗುತ್ತದೆ.

(ಭಾಷ್ಯ)

೧೩೪. ಸಗುಣೋಪಾಸನಾರ್ಥೋ ವಾ, ಅಪೋದಿತತ್ವಾತ್ । " ನೇದಂ ಯದಿದಮುಪಾಸತೇ '' (೨-೫, ೬, ೭, ೮, ೯) ಇತ್ಯುಪಾಸ್ಯತ್ವಂ ಬ್ರಹ್ಮಣೋಽಪೋದಿತಮ್ । ಅಪೋದಿತತ್ವಾದನುಪಾಸ್ಯತ್ವೇ ಪ್ರಾಪ್ತೇ ತಸ್ಯೈವ ಬ್ರಹ್ಮಣಃ ಸಗುಣತ್ವೇನ, ಅಧಿದೈವಮ್ ಅಧ್ಯಾತ್ಮಂ ಚ, ಉಪಾಸನಂ ವಿಧಾತವ್ಯಮ್- ಇತ್ಯೇವಮರ್ಥೋ ವಾ । " ಇತ್ಯಧಿದೈವತಮ್ '' (೪-೪) " ತದ್ವನಮಿತ್ಯುಪಾಸಿತವ್ಯಮ್ '' (೪-೬) ಇತಿ ಹಿ ವಕ್ಷ್ಯತಿ ॥

(ಭಾಷ್ಯಾರ್ಥ)

ಅಥವಾ ಸಗುಣೋಪಾಸನೆಯನ್ನು (ವಿಧಿಸು)ವದಕ್ಕೆ ಎಂದಾದರೂ ಹೇಳಬಹುದು, ಏಕೆಂದರೆ (ಅದನ್ನು ಹಿಂದೆ) ನಿಷೇಧಿಸಿರುತ್ತದೆ " ಯಾವದನ್ನು ಇದೆಂದು ಉಪಾಸನೆ ಮಾಡುತ್ತಾರೋ ಇದು (ಬ್ರಹ್ಮ)ವಲ್ಲ '' (೨-೫ ) ಎಂದು ಬ್ರಹ್ಮಕ್ಕೆ ಉಪಾಸ್ಯತ್ವವನ್ನು ನಿಷೇಧಿಸಿರುತ್ತದೆ. (ಹಾಗೆ) ನಿಷೇಧಿಸಿರುವದರಿಂದ (ಬ್ರಹ್ಮವನ್ನು) ಉಪಾಸನೆಮಾಡತಕ್ಕದ್ದಲ್ಲ ಎಂದು ಪ್ರಾಪ್ತವಾಯಿತಾದ್ದರಿಂದ ಅದೇ ಬ್ರಹ್ಮಕ್ಕೆ ಅಧಿದೈವವಾಗಿಯೂ ಅಧ್ಯಾತ್ಮವಾಗಿಯೂ ಸಗುಣವಾಗಿ ಉಪಾಸನೆಯನ್ನು ವಿಧಿಸಬೇಕಾಗಿರುತ್ತದೆ. ಈ ಪ್ರಯೋಜನಕ್ಕಾಗಿ (ಮುಂದಿನ ಭಾಗವು ಬಂದಿದೆ) ಎಂದಾದರೂ (ಹೇಳಬಹುದು). ಏಕೆಂದರೆ " ಹೀಗೆ ಅಧಿದೈವತವು '' (೪-೪), " ತದ್ವನವೆಂದು ಉಪಾಸನೆಮಾಡಬೇಕು '' (೪-೬) ಎಂದೇ ಮುಂದೆ ಹೇಳಿರುತ್ತದೆ.

## ಬ್ರಹ್ಮಶಬ್ದದ ಅರ್ಥ

(ಭಾಷ್ಯ)

೧೩೫. " ಬ್ರಹ್ಮ '' ಇತಿ ಪರಃ, ಲಿಙ್ಗಾತ್ । ನ ಹ್ಯನ್ಯತ್ರ ಪರಾದೀಶ್ವರಾತ್ ನಿತ್ಯಸರ್ವಜ್ಞಾತ್ ಪರಿಭೂಯಾಗ್ನ್ಯಾದೀನ್ ತೃಣಂ ವಜ್ರೀಕರ್ತುಂ ಸಾಮರ್ಥ್ಯಮಸ್ತಿ । ತನ್ನ ಶಶಾಕ ದಗ್ಧುಮ್ '' (೩-೬) ಇತ್ಯಾದಿಲಿಙ್ಗಾತ್ ಬ್ರಹ್ಮಶಬ್ದವಾಚ್ಯ

ಈಶ್ವರ ಇತ್ಯವಸೀಯತೇ । ನ ಹ್ಯನ್ಯಥಾ ಅಗ್ನಿಸ್ತೃಣಂ ದಗ್ಧುಂ ನೋತ್ಸಹತೇ, ವಾಯು ರ್ವಾ ಆದಾತುಮ್ । ಈಶ್ವರೇಚ್ಛಯಾ ತೃಣಮಪಿ ವಜ್ರೀಭವತೀತ್ಯುಪಪದ್ಯತೇ ॥

(ಭಾಷ್ಯಾರ್ಥ)

(ಇಲ್ಲಿ) ಬ್ರಹ್ಮ ಎಂದರೆ ಪರಮೇಶ್ವರನು, ಏಕೆಂದರೆ (ಅವನ) ಗುರುತಿರು ತ್ತದೆ. ನಿತ್ಯಸರ್ವಜ್ಞನಾದ ಪರಮೇಶ್ವರನನ್ನು ಬಿಟ್ಟರೆ ಮಿಕ್ಕ ಯಾರಿಗೂ ಅಗ್ನಿಯೇ ಮೊದಲಾದವರನ್ನು ತಿರಸ್ಕರಿಸಿ ತೃಣವನ್ನು ವಜ್ರವಾಗಿ ಮಾಡಲು ಸಾಮರ್ಥ್ಯವಿರು ವದೇ ಇಲ್ಲ. "ಅದನ್ನು ಸುಡಲಾರದೆಹೋದನು" (೩-೬) ಎಂದು ಮುಂತಾದ (ಈಶ್ವರನ) ಗುರುತು ಇರುವದರಿಂದ ಬ್ರಹ್ಮಶಬ್ದದಿಂದ (ಇಲ್ಲಿ) ಹೇಳಿರುವದು ಈಶ್ವರ ನನ್ನೇ ಎಂದು ನಿಶ್ಚಯವಾಗುತ್ತದೆ. ಹಾಗಿಲ್ಲದಿದ್ದರೆ ಅಗ್ನಿಯು ಹುಲ್ಲು ಕಡ್ಡಿಯನ್ನು ಸುಡಲಾರನೆಂದು ಹೇಳಲಾಗುವದಿಲ್ಲ, ವಾಯುವು (ಅದನ್ನು) ಎತ್ತಿಕೊಳ್ಳಲಾರನೆಂದೂ ಹೇಳಲಾಗುವದಿಲ್ಲ. (ಆದರೆ) ಈಶ್ವರನ ಇಚ್ಛೆಯಿಂದ ಹುಲ್ಲು ಕಡ್ಡಿಯೂ ವಜ್ರ ವಾಗುತ್ತದೆ ಎಂಬುದು ಯುಕ್ತವಾಗಿದೆ

## ಈಶ್ವರಸಿದ್ಧಿ

(ಭಾಷ್ಯ)

೧೩೬ ತತ್ಸಿದ್ಧಿರ್ಜಗತೋ ನಿಯತಪ್ರವೃತ್ತೇಃ । ಶ್ರುತಿಸ್ಮೃತಿಪ್ರಸಿದ್ಧಿಭಿ ರ್ನಿತ್ಯಸರ್ವವಿಜ್ಞಾನೇ ಈಶ್ವರೇ ಸರ್ವಾತ್ಮನಿ ಸರ್ವಶಕ್ತೌ ಸಿದ್ಧೇಽಪಿ ಶಾಸ್ತ್ರಾರ್ಥನಿಶ್ಚ ಯಾರ್ಥಮುಚ್ಯತೇ । ತಸ್ಯೇಶ್ವರಸ್ಯ ಸದ್ಭಾವಸಿದ್ಧಿಃ ಕುತೋ ಭವತೀತಿ ? ಉಚ್ಯತೇ । ಯದಿದಂ ಜಗತ್ ದೇವಗನ್ಧರ್ವಯಕ್ಷರಕ್ಷಃಪಿತೃಪಿಶಾಚಾದಿಲಕ್ಷಣಂ ದ್ಯುವಿಯ ತ್ಪೃಥಿವ್ಯಾದಿತ್ಯಚನ್ದ್ರಗ್ರಹನಕ್ಷತ್ರವಿಚಿತ್ರಂ ವಿವಿಧಪ್ರಾಣ್ಯುಪಭೋಗಯೋಗ್ಯಸ್ಥಾನ ಸಾಧನಸಮ್ಬನ್ಧಿ, ತದತ್ಯನ್ತಕುಶಲಶಿಲ್ಪಿಭಿರಪಿ ದುರ್ನಿರ್ಮಾಣಮ್ ದೇಶಕಾಲನಿಮಿ ತ್ತಾನುರೂಪನಿಯತಪ್ರವೃತ್ತಿನಿವೃತ್ತಿಕ್ರಮಮ್, ಏತದ್ಭೋಕ್ತೃಕರ್ಮವಿಭಾಗಜ್ಞ ಪ್ರಯತ್ನಪೂರ್ವಕಂ ಭವಿತುಮರ್ಹತಿ । ಕಾರ್ಯತ್ವೇ ಸತಿ ಯಥೋಕ್ತಲಕ್ಷಣತ್ವಾತ್, ಗೃಹಪ್ರಾಸಾದರಥಶಯನಾಸನಾದಿವತ್ । ವಿಪಕ್ಷೇ ಆತ್ಮಾದಿವತ್ ॥

(ಭಾಷ್ಯಾರ್ಥ)

ಜಗತ್ತು ನಿಯತವಾಗಿ ತೊಡಗುತ್ತಿರುವದರಿಂದ ಆ (ಈಶ್ವರನ) ಸಿದ್ಧಿಯಾಗು ತ್ತದೆ. ಶ್ರುತಿ, ಸ್ಮೃತಿ, (ಲೋಕ)ಪ್ರಸಿದ್ಧಿ–ಇವುಗಳಿಂದ ಎಲ್ಲವನ್ನೂ (ತಿಳಿಯುವ) ನಿತ್ಯಜ್ಞಾನವುಳ್ಳ ಸರ್ವಾತ್ಮನಾದ ಸರ್ವಶಕ್ತಿಗಳುಳ್ಳ ಈಶ್ವರನು ಸಿದ್ಧನಾಗಿರುತ್ತಾ ನಾದರೂ ಶಾಸ್ತ್ರಾರ್ಥವನ್ನು ನಿಶ್ಚಯಿಸುವದಕ್ಕಾಗಿ (ಈ ಅನುಮಾನವನ್ನು) ಹೇಳು ತ್ತೇವೆ. ಆ ಈಶ್ವರನ ಸಿದ್ಧಿಯು ಏತರಿಂದ ಆಗುತ್ತದೆ? ಎಂದರೆ ಹೇಳುತ್ತೇವೆ. ದೇವತೆಗಳು, ಗಂಧರ್ವರು, ಯಕ್ಷರು, ರಾಕ್ಷಸರು, ಪಿತೃಗಳು, ಪಿಶಾಚಗಳು

ಮುಂತಾದ (ಪ್ರಾಣಿಗಳ) ಸ್ವರೂಪವಾಗಿಯೂ ಸ್ವರ್ಗ, ಆಕಾಶ, ಪೃಥಿವಿ, ಆದಿತ್ಯ, ಚಂದ್ರ, ಗ್ರಹಗಳು, ನಕ್ಷತ್ರಗಳು-ಇವುಗಳಿಂದ ವಿಚಿತ್ರವಾಗಿಯೂ ಇರುವ ಈ ಜಗತ್ತೆಂಬುದಿದೆಯಲ್ಲ, ಅದು ಅತ್ಯಂತ ಕುಶಲರಾದ ಶಿಲ್ಪಿಗಳಿಗೂ ನಿರ್ಮಿಸುವದಕ್ಕೆ ಆಗದ್ದಾಗಿ ದೇಶ, ಕಾಲ, ನಿಮಿತ್ತ-ಇವುಗಳಿಗೆ ಅನುಗುಣವಾಗಿ ಗೊತ್ತಾದ ಪ್ರವೃತ್ತಿ, ನಿವೃತ್ತಿ-ಇವುಗಳ ಕ್ರಮವುಳ್ಳದ್ದಾಗಿರುತ್ತದೆಯಷ್ಟೆ. ಇದು ಭೋಕ್ತೃಗಳ ಕರ್ಮಗಳ ವಿಂಗಡವನ್ನು ಬಲ್ಲಾತನ ಪ್ರಯತ್ನಪೂರ್ವಕವಾಗಿ ಆದದ್ದಾಗಿರಬೇಕು. ಏಕೆಂದರೆ ಇದು ಕಾರ್ಯವಾಗಿ ಮೇಲೆ ವರ್ಣಿಸಿದ ರೂಪವುಳ್ಳದ್ದಾಗಿದೆ. ಇದಕ್ಕೆ ಮನೆ, ಉಪ್ಪರಿಗೆ, ರಥ, ಹಾಸಿಗೆ, ಆಸನ-ಮುಂತಾದವುಗಳು ದೃಷ್ಟಾಂತವು[1], ಇದಕ್ಕೆ ವಿರುದ್ಧವಾದ ದೃಷ್ಟಾಂತಗಳು ಆತ್ಮನೇ ಮೊದಲಾದವುಗಳು.

## ಕರ್ಮವೇ ಫಲವನ್ನು ಕೊಡಲಾರದು

(ಭಾಷ್ಯ)

೧೩೭. ಕರ್ಮಣ ಏವೇತಿ ಚೇತ್ । ನ ಪರತನ್ತ್ರಸ್ಯ ನಿಮಿತ್ತಮಾತ್ರತ್ವಾತ್ । ಯದಿದಮ್ ಉಪಭೋಗವೈಚಿತ್ರ್ಯಂ ಪ್ರಾಣಿನಾಮ್, ತದ್ಸಾಧನವೈಚಿತ್ರ್ಯಂ ಚ, ದೇಶಕಾಲನಿಮಿತ್ತಾನುರೂಪನಿಯತಪ್ರವೃತ್ತಿನಿವೃತ್ತಿಕ್ರಮಂ ಚ (?) ತನ್ನ ನಿತ್ಯಸರ್ವಜ್ಞಕರ್ತೃಕಮ್ । ಕಿಂ ತರ್ಹಿ ಕರ್ಮಣ ಏವ, ತಸ್ಯಾಚಿನ್ತ್ಯಪ್ರಭಾವತ್ವಾತ್, ಸರ್ವೈಶ್ಚ ಫಲಹೇತುತ್ವಾಭ್ಯುಪಗಮಾತ್ । ಸತಿ ಕರ್ಮಣಃ ಫಲಹೇತುತ್ವೇ ಕಿಮೀಶ್ವರಾಧಿಕಕಲ್ಪನಯಾ ಇತಿ ನ ನಿತ್ಯಸ್ಯೇಶ್ವರಸ್ಯ ನಿತ್ಯಸರ್ವಜ್ಞಶಕ್ತೇಃ ಫಲಹೇತುತ್ವಂ ಚೇತಿ (?) ಚೇತ್ । ನ ಕರ್ಮಣ ಏವೋಪಭೋಗವೈಚಿತ್ರ್ಯಾದ್ಯುಪಪದ್ಯೇತ । ಕಸ್ಮಾತ್ ? ಕರ್ತೃತನ್ತ್ರತ್ವಾತ್ ಕರ್ಮಣಃ । ಚಿತಿಮತ್ಪ್ರಯತ್ನನಿವೃತ್ತಂ ಹಿ ಕರ್ಮ। ತತ್ಪ್ರಯತ್ನೋಪರಮಾದುಪರತಂ ಸತ್, ದೇಶಾನ್ತರೇ ವಾ ನಿಯತನಿಮಿತ್ತವಿಶೇಷಾಪೇಕ್ಷಂ ಕರ್ತುಃ ಫಲಂ ಜನಯಿಷ್ಯತೀತಿ ನ ಯುಕ್ತಮ್ ಅನಪೇಕ್ಷ್ಯಾನ್ಯದಾತ್ಮನಃ ಪ್ರಯೋಕ್ತೃ । ಕರ್ತೈವ ಫಲಕಾಲೇ ಪ್ರಯೋಕ್ತಾ ಇತಿ ಚೇತ್ । "ಮಯಾ ನಿರ್ವರ್ತಿತೋಽಸಿ, ತ್ವಾಂ ಪ್ರಯೋಕ್ಷ್ಯೇ ಫಲಾಯ ಯದಾತ್ಮಾನುರೂಪಂ ಫಲಮ್"

---

1 ಮನೆಯೇ ಮುಂತಾದವುಗಳನ್ನು ಇದನ್ನು ಇಂಥವನಿಗಾಗಿ ಹೀಗೆ ಮಾಡಬೇಕು-ಎಂದು ತಿಳಿದೇ ಮಾಡುತ್ತಾರೆ. ಅವು ಕಾರ್ಯವೂ ವೈಚಿತ್ರ್ಯದಿಂದ ಕೂಡಿಯೂ ಇರುತ್ತವೆ. ಅದರಂತೆಯೇ ಜಗತ್ತು ಕಾರ್ಯವಾಗಿ ವೈಚಿತ್ರ್ಯದಿಂದ ಕೂಡಿರುವದರಿಂದ ಅದನ್ನು ಭೋಕ್ತೃಕರ್ಮವಿಭಾಗವನ್ನು ಬಲ್ಲ ಈಶ್ವರನೇ ಮಾಡಿರಬೇಕು.

2. ಆತ್ಮನು ಕಾರ್ಯವಲ್ಲ, ವೈಚಿತ್ರ್ಯದಿಂದ ಕೂಡಿಯೂ ಇಲ್ಲ ; ಏಕೆಂದರೆ ಅದನ್ನು ವಿಭಾಗವನ್ನರಿತಾತನು ಮಾಡಿರುವದಿಲ್ಲವೆಂದು ಭಾವ.

ಇತಿ । ನ । ದೇಶಕಾಲನಿಮಿತ್ತವಿಶೇಷಾನಭಿಜ್ಞತ್ವಾತ್ । ಯದಿ ಹಿ ಕರ್ತಾ ದೇಶ ವಿಶೇಷಾಭಿಜ್ಞಃ ಸ್ವಾತನ್ತ್ರ್ಯೇಣ ಕರ್ಮ ನಿಯುಞ್ಜೀತ, ತತೋಽನಿಷ್ಟಫಲಸ್ಯ ಅಪ್ರಯೋಕ್ತಾ ಸ್ಯಾತ್ ॥

(ಭಾಷ್ಯಾರ್ಥ)

"ಕರ್ಮದ್ದೇ ಆಗಲಿ" ಎಂದರೆ ಆಗಲಾರದು. ಏಕೆಂದರೆ ಪರತಂತ್ರ ವಾಗಿರುವ (ಕರ್ಮವು) ನಿಮಿತ್ತಮಾತ್ರವಾಗಿರುತ್ತದೆ.

(ಆಕ್ಷೇಪದ ವಿವರ) :—ಪ್ರಾಣಿಗಳ ಉಪಭೋಗದ ವೈಚಿತ್ರ್ಯವು, ಅದಕ್ಕೆ ಬೇಕಾದ ಸಾಧನಗಳ ವೈಚಿತ್ರ್ಯವು, ದೇಶ ಕಾಲನಿಮಿತ್ತಗಳಿಗೆ ಅನುಗುಣವಾಗಿ ಗೊತ್ತಾದ ಪ್ರವೃತ್ತಿ ನಿವೃತ್ತಿ ಕ್ರಮ-ಇದು ನಿತ್ಯವಾದ ಸರ್ವಜ್ಞನಿಂದಾಗಿರುವದಲ್ಲ, ಮತ್ತೇನೆಂದರೆ ಕರ್ಮದಿಂದಲೇ ಆದದ್ದು. ಏಕೆಂದರೆ ಆ (ಕರ್ಮ)ಕ್ಕೆ ಅಚಿಂತ್ಯ ವಾದ ಶಕ್ತಿಯಿರುತ್ತದೆ, (ಅದು) ಫಲಕ್ಕೆ ಕಾರಣವೆಂದು ಎಲ್ಲರೂ ಒಪ್ಪಿರುತ್ತಾರೆ. (ಹೀಗೆ) ಕರ್ಮವೇ ಫಲಕ್ಕೆ ಕಾರಣವಾಗಿರುವಲ್ಲಿ ಈಶ್ವರನನ್ನು ಅಧಿಕವಾಗಿ ಕಲ್ಪಿಸು ವದರಿಂದ ಏನು ಪ್ರಯೋಜನ? (ಏನೂ ಇಲ್ಲ)ವಾದ್ದರಿಂದ ನಿತ್ಯಸರ್ವಜ್ಞಶಕ್ತಿಯಿಂದ ಕೂಡಿರುವ ನಿತ್ಯನಾದ ಈಶ್ವರನು ಫಲಕ್ಕೆ ಕಾರಣನು ಎಂಬುದು ಸಿದ್ಧಿಸುವದಿಲ್ಲವಲ್ಲ!

(ಪರಿಹಾರದ ವಿವರ) :—ಕರ್ಮದಿಂದಲೇ ಉಪಭೋಗವೈಚಿತ್ರ್ಯವೇ ಮುಂತಾದದ್ದು ಹೊಂದಲಾರದು. ಏಕೆಂದರೆ, ಕರ್ಮವು ಕರ್ತೃವಿಗೆ ಅಧೀನ ವಾಗಿರುತ್ತದೆ. ಚೈತನ್ಯವುಳ್ಳಾತನ ಪ್ರಯತ್ನದಿಂದಲೇ ಕರ್ಮವು ಆಗುವದಾದ್ದರಿಂದ ಆತನ ಪ್ರಯತ್ನವು ನಿಲ್ಲುತ್ತಲೂ (ತಾನೂ) ನಿಂತುಹೋಗಿದ್ದು, ಮತ್ತೊಂದು ದೇಶ ದಲ್ಲಿ ಅಥವಾ ಮತ್ತೊಂದು ಕಾಲದಲ್ಲಿ ಗೊತ್ತಾದ ಆಯಾ ನಿಮಿತ್ತವನ್ನು ಬಯಸಿ ಕೊಂಡೇ ಕರ್ತೃವಿಗೆ ಫಲವನ್ನುಂಟುಮಾಡುವದು. ಆದಕಾರಣ ತನ್ನನ್ನು ಪ್ರೇರಿಸುವ ಮತ್ತೊಂದನ್ನು ಬಯಸದೆ (ಅದು) ತನ್ನನ್ನು ತಾನೇ (ಫಲವನ್ನು ಕೊಡುವದಕ್ಕೆ) ಪ್ರೇರಿಸುವದು ಎನ್ನುವದು ಸರಿಯಲ್ಲ.

(ಶಂಕೆ) :—ಕರ್ತೃವೇ ಫಲಕಾಲದಲ್ಲಿ ಪ್ರೇರಿಸುವವನು. "ನನ್ನಿಂದ ನೀನು ಆಗಿರುತ್ತೀಯೆ; ನಿನ್ನನ್ನು ನಿನ್ನ ಯೋಗ್ಯತೆಗೆ ಅನುಗುಣವಾದ ಫಲವನ್ನು ಕೊಡು ವಂತೆ ಪ್ರೇರಿಸುತ್ತಿದ್ದೇನೆ" ಎಂದು (ಅವನು ಪ್ರೇರಿಸಬಹುದಲ್ಲ) !

(ಪರಿಹಾರ) :—ಆಗದು. ಏಕೆಂದರೆ (ಅವನಿಗೆ) ದೇಶ, ಕಾಲ, ಆಯಾ ನಿಮಿತ್ತ-ಇವುಗಳು ತಿಳಿಯವು. ಕರ್ತೃವು ದೇಶ(ವೇ ಮುಂತಾದ) ಆಯಾ (ನಿಮಿತ್ತ) ವನ್ನು ಬಲ್ಲವನಾಗಿ ಸ್ವತಂತ್ರನಾಗಿ ಕರ್ಮವನ್ನು ಕಟ್ಟುಮಾಡುವಂತಿದ್ದರೆ ಆಗ ಅನಿಷ್ಟ ವಾದ ಫಲವನ್ನು (ಕೊಡುವಂತೆ) ಅವನು ಪ್ರೇರಿಸದೆ ಇರಬೇಕಾಗುವದು.

(ಭಾಷ್ಯ)

೧೩೮. ನ ಚ ನಿರ್ನಿಮಿತ್ತಂ ತದನಿಚ್ಛಯಾ ಆತ್ಮಸಮವೇತಂ ತಚ್ಚರ್ಮವದ್ ವಿಕರೋತಿ ಕರ್ಮ । ನ ಚಾತ್ಮಕೃತಮ್ ಅಕರ್ತೃಸಮವೇತಮ್ ಅಯಸ್ಕಾಂತಮಣಿವದಾಕ್ರಷ್ಟೃ ಭವತಿ, ಪ್ರಧಾನಕರ್ತೃಸಮವೇತತ್ವಾತ್ ಕರ್ಮಣಃ । ಭೂತಾಶ್ರಯಮ್ ಇತಿ ಚೇತ್ । ನ । ಸಾಧನತ್ವಾತ್ । ಕರ್ತೃಕ್ರಿಯಾಯಾಃ ಸಾಧನಭೂತಾನಿ ಭೂತಾನಿ ಕ್ರಿಯಾಕಾಲೇ ಅನುಭೂತವ್ಯಾಪಾರಾಣಿ ಸಮಾಪ್ತೌ ಚ ಹಲಾದಿವತ್ ಕರ್ತ್ರಾ ಪರಿತ್ಯಕ್ತಾನಿ ನ ಫಲಂ ಕಾಲಾಂತರೇ ಕರ್ತುಮ್ ಉತ್ಸಹಂತೇ । ನ ಹಿ ಹಲಂ ಕ್ಷೇತ್ರಾದ್ ವ್ರೀಹೀನ್ ಗೃಹಂ ಪ್ರವೇಶಯತಿ । ಭೂತಕರ್ಮಣೋಶ್ಚಾಚೇತನತ್ವಾತ್ ಸ್ವತಃ ಪ್ರವೃತ್ತ್ಯನುಪಪತ್ತಿಃ । ವಾಯುವತ್ ಇತಿ ಚೇತ್ । ನ । ಅಸಿದ್ಧತ್ವಾತ್ । ನ ಹಿ ವಾಯೋರಚಿತಿಮತಃ ಸ್ವತಃ ಪ್ರವೃತ್ತಿಃ ಸಿದ್ಧಾ । ರಥಾದಿಷ್ವದರ್ಶನಾತ್ ॥

(ಭಾಷ್ಯಾರ್ಥ)

ಆತ್ಮನಲ್ಲಿ ನಿತ್ಯಸಂಬದ್ಧವಾಗಿರುವ ಕರ್ಮವು ಆತನ ಇಚ್ಛೆಯಿಲ್ಲದೆ, ಚರ್ಮದಂತೆ (ತಾನೇ) ವಿಕಾರವನ್ನು ಹೊಂದುವದೆಂದು ಹೇಳುವದೂ ಸರಿಯಲ್ಲ. ತಾನು ಮಾಡಿದ್ದನ್ನು ಕರ್ತೃವಿನ ಸಂಬಂಧವೇ ಇಲ್ಲದೆ (ತಾನೊಂದೇ) ಸೂಜಿಗಲ್ಲಿನಂತೆ ಎಳೆದುಕೊಳ್ಳುವದೆಂತಲೂ ಹೇಳುವದು ಸರಿಯಲ್ಲ, ಏಕೆಂದರೆ ಕರ್ಮವೆಂಬುದು ಮುಖ್ಯವಾಗಿರುವ ಕರ್ತೃ(ಕಾರಕಕ್ಕೆ) ನಿತ್ಯಸಂಬದ್ಧವಾಗಿರುತ್ತದೆ

(ಭಾಷ್ಯಾರ್ಥ)

(ಶಂಕೆ) :—ಭೂತಗಳನ್ನು ಆಶ್ರಯಿಸಿಕೊಂಡು (ಕರ್ಮವು ಫಲವನ್ನು) ಕೊಡಲಿ !

(ಪರಿಹಾರ) :—ಹಾಗಲ್ಲ. ಏಕೆಂದರೆ (ಅವು) ಸಾಧನವಾಗಿರುತ್ತವೆ. ಭೂತಗಳು ಕರ್ತೃವಿನ ಕ್ರಿಯೆಗೆ ಸಾಧನವಾಗಿದ್ದು, ಕ್ರಿಯಾಕಾಲದಲ್ಲಿ (ತಮ್ಮ) ವ್ಯಾಪಾರಗಳನ್ನು ಅನುಭವಿಸಿದಮೇಲೆ ನೇಗಿಲೇ ಮುಂತಾದವುಗಳಂತೆ ಅವನ್ನು ಕರ್ತೃವು ಬಿಟ್ಟುಬಿಟ್ಟ ಬಳಿಕ ಕಾಲಾಂತರದಲ್ಲಿ ಫಲವನ್ನುಂಟುಮಾಡುವದಕ್ಕೆ ಶಕ್ತವಾಗಲಾರವು. ನೇಗಿಲು ಗದ್ದೆಯಿಂದ ಬತ್ತವನ್ನು ಮನೆಗೆ ತಂದುಕೊಡುವದಿಲ್ಲವಷ್ಟೆ. ಇದಲ್ಲದೆ ಭೂತಗಳೂ ಕರ್ಮವೂ ಅಚೇತನವಾಗಿರುವದರಿಂದ ತಾವೇ (ವ್ಯಾಪಾರ) ಮಾಡಲಾರವು.

(ಶಂಕೆ) :—ಗಾಳಿಯಂತೆ (ತಾವೇ ವ್ಯಾಪಾರ) ಮಾಡಬಹುದಲ್ಲವೆ ?

(ಪರಿಹಾರ) :—ಆಗದು. ಏಕೆಂದರೆ (ಗಾಳಿಯಲ್ಲೂ ಅದು) ಸಿದ್ಧವಾಗಿಲ್ಲ. ಜಡವಾಗಿರುವ ಗಾಳಿಯು ತಾನೇ ವ್ಯಾಪಾರಮಾಡುವದೆಂಬುದು ಸಿದ್ಧವಾಗಿಲ್ಲ ; ಏಕೆಂ

ದರೆ (ಜಡವಾಗಿರುವ) ರಥವೇ ಮುಂತಾದವುಗಳಲ್ಲಿ (ತಾವೇ ವ್ಯಾಪಾರಮಾಡುವದು) ಕಂಡುಬಂದಿರುವದಿಲ್ಲ.

## ಈಶ್ವರನೇ ಫಲದಾತನು ಕರ್ಮವಲ್ಲ

(ಭಾಷ್ಯ)

೧೪೯. ಶಾಸ್ತ್ರಾತ್ ಕರ್ಮಣ ಏವೇತಿ ಚೇತ್ । ಶಾಸ್ತ್ರಂ ಹಿ ಕ್ರಿಯಾತಃ ಫಲಸಿದ್ಧಿಮಾಹ ನೇಶ್ವರಾದೇಃ 'ಸ್ವರ್ಗಕಾಮೋ ಯಜೇತ" ಇತ್ಯಾದಿ । ನ ಚ ಪ್ರಮಾಣಾಧಿಗತತ್ವಾದಾನರ್ಥಕ್ಯಂ ಯುಕ್ತಮ್ । ನ ಚೇಶ್ವರಾಸ್ತಿತ್ವೇ ಪ್ರಮಾಣಾನ್ತರ ಮಸ್ತಿ ಇತಿ ಚೇತ್ । ನ । ದೃಷ್ಟನ್ಯಾಯಹಾನಾನುಪಪತ್ತೇಃ । ಕ್ರಿಯಾ ಹಿ ದ್ವಿವಿಧಾ ದೃಷ್ಟಫಲಾ, ಅದೃಷ್ಟಫಲಾ ಚ । ದೃಷ್ಟಫಲಾಪಿ ದ್ವಿವಿಧಾ ಅನನ್ತರಫಲಾ, ಕಾಲಾ ನ್ತರಫಲಾ ಚ । ಅನನ್ತರಫಲಾ ಗತಿಭುಜಿಲಕ್ಷಣಾ । ಕಾಲಾನ್ತರಫಲಾ ಕೃಷಿಸೇವಾದಿ ಲಕ್ಷಣಾ । ತತ್ರಾನನ್ತರಫಲಾ ಫಲಾಪವರ್ಗಿಣ್ಯೇವ । ಕಾಲಾನ್ತರಫಲಾ ತು ಉತ್ಪನ್ನ ಪ್ರಧ್ವಂಸಿನೀ । ಆತ್ಮ (?) ಸೇವ್ಯಾದ್ಯಧೀನಂ ಹಿ ಕೃಷಿಸೇವಾದೇಃ ಫಲಂ ಯತಃ । ನ ಚೋಭಯನ್ಯಾಯವ್ಯತಿರೇಕೇಣ ಸ್ವತನ್ತ್ರಂ ಕರ್ಮ, ತತೋ ವಾ ಫಲಂ ದೃಷ್ಟಮ್, ತಥಾ ಚ ಕರ್ಮಫಲಪ್ರಾಪ್ತೌ ನ ದೃಷ್ಟನ್ಯಾಯಹಾನಮ್ ಉಪಪದ್ಯತೇ । ತಸ್ಮಾತ್ ಶಾನ್ತೇ ಯಾಗಾದಿಕರ್ಮಣಿ ನಿತ್ಯಃ ಕರ್ತೃಕರ್ಮಫಲವಿಭಾಗಜ್ಞ ಈಶ್ವರಃ ಸೇವ್ಯಾದಿ ವದ್ ಯಾಗಾದ್ಯನುರೂಪಫಲದಾತಾ ಉಪಪದ್ಯತೇ । ಸ ಚಾತ್ಮಭೂತಃ ಸರ್ವಸ್ಯ ಸರ್ವಕ್ರಿಯಾಫಲಪ್ರತ್ಯಯಸಾಕ್ಷೀ ನಿತ್ಯವಿಜ್ಞಾನಸ್ವಭಾವಃ ಸಂಸಾರಧರ್ಮೈರಸಂ ಸ್ಪೃಷ್ಟಃ ॥

(ಭಾಷ್ಯಾರ್ಥ)

(ಶಂಕೆ).—ಶಾಸ್ತ್ರದ (ಆಧಾರ)ದಿಂದ ಕರ್ಮದಿಂದಲೇ[1] (ಫಲ)ವೆಂದಾಗುತ್ತದೆ ಯಲ್ಲ! "ಸ್ವರ್ಗಕಾಮನಾದವನು ಯಾಗಮಾಡಬೇಕು" ಎಂಬುದೇ ಮುಂತಾದ ಶಾಸ್ತ್ರವು ಕರ್ಮದಿಂದ ಫಲಸಿದ್ಧಿಯಾಗುವದೆಂದು ಹೇಳುತ್ತದೆಯೇ ಹೊರತು, ಈಶ್ವ ರನೇ ಮುಂತಾದದ್ದರಿಂದ (ಆಗುವದೆಂದು) ಹೇಳುವದಿಲ್ಲ. ಪ್ರಮಾಣದಿಂದ ತಿಳಿಯ ಬಂದಿರುವದರಿಂದ (ಕರ್ಮವು) ನಿರರ್ಥಕವೆಂಬುದು ಸರಿಯಾಗುವದೂ ಇಲ್ಲ. ಈಶ್ವರ ನಿದಾನೆಂಬುದಕ್ಕೆ ಬೇರೆಯ ಪ್ರಮಾಣವೂ ಇಲ್ಲವಲ್ಲ!

(ಪರಿಹಾರ).—ಹಾಗಲ್ಲ. ಏಕೆಂದರೆ ಅನುಭವದಲ್ಲಿ ಕಂಡಿರುವ ನ್ಯಾಯ ವನ್ನು ಕೈಬಿಡುವದು ಸರಿಯಲ್ಲ. ಕ್ರಿಯೆಯೆಂಬುದು (ಇಲ್ಲಿಯೇ) ಕಾಣುವ ಫಲ ವುಳ್ಳದ್ದೆಂದೂ (ಇಲ್ಲಿ) ಕಾಣದಿರುವ ಫಲವುಳ್ಳದ್ದೆಂದೂ ಎರಡು ಬಗೆಯಾಗಿರುತ್ತದೆ.

---

1. ಇದು ಪೂರ್ವಮೀಮಾಂಸಕರ ಪಕ್ಷ, ಸೂ. ಭಾ. ೩-೨-೪೦.

(ಇಲ್ಲಿ)ಯೇ ಕಾಣುವ ಫಲವುಳ್ಳ ಕ್ರಿಯೆಯೂ ಎರಡು ಬಗೆಯಾಗಿದೆ. (ಒಂದು) ಕೂಡಲೆ ಫಲವಾಗತಕ್ಕದ್ದು, (ಇನ್ನೊಂದು) ಕಾಲಾಂತರದಲ್ಲಿ ಫಲವಾಗತಕ್ಕದ್ದು. ನಡೆಯುವದು, ಊಟಮಾಡುವದು–ಇಂಥ ಕ್ರಿಯೆಗೆ ಕೂಡಲೆ ಫಲವಾಗುತ್ತದೆ. ಬೇಸಾಯ, ಸೇವೆ–ಮುಂತಾದ ರೂಪದ ಕ್ರಿಯೆಗೆ ಕಾಲಾಂತರದಲ್ಲಿ ಫಲವಾಗುತ್ತದೆ. ಇವೆರಡರಲ್ಲಿ ಕೂಡಲೆ ಫಲವನ್ನು ಕೊಡುವ (ಕ್ರಿಯೆಯು) ಫಲವನ್ನು (ಕೊಟ್ಟಬಳಿಕ) ನಾಶವಾಗುತ್ತದೆ; ಕಾಲಾಂತರದಲ್ಲಿ ಫಲವನ್ನು ಕೊಡುವ (ಕ್ರಿಯೆ)ಯಾದರೋ ಹುಟ್ಟಿದಕೂಡಲೆ ನಾಶವಾಗುತ್ತದೆ. ಏಕೆಂದರೆ ಬೇಸಾಯ, ಸೇವೆ–ಮುಂತಾದವು ಗಳ ಫಲವು ತನ್ನಿಂದ[1] ಸೇವಿಸಲ್ಪಡುವವನೇ ಮುಂತಾದವರ ಅಧೀನವಾಗಿರುತ್ತದೆ. ಈ ಎರಡು ಬಗೆಯನ್ನು ಬಿಟ್ಟರೆ (ಬೇರೊಂದು) ಸ್ವತಂತ್ರವಾದ ಕರ್ಮವಾಗಲಿ ಅದ ರಿಂದ ಫಲವಾಗುವದಾಗಲಿ ಕಂಡುಬಂದಿರುವದಿಲ್ಲ. ಹೀಗಿರುವದರಿಂದ ಕರ್ಮದ ಫಲವನ್ನು ಪಡೆಯುವ ವಿಷಯಕ್ಕೆ ಕಂಡಿರುವ ನ್ಯಾಯವನ್ನು ಬಿಡುವದು ಯುಕ್ತ ವಾಗುವದಿಲ್ಲ. ಆದಕಾರಣ ಯಾಗವೇ ಮುಂತಾದ ಕರ್ಮವು ಮುಗಿದಮೇಲೆ ನಿತ್ಯನೂ ಕರ್ತೃ, ಕರ್ಮ, ಫಲ–ಇವುಗಳ ವಿಂಗಡವನ್ನು ಬಲ್ಲವನೂ ಆದ ಈಶ್ವರನು ಸೇವಿಸಲ್ಪಡುವ ಪುರುಷನೇ ಮುಂತಾದವರಂತೆ ಯಾಗಾದಿಗಳಿಗೆ ಅನುಗುಣವಾದ ಫಲವನ್ನು ಕೊಡುವನು ಎಂಬುದೇ ಯುಕ್ತವಾಗಿದೆ ಆ ಈಶ್ವರನು ಎಲ್ಲರಿಗೂ ಆತ್ಮನಾಗಿರುವನು, ಎಲ್ಲಾ ಕರ್ಮಗಳಿಗೂ ಅವುಗಳ ಫಲಗಳಿಗೂ ಮತ್ತು (ಎಲ್ಲಾ) ಪ್ರತ್ಯಯಗಳಿಗೂ ಸಾಕ್ಷಿಯು, ನಿತ್ಯವಿಜ್ಞಾನಸ್ವರೂಪನು, ಯಾವ ಸಂಸಾರಧರ್ಮ ಗಳೂ ಸೋಂಕದವನು.

(ಭಾಷ್ಯ)

೧೪೦. ಶ್ರುತೇಶ್ಚ । "ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" (ಕ. ೨-೨-೧೧) "ಜರಾಂ ಮೃತ್ಯುಮತ್ಯೇತಿ" (ಬೃ. ೩-೫-೧), "ವಿಜರೋ ವಿಮೃತ್ಯುಃ" (ಛಾ. ೮-೭-೧), "ಸತ್ಯಕಾಮಃ ಸತ್ಯಸಙ್ಕಲ್ಪಃ" (ಛಾ. ೮-೭-೧), "ಏಷ ಸರ್ವೇ ಶ್ವರಃ" (ಬೃ. ೪-೪-೨೨), "ಪುಣ್ಯಂ ಕರ್ಮ ಕಾರಯತಿ" (? ಕೌ. ೩-೯), "ಅನ ಶ್ನನ್ನನ್ಯೋ ಅಭಿಚಾಕಶೀತಿ" (ಮು. ೩-೧-೧), "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ" (ಬೃ. ೩-೮-೯) ಇತ್ಯಾದ್ಯಾ ಅಸಂಸಾರಿಣ ಏಕಸ್ಯಾತ್ಮನೋ ನಿತ್ಯಮುಕ್ತಸ್ಯ ಸಿದ್ಧೌ ಶ್ರುತಯಃ । ಸ್ಮೃತಯಶ್ಚ ಸಹಸ್ರಶೋ ವಿದ್ಯನ್ತೇ । ನಚಾರ್ಥವಾದಾಃ ಶಕ್ಯನ್ತೇ ಕಲ್ಪಯಿತುಮ್ । ಅನನ್ಯಯೋಗಿತ್ವೇ ಸತಿ ವಿಜ್ಞಾನೋತ್ಪಾದಕತ್ವಾತ್ । ನ ಚೋತ್ಪನ್ನಂ ವಿಜ್ಞಾನಂ ಬಾಧ್ಯತೇ ॥

1. ತಾನು ಮತ್ತು ತನ್ನಿಂದ ಸೇವಿಸಲ್ಪಡುವವನು ಎಂದೂ ಅರ್ಥಮಾಡಬಹುದು. ಮುಂದೆ ೧೪೧ನೆಯ ಭಾಷ್ಯಭಾಗವನ್ನು ನೋಡಿರಿ.

(ಭಾಷ್ಯಾರ್ಥ)

ಶ್ರುತಿಯಿಂದಲೂ (ಈ ವಿಷಯವು ಸಿದ್ಧವಾಗುತ್ತದೆ). "(ಕಲ್ಪಿತವಾದದ್ದಕ್ಕೆಲ್ಲ) ಹೊರಚ್ಚಾಗಿರುವ (ಈಶ್ವರನು) ಲೋಕದುಃಖದಿಂದ ಲಿಪ್ತನಾಗುವದಿಲ್ಲ" (ಕ. ೨-೨-೧೧), "ಮುಪ್ಪನ್ನೂ ಸಾವನ್ನೂ ಮೀರಿರುತ್ತಾನೆ" (ಬೃ. ೩-೫-೧), "ಮುಪ್ಪಿಲ್ಲದವನು, ಸಾವಿಲ್ಲದವನು" (ಛಾ. ೮-೭-೧), "ಸತ್ಯಕಾಮನು, ಸತ್ಯಸಂಕಲ್ಪನು" (ಛಾ. ೮-೭-೧), "ಈತನು ಸರ್ವೇಶ್ವರನು" (ಬೃ. ೪-೪-೨೨), "ಪುಣ್ಯಕರ್ಮವನ್ನು ಮಾಡಿಸುತ್ತಾನೆ" (? ಕೌ. ೩-೯) "ಮತ್ತೊಂದು (ಪಕ್ಷಿಯು) ತಿನ್ನದೆ ನೋಡುತ್ತಿರುತ್ತದೆ" (ಮು. ೩-೧-೧), "ಈ ಅಕ್ಷರನಾದ (ಪರಮೇಶ್ವರನ) ಅಪ್ಪಣೆಯಿಂದಲೇ (ಸೂರ್ಯಚಂದ್ರರು ನಿಂತಿರುವರು)" (ಬೃ. ೩-೮-೯)–ಇವೇ ಮುಂತಾದ ಶ್ರುತಿಗಳು ಅಸಂಸಾರಿಯೂ ಅದ್ವಿತೀಯನೂ ನಿತ್ಯಮುಕ್ತನೂ ಆದ ಆತ್ಮನ ಸಿದ್ಧಿಗೆ (ಪ್ರಮಾಣವಾಗಿರುತ್ತವೆ) ಸ್ಮೃತಿಗಳೂ ಸಾವಿರಾರು ಇರುತ್ತವೆ. (ಇವುಗಳು) ಅರ್ಥವಾದವೆಂದು ಕಲ್ಪಿಸುವದಕ್ಕೂ ಆಗುವಂತಿಲ್ಲ; ಏಕೆಂದರೆ (ಇವು) ಮತ್ತೊಂದು (ವಿಧಿಗೆ) ಶೇಷವಾಗಿರುವದಿಲ್ಲ, (ಸ್ವತಂತ್ರವಾಗಿ) ಜ್ಞಾನವನ್ನುಂಟು ಮಾಡುತ್ತಿವೆ, ಉಂಟಾದ ಜ್ಞಾನವು ಬಾಧಿತವೂ ಆಗುವದಿಲ್ಲ.

(ಭಾಷ್ಯ)

೧೪೧. ಅಪ್ರತಿಷೇಧಾಚ್ಚ । ನ ಚ "ಈಶ್ವರೋ ನಾಸ್ತಿ" ಇತಿ ನಿಷೇಧೋಽಸ್ತಿ । ಪ್ರಾಪ್ತ್ಯಭಾವಾದಿತಿ ಚೇತ್ । ನ । ಉಕ್ತತ್ವಾತ್ । "ನ ಹಿಂಸ್ಯಾತ್" (?) ಇತಿವತ್ ಪ್ರಾಪ್ತ್ಯಭಾವಾತ್ ಪ್ರತಿಷೇಧೋ ನಾರಭ್ಯತೇ ಇತಿ ಚೇತ್ । ನ । ಈಶ್ವರಸದ್ಭಾವೇ ನ್ಯಾಯಸ್ಯೋಕ್ತತ್ವಾತ್ । ಅಥವಾ "ಅಪ್ರತಿಷೇಧಾತ್" ಇತಿ ಕರ್ಮಣಃ ಫಲದಾನೇ ಈಶ್ವರಕಾಲಾದೀನಾಂ ನ ಪ್ರತಿಷೇಧೋಽಸ್ತಿ । ನ ಚ ನಿಮಿತ್ತಾನ್ತರನಿರಪೇಕ್ಷಂ ಕೇವಲೇನ ಕರ್ತ್ರೈವ ಪ್ರಯುಕ್ತಂ ಫಲದಂ ದೃಷ್ಟಮ್ । ನ ಚ ವಿನಷ್ಟೋಽಪಿ ಯಾಗಃ ಕಾಲಾನ್ತರೇ ಫಲದೋ ಭವತಿ । ಸೇವ್ಯಬುದ್ಧಿವತ್ ಸೇವಕೇನ ಸರ್ವಜ್ಞೇಶ್ವರಬುದ್ಧೌ ತು ಸಂಸ್ಕೃತಾಯಾಂಯಾಗಾದಿಕರ್ಮಣಾ, ವಿನಷ್ಟೇಽಪಿಕರ್ಮಣಿ ಸೇವ್ಯಾದಿವೇಶ್ವರಾತ್ ಫಲಂ ಕರ್ತುರ್ಭವತೀತಿ ಯುಕ್ತಮ್ । ನ ತು ಪುನಃ ಪದಾರ್ಥಾ ವಾಕ್ಯಶತೇನಾಪಿ ದೇಶಾನ್ತರೇ ಕಾಲಾನ್ತರೇ ವಾ ಸ್ವಂ ಸ್ವಂ ಸ್ವಭಾವಂ ಜಹತಿ । ನ ಹಿ ದೇಶಕಾಲಾನ್ತರೇಷು ಚಾಗ್ನಿರನುಷ್ಣೋ ಭವತಿ । ಏವಂ ಕರ್ಮಣೋಽಪಿ ಕಾಲಾನ್ತರೇ ಫಲಂ ದ್ವಿಪ್ರಕಾರಮೇವೋಪಲಭ್ಯತೇ । ಬೀಜಕ್ಷೇತ್ರಸಂಸ್ಕಾರಪರಿರಕ್ಷಾವಿಜ್ಞಾನವತ್ಕರ್ತ್ರಪೇಕ್ಷಫಲಂ ಕೃಷ್ಯಾದಿ, ವಿಜ್ಞಾನವತ್ಸೇವ್ಯಬುದ್ಧಿಸಂಸ್ಕಾರಾಪೇಕ್ಷಫಲಂ ಚ ಸೇವಾದಿ । ಯಾಗಾದೇಃ ಕರ್ಮಣಸ್ತಥಾವಿಜ್ಞಾನವತ್ಕರ್ತ್ರಪೇಕ್ಷಫಲತ್ವಾನುಪಪತ್ತೌ ಕಾಲಾನ್ತರಫಲತ್ವಾತ್ ಕರ್ಮದೇಶಕಾಲನಿಮಿತ್ತವಿಪಾಕವಿಭಾಗಜ್ಞಬುದ್ಧಿಸಂಸ್ಕಾರಾ

ಪೇಕ್ಷಂ ಫಲಂ ಭವಿತುಮರ್ಹತಿ । ಸೇವಾದಿಕರ್ಮಾನುರೂಪಫಲಜ್ಞಸೇವ್ಯಬುದ್ಧಿ ಸಂಸ್ಕಾರಾಪೇಕ್ಷಫಲಸ್ಯೈವ । ತಸ್ಮಾತ್ ಸಿದ್ಧಃ ಸರ್ವಜ್ಞಃ ಈಶ್ವರಃ ಸರ್ವಜನ್ತುಬುದ್ಧಿ ಕರ್ಮಫಲವಿಭಾಗಸಾಕ್ಷೀ । "ಸರ್ವಭೂತಾನ್ತರಾತ್ಮಾ" (ಶ್ವೇ. ೬-೧೧), "ಯತ್ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾನ್ತರಃ" (ಬೃ. ೩-೪-೧) ಇತಿ ಶ್ರುತೇಃ । ಸ ಏವ ಚಾತ್ರಾತ್ಮಾ ಜನ್ತೂನಾಮ್ । "ನಾನ್ಯೋಽತೋಽಸ್ತಿ ದ್ರಷ್ಟಾ ..ಶ್ರೋತಾ ಮನ್ತಾ ವಿಜ್ಞಾತಾ" (ಬೃ. ೩-೭-೨೩), "ನಾನ್ಯದತೋಽಸ್ತಿ ವಿಜ್ಞಾತೃ" (ಬೃ. ೩-೮-೧೧) ಇತ್ಯಾದ್ಯಾತ್ಮಾನ್ತರಪ್ರತಿಷೇಧಶ್ರುತೇಃ । "ತತ್ತ್ವಮಸಿ" (ಛಾ. ೬-೮) ಇತಿ ಚಾತ್ಮತ್ವೋಪದೇಶಾತ್ । ನ ಹಿ ಮೃತ್ಪಿಣ್ಡಃ ಕಾಞ್ಚನಾತ್ಮತ್ವೇನೋಪದಿಶ್ಯತೇ ॥

(ಭಾಷ್ಯಾರ್ಥ)

ಪ್ರತಿಷೇಧಮಾಡದೆ ಇರುವದರಿಂದಲೂ (ಹೀಗೆಂದು ತಿಳಿಯಬೇಕು). ಈಶ್ವರನು ಇಲ್ಲವೆಂದು (ಶಾಸ್ತ್ರದಲ್ಲಿ) ಅಲ್ಲಗಳೆದಿರುವದೂ ಇಲ್ಲ. ಪ್ರಾಪ್ತಿಯಿಲ್ಲದ್ದರಿಂದ (ಅಲ್ಲಗಳೆದಿಲ್ಲ) ಎಂದರೆ ಅದು ಸರಿಯಲ್ಲ, ಏಕೆಂದರೆ (ಅದಕ್ಕೆ ಆಗಲೇ ಉತ್ತರವನ್ನು) ಹೇಳಿದ್ದಾಗಿದೆ.

(ಶಂಕೆಯ ವಿವರ) :—(ಯಾವ ಪ್ರಾಣಿಗಳನ್ನೂ) "ಹಿಂಸೆಮಾಡಬಾರದು" (?) ಎಂಬಂತೆ (ಈಶ್ವರನಿದ್ದಾನೆಂದು ಹೇಳಿದ) ಪ್ರಾಪ್ತಿಯಿಲ್ಲದ್ದರಿಂದ (ಶಾಸ್ತ್ರದಲ್ಲಿ) ಈಶ್ವರನಿಲ್ಲವೆಂದು ನಿಷೇಧವನ್ನು ಹೇಳಿಲ್ಲ

(ಪರಿಹಾರದ ವಿವರ) :—ಹಾಗಲ್ಲ. ಈಶ್ವರನಿದ್ದಾನೆಂಬುದಕ್ಕೆ ನ್ಯಾಯವನ್ನು ಆಗಲೆ ಹೇಳಿದ್ದಾಗಿದೆ[1], (ಆದ್ದರಿಂದ ಈಶ್ವರಸಿದ್ಧಿಯಾಗಿರುತ್ತದೆ)

ಅಥವಾ "ಪ್ರತಿಷೇಧಮಾಡದೆ ಇರುವದರಿಂದಲೂ" ಎಂಬ (ಸಂಗ್ರಹವಾಕ್ಯಕ್ಕೆ ಇನ್ನೊಂದು ವಿವರಣೆಯನ್ನೂ ಕೊಡಬಹುದು). ಕರ್ಮವು ಫಲವನ್ನು ಕೊಡಬೇಕಾದರೆ ಈಶ್ವರ, ಕಾಲ–ಮುಂತಾದವು (ಕಾರಣವಲ್ಲ)ವೆಂದು ನಿಷೇಧಿಸಿರುವದಿಲ್ಲ, (ಆದ್ದರಿಂದಲೂ ಈಶ್ವರನು ಸಿದ್ಧಿಸುತ್ತಾನೆ). ಮತ್ತೆ ಯಾವದೊಂದು ನಿಮಿತ್ತವನ್ನೂ ಬಯಸದೆ ಬರಿಯ ಕರ್ತೃವಿನಿಂದಲೇ ಪ್ರೇರಿತವಾಗಿ (ಕರ್ಮವು) ಫಲವನ್ನು ಕೊಟ್ಟದ್ದನ್ನು (ನಾವು) ಕಂಡಿರುವದಿಲ್ಲ ಯಾಗವು (ತಾನು) ನಾಶವಾದಬಳಿಕವೂ ಕಾಲಾಂತರದಲ್ಲಿ ಫಲವನ್ನು ಕೊಡುತ್ತದೆ (ಎಂದು ಹೇಳುವದಕ್ಕೆ) ಬರುವದಿಲ್ಲ. (ಇದಕ್ಕೆ ಬದಲು) ಸೇವ್ಯನಾದ(ಪುರುಷನ) ಬುದ್ಧಿಯನ್ನು ಸೇವಕನು (ಸಂಸ್ಕಾರಮಾಡುವಂತೆ) ಯಾಗವೇ

1. ಈಶ್ವರನಿದ್ದಾನೆಂದು ಮೊದಲು ಯಾವ ಪ್ರಮಾಣದಿಂದಲಾದರೂ ಸಿದ್ಧವಾಗಿದ್ದರೆ ಅದನ್ನು ಇಲ್ಲವೆಂದು ಶಾಸ್ತ್ರವು ಅಲ್ಲಗಳೆಯಬಹುದಾಗಿತ್ತು ಎಂಬ ಪೂರ್ವಪಕ್ಷಕ್ಕೆ ಇದು ಉತ್ತರ. ಈಶ್ವರನನ್ನು ಅರ್ಥಾಪತ್ತಿಪ್ರಮಾಣದಿಂದ ಇಲ್ಲಿ ಸಾಧಿಸಿದಂತೆ ಆಗುತ್ತದೆ.

ಮುಂತಾದ ಕರ್ಮದಿಂದ ಸರ್ವಜ್ಞನಾದ ಈಶ್ವರನ ಬುದ್ಧಿಯು ಸಂಸ್ಕಾರವನ್ನು ಹೊಂದುತ್ತದೆ (ಎಂಬ ನಮ್ಮ ಪಕ್ಷದಲ್ಲಿ)ಯೋ ಎಂದರೆ, ಕರ್ಮವು ನಷ್ಟವಾದರೂ ಸೇವ್ಯ (ಪುರುಷನಿಂದ ಫಲವುಂಟಾಗು)ವಂತೆ ಈಶ್ವರನಿಂದ (ಕರ್ಮವನ್ನು) ಮಾಡಿದವನಿಗೆ ಫಲವಾಗುವದು ಎಂಬುದು ಯುಕ್ತವಾಗುತ್ತದೆ. ಹಾಗಲ್ಲದೆ ನೂರು ವಾಕ್ಯಗಳ ಪ್ರಮಾಣಬಲವಿದ್ದರೂ ಪದಾರ್ಥಗಳು ದೇಶಾಂತರದಲ್ಲಿ ಅಥವಾ ಕಾಲಾಂತರದಲ್ಲಿ ತಮ್ಮ ತಮ್ಮ ಸ್ವಭಾವವನ್ನು ಬಿಡಲಾರವು ದೇಶಾಂತರಗಳಲ್ಲಿ ಅಥವಾ ಕಾಲಾಂತರಗಳಲ್ಲಿ ಬೆಂಕಿಯು ಬಿಸಿಯಲ್ಲದೆ ಹೋಗುವದಿಲ್ಲವಷ್ಟೆ. ಇದರಂತೆ ಕರ್ಮಕ್ಕೂ ಫಲವು ಕಾಲಾಂತರದಲ್ಲಿ(ಯೂ) ಎರಡು ಬಗೆಯೇ ಆಗಿ ಕಾಣಬರುವದು. ಬೀಜವನ್ನೂ ಹೊಲವನ್ನೂ ಸಂಸ್ಕಾರಮಾಡುವದು ಮತ್ತು ಕಾಪಾಡಿಕೊಳ್ಳುವದು— ಎಂಬ ತಿಳಿವಳಿಕೆಯುಳ್ಳ ಕರ್ತೃವನ್ನಪೇಕ್ಷಿಸಿ ಫಲವನ್ನು ಕೊಡುವ ಕೃಷ್ಯಾದಿ (ಕರ್ಮವೊಂದು ಬಗೆ), (ಮಾಡಿದ್ದನ್ನು) ತಿಳಿದಿರುವ ಸೇವ್ಯ (ಪುರುಷನ) ಬುದ್ಧಿಸಂಸ್ಕಾರವನ್ನಪೇಕ್ಷಿಸಿ ಫಲವನ್ನು ಕೊಡುವ ಸೇವೆಯೇ ಮುಂತಾದ (ಕರ್ಮವೊಂದು ಬಗೆ). ಯಾಗವೇ ಮುಂತಾದ ಕರ್ಮಕ್ಕೆ ಹಿಂದೆ ಹೇಳಿದ ತಿಳಿವಳಿಕೆಯುಳ್ಳ ಕರ್ತೃವನ್ನಪೇಕ್ಷಿಸಿ ಫಲವನ್ನು ಕೊಡುವದೆಂಬುದು ಯುಕ್ತವಲ್ಲವಾಗಿ ಕಾಲಾಂತರದಲ್ಲಿ ಫಲವು ಆಗಬೇಕಾಗಿರುವದರಿಂದ ಕರ್ಮ, ದೇಶ, ಕಾಲ, ನಿಮಿತ್ತ, ವಿಪಾಕ-ಇವುಗಳ ವಿವೇಕವನ್ನು ಬಲ್ಲಾತನ ಬುದ್ಧಿಯ ಸಂಸ್ಕಾರವನ್ನಪೇಕ್ಷಿಸಿಯೇ (ಅದಕ್ಕೆ) ಫಲವಾಗಬೇಕಾಗಿರುವದು ಸೇವೆಯೇ ಮುಂತಾದ ಕರ್ಮಕ್ಕೆ ಅನುಗುಣವಾದ ಫಲ(ವಿಂಥದ್ದೆಂಬುದನ್ನು) ಬಲ್ಲ ಸೇವ್ಯ (ಪುರುಷನ) ಬುದ್ಧಿಸಂಸ್ಕಾರವನ್ನಪೇಕ್ಷಿಸಿ ಫಲವನ್ನು ಕೊಡುವ (ಕರ್ಮ)ದಂತೆಯೇ (ಇದಕ್ಕೂ ಆಗಬೇಕಾಗಿದೆ). ಆದಕಾರಣ ಸರ್ವಜ್ಞನೂ ಸರ್ವ ಪ್ರಾಣಿಗಳ ಬುದ್ಧಿಗೂ ಕರ್ಮಫಲಗಳ ವಿಭಾಗಕ್ಕೂ ಸಾಕ್ಷಿಯಾಗಿರುವ ಈಶ್ವರನು (ಈರೀತಿಯಲ್ಲಿ) ಸಿದ್ಧನಾಗುತ್ತಾನೆ "ಎಲ್ಲಾ ಪ್ರಾಣಿಗಳಿಗೂ ಅಂತರಾತ್ಮನು" (ಶ್ವೇ ೬-೧೧), "ಯಾವದು ನೇರಾಗಿ ಅಪರೋಕ್ಷವಾಗಿರುವ ಬ್ರಹ್ಮವೋ, ಯಾವನು ಎಲ್ಲದಕ್ಕೂ ಒಳಗಿರುವ ಆತ್ಮನೋ " (ಬೃ ೩-೪-೧) ಎಂಬ ಶ್ರುತಿಯು ಇವಕ್ಕೆ ಪ್ರಮಾಣವು. ಆ (ಈಶ್ವರನೇ) ಇಲ್ಲಿ ಪ್ರಾಣಿಗಳಿಗೆಲ್ಲ ಆತ್ಮನಾಗಿರುತ್ತಾನೆ. "ಆತನಿಗಿಂತ ಬೇರೆ ನೋಡುವಾತನಿಲ್ಲ, ಕೇಳುವಾತನಿಲ್ಲ, ಆಲೋಚಿಸುವಾತನಿಲ್ಲ, ಅರಿಯುವಾತನಿಲ್ಲ" (ಬೃ. ೩-೭-೨೩), "ಇದಕ್ಕಿಂತ ಬೇರೆ ಅರಿಯುವದು ಇಲ್ಲ" (ಬೃ. ೩-೮-೧೧)–ಎಂಬುದೇ ಮುಂತಾದ ಬೇರೊಬ್ಬ ಆತ್ಮನನ್ನು ಅಲ್ಲಗಳೆಯುವ ಶ್ರುತಿ ಇದಕ್ಕೆ ಪ್ರಮಾಣವು ಇದಲ್ಲದೆ "ಅದೇ ನೀನಾಗಿರುವೆ" (ಛಾ. ೬-೮) ಎಂದು (ಈಶ್ವರನನ್ನು) ಆತ್ಮನೆಂದು ಉಪದೇಶಿಸಿರುವದರಿಂದಲೂ (ಹೀಗೆಂದು ತಿಳಿಯಬೇಕು.)

ಮಣ್ಣಿನ ಮುದ್ದೆಯನ್ನು ಚಿನ್ನದ ಆತ್ಮನೆಂದು (ಯಾರೂ) ಉಪದೇಶಿಸುವದಿಲ್ಲವಷ್ಟೆ. (ಅದರಂತೆಯೇ ಇಲ್ಲಿಯೂ ತಿಳಿಯಬೇಕು).

## ಈಶ್ವರನಿಗೂ ಜೀವರಿಗೂ ಭೇದವಿಲ್ಲ

(ಭಾಷ್ಯ)

೧೪೨. ಜ್ಞಾನಶಕ್ತಿಕರ್ಮೋಪಾಸ್ಯೋಪಾಸಕಶುದ್ಧಾಶುದ್ಧಮುಕ್ತಾಮುಕ್ತಭೇದಾದಾತ್ಮಭೇದ ಏವೇತಿ ಚೇತ್ । ನ । ಭೇದದೃಷ್ಟ್ಯಪವಾದಾತ್ । ಯದುಕ್ತಂ ಸಂಸಾರಿಣ ಈಶ್ವರಾದನನ್ಯಾಃ ಇತಿ । ತನ್ನ, ಕಿಂ ತರ್ಹಿ ಭೇದ ಏವ ಸಂಸಾರ್ಯಾತ್ಮನಾಮ್ । ಕಸ್ಮಾತ್ ? ಲಕ್ಷಣಭೇದಾತ್, ಅಶ್ವಮಹಿಷವತ್ । ಕಥಂ ಲಕ್ಷಣಭೇದ ಇತಿ ? ಉಚ್ಯತೇ । ಈಶ್ವರಸ್ಯ ತಾವನ್ನಿತ್ಯಂ ಸರ್ವವಿಷಯಂ ಜ್ಞಾನಮ್, ಸವಿತೃಪ್ರಕಾಶವತ್ । ತದ್ವಿಪರೀತಂ ಸಂಸಾರಿಣಾಮ್, ಖದ್ಯೋತಸ್ಯೇವ । ತಥೈವ ಶಕ್ತಿಭೇದೋಽಪಿ । ನಿತ್ಯಾ ಸರ್ವವಿಷಯಾಚೇಶ್ವರಶಕ್ತಿಃ, ವಿಪರೀತಾ ಇತರಸ್ಯ । ಕರ್ಮ ಚ ಚಿತ್ಸ್ವರೂಪಾತ್ಮಸತ್ತಾಮಾತ್ರನಿಮಿತ್ತಮ್ ಈಶ್ವರಸ್ಯ । ಔಷ್ಣ್ಯಸ್ವರೂಪದ್ರವ್ಯಸತ್ತಾಮಾತ್ರನಿಮಿತ್ತದಹನಕರ್ಮವತ್ । ರಾಜಾಯಸ್ಕಾನ್ತಪ್ರಕಾಶಕರ್ಮವಚ್ಚ ಸ್ವಾತ್ಮಾವಿಕ್ರಿಯಾರೂಪಮ್ । ವಿಪರೀತಮ್ ಇತರಸ್ಯ । "ಉಪಾಸೀತ" ಇತಿ ವಚನಾದುಪಾಸ್ಯ ಈಶ್ವರೋ ಗುರುರಾಜವತ್ । ಉಪಾಸಕಶ್ಚೇತರಃ ಶಿಷ್ಯಭೃತ್ಯವತ್ । ಅಪಹತಪಾಪ್ಮಾದಿಶ್ರವಣಾನ್ನಿತ್ಯಶುದ್ಧ ಈಶ್ವರಃ । "ಪುಣ್ಯೋ ವೈ ಪುಣ್ಯೇನ" (ಬೃ. ೩-೨-೧೩) ಇತಿ ವಚನಾದ್ವಿಪರೀತ ಇತರಃ । ಅತ ಏವ ನಿತ್ಯಮುಕ್ತ ಈಶ್ವರಃ । ನಿತ್ಯಾಶುದ್ಧಿಯೋಗಾತ್ ಸಂಸಾರೀತರಃ । ಯತ್ರ ಚ ಜ್ಞಾನಾದಿ(?) ಲಕ್ಷಣಭೇದೋಽಸ್ತಿ ತತ್ರ ಭೇದೋ ದೃಷ್ಟಃ । ಯಥಾ ಅಶ್ವಮಹಿಷಯೋಃ । ತಥಾ ಜ್ಞಾನಾದಿಲಕ್ಷಣಭೇದಾತ್ ಈಶ್ವರಾದಾತ್ಮನಾಂ ಭೇದೋಽಸ್ತೀತಿ ಚೇತ್ ॥

(ಭಾಷ್ಯಾರ್ಥ)

ಜ್ಞಾನ, ಶಕ್ತಿ, ಕರ್ಮ, ಉಪಾಸ್ಯ-ಉಪಾಸಕ, ಶುದ್ಧ-ಅಶುದ್ಧ, ಮುಕ್ತ-ಅಮುಕ್ತ (ಮುಂತಾದ) ಭೇದವಿರುವದರಿಂದ ಆತ್ಮರುಗಳಿಗೆ ಭೇದವೇ ಎಂದರೆ ಹಾಗಲ್ಲ. ಏಕೆಂದರೆ ಭೇದದೃಷ್ಟಿಯನ್ನು ನಿಂದೆಮಾಡಿರುತ್ತದೆ.

(ಪೂರ್ವಪಕ್ಷದ ವಿವರ).—ಸಂಸಾರಿಗಳು ಈಶ್ವರನಿಗಿಂತ ಬೇರೆಯಲ್ಲವೆಂದು ಹೇಳಿದಿರಲ್ಲ, ಅದು ಸರಿಯಲ್ಲ. ಮತ್ತೇನೆಂದರೆ ಸಂಸಾರಿಗಳಿಗೂ ಪರಮಾತ್ಮನಿಗೂ ಭೇದವೇ (ಸರಿ). ಏಕೆಂದರೆ ಕುದುರೆಕೋಣಗಳಿಗಿರುವಂತೆ (ಇಬ್ಬರಿಗೂ) ಲಕ್ಷಣಭೇದವಿರುತ್ತದೆ. ಲಕ್ಷಣಭೇದವು ಹೇಗೆಂದರೆ ಹೇಳುತ್ತೇವೆ. ಮೊದಲನೆಯದಾಗಿ ಸರ್ವವನ್ನೂ ಅರಿಯುವ ಈಶ್ವರನ ಜ್ಞಾನವು ಸೂರ್ಯನ ಬೆಳಕಿನಂತೆ ನಿತ್ಯವಾಗಿರುತ್ತದೆ; ಸಂಸಾರಿಗಳಿಗೆ ದೀಪದ ಹುಳುವಿನ(ಜ್ಞಾನದ)ಂತೆ ಅದಕ್ಕೆ ವಿರುದ್ಧವಾಗಿ (ಅನಿತ್ಯ

ವಾಗಿ)ರುತ್ತದೆ. ಇದರಂತೆಯೇ ಶಕ್ತಿಭೇದವೂ ಇರುತ್ತದೆ. ಈಶ್ವರನ ಶಕ್ತಿಯು ನಿತ್ಯವಾಗಿಯೂ ಸರ್ವವಿಷಯಕವಾಗಿಯೂ ಇರುತ್ತದೆ ; ಇನ್ನೊಬ್ಬ(ನಾ ಜೀವ)ನದು (ಅದಕ್ಕೆ) ವಿರುದ್ಧವಾಗಿರುತ್ತದೆ. ಈಶ್ವರನ ಕರ್ಮವು ಜ್ಞಾನಸ್ವರೂಪವಾದ ಆತ್ಮನ ಇರವೆಂಬ ಒಂದೇ ನಿಮಿತ್ತದಿಂದ, ಬಿಸಿಯು ಸ್ವರೂಪವಾದ ದ್ರವ್ಯದ ಇರವೆಂಬುದೊಂದೇ ನಿಮಿತ್ತದಿಂದ ಆಗುವ ಸುಡುವದೆಂಬ ಕರ್ಮದಂತೆ, ಆಗುವದು. ಮತ್ತು ರಾಜನ, ಸೂಜಿಕಲ್ಲಿನ ಮತ್ತು ಬೆಳಕಿನ ಕರ್ಮದಂತೆ ತನ್ನ ಸ್ವರೂಪದಲ್ಲಿ (ಯಾವ) ವಿಕಾರವನ್ನೂ ಮಾಡದೆ ಇರುವಂಥದ್ದು ಇನ್ನೊಬ್ಬ(ನಾದ ಜೀವ)ನ (ಕರ್ಮವು ಇದಕ್ಕೆ) ವಿರುದ್ಧವಾಗಿರುತ್ತದೆ. "ಉಪಾಸನೆ ಮಾಡಬೇಕು" ಎಂಬ (ಶ್ರುತಿ) ವಚನದಿಂದ ಈಶ್ವರನು ಗುರುವಿನಂತೆಯೂ ರಾಜನಂತೆಯೂ ಉಪಾಸ್ಯನು ; ಇನ್ನೊಬ್ಬ(ನಾದ ಜೀವ)ನು ಶಿಷ್ಯನಂತೆಯೂ ಆಳಿನಂತೆಯೂ ಉಪಾಸಕನು "ಅಪಹತಪಾಪ್ಮನು" ಎಂದು ಮುಂತಾಗಿ ಶ್ರುತಿಯಿರುವದರಿಂದ ಈಶ್ವರನು ನಿತ್ಯಶುದ್ಧನಾಗಿರುತ್ತಾನೆ, "ಪುಣ್ಯದಿಂದ ಪುಣ್ಯವಾಗುತ್ತದೆ" (ಬೃ ೩-೨-೧೩) ಎಂಬ ವಚನವಿರುವದರಿಂದ ಇನ್ನೊಬ್ಬ(ನಾದ ಜೀವ)ನು (ಇದಕ್ಕೆ) ವಿರುದ್ಧವಾಗಿರುತ್ತಾನೆ ಆದ್ದರಿಂದಲೇ ಈಶ್ವರನು ನಿತ್ಯಮುಕ್ತನು, ಇನ್ನೊಬ್ಬ(ನಾದ ಜೀವ)ನು ಯಾವಾಗಲೂ ಅಶುದ್ಧಿಯ ಸಂಬಂಧವಿರುವದರಿಂದ ಸಂಸಾರಿಯು ಎಲ್ಲಿ (ಜ್ಞಾನವೇ ಮುಂತಾದ ?)[1] ಲಕ್ಷಣಭೇದವಿರುವದೋ ಅಲ್ಲಿ (ವಸ್ತುಗಳಿಗೆ) ಭೇದವಿರುವದು ಕಂಡುಬಂದಿರುತ್ತದೆ ; ಉದಾಹರಣೆಗೆ ಕುದುರೆ, ಕೋಣ–ಇವೆರಡಕ್ಕೂ (ಲಕ್ಷಣಭೇದವಿರುವದರಿಂದ ಭೇದವಿರುತ್ತದೆ). ಹೀಗೆಯೇ ಜ್ಞಾನವೇ ಮುಂತಾದವುಗಳ ವಿಷಯಕ್ಕೆ ಲಕ್ಷಣಭೇದವಿರುವದರಿಂದ ಈಶ್ವರನಿಗೂ ಆತ್ಮರುಗಳಿಗೂ ಭೇದವುಂಟು.

(ಭಾಷ್ಯ)

೧೪೩ ನ । ಕಸ್ಮಾತ್ ? "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸವೇದ" (ಬೃ. ೧-೪-೧೦), "ತೇ ಕ್ಷಯ್ಯಲೋಕಾ ಭವನ್ತಿ" (ಛಾ. ೭-೨೫-೨), "ಮೃತ್ಯೋಃ ಸ ಮೃತ್ಯುಮಾಪ್ನೋತಿ" (ಕ ೨-೧-೧೦), ಇತಿ ಭೇದದೃಷ್ಟಿರ್ಹ್ಯಪೋದ್ಯತೇ । ಏಕತ್ವಪ್ರತಿಪಾದಿನ್ಯಶ್ಚ ಶ್ರುತಯಃ ಸಹಸ್ರಶೋ ವಿದ್ಯನ್ತೇ । ಯದುಕ್ತಂ ಜ್ಞಾನಾದಿ ಲಕ್ಷಣಭೇದಾತ್ ಇತಿ । ಅತ್ರೋಚ್ಯತೇ । ನ । ಅನಭ್ಯುಪಗಮಾತ್ । ಬುದ್ಧ್ಯಾದಿಭ್ಯೋ ವ್ಯತಿರಿಕ್ತಾ ವಿಲಕ್ಷಣಾಶ್ಚೇಶ್ವರಾದ್ ಭಿನ್ನಲಕ್ಷಣಾ ಆತ್ಮಾನೋ ನ ಸನ್ತಿ । ಏಕ ಏವೇಶ್ವರಶ್ಚ ಆತ್ಮಾ ಸರ್ವಭೂತಾನಾಂ ನಿತ್ಯಮುಕ್ತೋಽಭ್ಯುಪಗಮ್ಯತೇ ।

---

1. "ಜ್ಞಾನಾದಿ" ಎಂಬುದು ಇಲ್ಲಿ ಅವಶ್ಯವಿಲ್ಲವೆಂದು ತೋರುವದು. ವಾ॥ ಪಾಠಕ್ಕನುಗುಣವಾಗಿ "ಅಪಿ ಚ" ಎಂಬುದನ್ನು ಬಿಟ್ಟುಬಿಟ್ಟಿದೆ.

ಬಾಹ್ಯಶ್ಚ ಬುದ್ಧ್ಯಾದಿಸಮಾಹಾರಸನ್ತಾನಾಹಙ್ಕಾರಮಮತ್ವಾದಿವಿಪರೀತಪ್ರತ್ಯಯ ಪ್ರಬನ್ಧಾವಿಚ್ಛೇದಲಕ್ಷಣೋ ನಿತ್ಯಶುದ್ಧಬುದ್ಧಮುಕ್ತವಿಜ್ಞಾನಾತ್ಮೇಶ್ವರಗರ್ಭೋ ನಿತ್ಯ ವಿಜ್ಞಾನಾವಭಾಸಃ ಚಿತ್ತಚೈತ್ಯಬೀಜಬೀಜಿಸ್ವಭಾವಃ ಕಲ್ಪಿತೋಽನಿತ್ಯವಿಜ್ಞಾನ ಈಶ್ವರ ಲಕ್ಷಣವಿಪರೀತೋಽಭ್ಯುಪಗಮ್ಯತೇ । ಯಸ್ಯಾವಿಚ್ಛೇದೇ ಸಂಸಾರವ್ಯವಹಾರಃ, ವಿಚ್ಛೇದೇ ಚ ಮೋಕ್ಷವ್ಯವಹಾರಃ । ಅನ್ಯಶ್ಚ ಮೃತ್ಪ್ರಲೇಪವತ್ ಪ್ರತ್ಯಕ್ಷಪ್ರಧ್ವಂಸೋ ದೇವಪಿತೃಮನುಷ್ಯಾದಿಲಕ್ಷಣೋ ಭೂತವಿಶೇಷಸಮಾಹಾರಃ । ನ ಪುನಶ್ಚತುರ್ಥೋಽನ್ಯೋ ಭಿನ್ನಲಕ್ಷಣ ಈಶ್ವರಾದಭ್ಯುಪಗಮ್ಯತೇ । ಬುದ್ಧ್ಯಾದಿಕಲ್ಪಿತಾತ್ಮವ್ಯತಿರೇಕಾಭಿ ಪ್ರಾಯೇಣ ತು ಲಕ್ಷಣಭೇದಾತ್ (?) ಇತ್ಯಾಶ್ರಯಾಸಿದ್ಧೋ ಹೇತುಃ । ಈಶ್ವರಾದನ್ಯ ಸ್ಯಾತ್ಮನೋಽಸತ್ತ್ವಾತ್ ॥

(ಭಾಷ್ಯಾರ್ಥ)

ಇದು ಸರಿಯಲ್ಲ. ಏಕೆಂದರೆ "ಈ ದೇವತೆ ಬೇರೆ ನಾನು ಬೇರೆ–ಎಂದು ತಿಳಿಯುವವನು (ನಿಜವನ್ನು) ಅರಿಯನು'' (ಬೃ. ೧-೪-೧೦) "ಅವರು ನಾಶವಾಗುವ ಲೋಕಗಳನ್ನು ಹೊಂದುವರು" (ಛಾ. ೭-೨೫-೨) "ಅವನು ಸಾವಿನಮೇಲೆ ಸಾವನ್ನು ಹೊಂದುವನು" (ಕ. ೨-೧-೧೦) ಎಂದು (ಶ್ರುತಿಯಲ್ಲಿ) ಭೇದದೃಷ್ಟಿಯನ್ನು ನಿಂದಿಸಿರುತ್ತದೆಯಲ್ಲವೆ? ಆತ್ಮನು ಒಬ್ಬನೇ ಎಂದು ಹೇಳುವ ಶ್ರುತಿಗಳೂ ಸಾವಿರಗಟ್ಟಲೆ ಇರುತ್ತವೆ. ಜ್ಞಾನವೇ ಮುಂತಾದ ಲಕ್ಷಣಭೇದವಿರುವದರಿಂದ (ಆತ್ಮರಿಬ್ಬರೂ ಬೇರೆಬೇರೆ) ಎಂದು (ನೀವು)ಹೇಳಿದಿರಷ್ಟೆ ಆ ವಿಷಯಕ್ಕೆ ನಾವು ಹೇಳುವದೇನೆಂದರೆ· ಇದು ಸರಿಯಲ್ಲ, ಏಕೆಂದರೆ (ನಾವು) ಒಪ್ಪಿರುವದಿಲ್ಲ. ಬುದ್ಧಿಯೇ ಮುಂತಾದವುಗಳಿಗಿಂತ ಬೇರೆಯಾಗಿಯೂ ಬೇರೆಯ ಸ್ವಭಾವದವರಾಗಿಯೂ ಇರುವ[1] ಈಶ್ವರನಿಗಿಂತ ಬೇರೆಯ ಲಕ್ಷಣವುಳ್ಳ ಆತ್ಮರುಗಳು ಇಲ್ಲವೇ ಇಲ್ಲ ಒಬ್ಬನೇ ಒಬ್ಬನಾದ ಈಶ್ವರನೇ ಸರ್ವಪ್ರಾಣಿಗಳಿಗೂ ಆತ್ಮನಾಗಿ ನಿತ್ಯಮುಕ್ತನಾಗಿರುವನೆಂದು (ನಾವು) ಒಪ್ಪುತ್ತೇವೆ. ಬುದ್ಧಿಯೇ ಮುಂತಾದವುಗಳ ಒಟ್ಟಿನ ಪ್ರವಾಹದಲ್ಲಿ ನಾನು ನನ್ನದು–ಮುಂತಾದ ತಪ್ಪುತಿಳಿವಳಿಕೆಯ ಸಾಲು ಕಡಿವಡೆಯದೆ ಇರುವವನೂ, ನಿತ್ಯಶುದ್ಧಬುದ್ಧಮುಕ್ತ ವಿಜ್ಞಾನಾತ್ಮನಾದ •ಈಶ್ವರನನ್ನು ತನ್ನೊಳಗಿಟ್ಟುಕೊಂಡಿರುವವನೂ, ನಿತ್ಯಜ್ಞಾನದ ಆಭಾಸರೂಪನೂ, ಚಿತ್ತ ಮತ್ತು ವಿಷಯ ಮತ್ತು ಹೇತುಫಲ ಈ ಸ್ವಭಾವದವನೂ ಆಗಿ, ಅನಿತ್ಯವಾದ ವಿಜ್ಞಾನವುಳ್ಳ, ಈಶ್ವರಲಕ್ಷಣಕ್ಕೆ ವಿರುದ್ಧನಾಗಿರುವ, ಕಲ್ಪಿತ ಬಾಹ್ಯ ಜೀವನನ್ನು (ನಾವು) (ಒಪ್ಪಿರುತ್ತೇವೆ). ಈ (ಕಲ್ಪಿತರೂಪವು) ಕಡಿದುಹೋಗದೆ

---

[1] "ಬಾಹ್ಯಶ್ಚಕ್ಷುರ್ಬುದ್ಧ್ಯಾದಿ" ಎಂಬ (ಆ||) ಪಾಠಕ್ಕಿಂತ ನಾವು ಅನುಸರಿಸಿರುವ (ವಾ||) ಪಾಠವೇ ಮೇಲು.

ಇದ್ದರೆ ಸಂಸಾರವೆಂಬ ವ್ಯವಹಾರವುಂಟಾಗುವದು, ಕಡಿದುಹೋದರೆ ಮೋಕ್ಷವೆಂಬ ವ್ಯವಹಾರವುಂಟಾಗುವದು (ಇವೆರಡಕ್ಕಿಂತಲೂ) ಬೇರೆಯಾಗಿ ಮಣ್ಣಿನ ಬಳಿತದಂತೆ ಪ್ರತ್ಯಕ್ಷವಾಗಿಯೇ ನಾಶವಾಗುತ್ತಿರುವ ದೇವ, ಪಿತೃ, ಮನುಷ್ಯ-ಮುಂತಾದ ರೂಪದಲ್ಲಿರುವ ಭೂತವಿಶೇಷಗಳ ಸಂಘಾತವನ್ನೂ (ಒಪ್ಪಿರುತ್ತೇವೆ). ಆದರೆ (ಇವುಗಳೆಲ್ಲಕ್ಕಿಂತ) ಬೇರೆಯಾಗಿ ನಾಲ್ಕನೆಯವನಾದ ಈಶ್ವರನಿಗಿಂತ ಬೇರೆಯ ಸ್ವಭಾವದ (ಜೀವನನ್ನು) ನಾವು ಒಪ್ಪಿರುವದೇ ಇಲ್ಲ. ಬುದ್ಧಿಯೇ ಮುಂತಾದವುಗಳಲ್ಲಿ ಕಲ್ಪಿತನಾದ ಆತ್ಮನು ಬೇರೆ ಎಂಬ ಅಭಿಪ್ರಾಯದಿಂದ ಲಕ್ಷಣಭೇದವಿರುವದರಿಂದ (ಇಬ್ಬರೂ ಬೇರೆ ಎನ್ನುವದಾದರೆ) ಹೇತುವು ಆಶ್ರಯಾಸಿದ್ಧವಾಗಿರುತ್ತದೆ ಏಕೆಂದರೆ (ಆಗ) ಈಶ್ವರನಿಗಿಂತ ಬೇರೆಯಾಗಿರುವ ಆತ್ಮನು (ನಿಜವಾಗಿ) ಇರುವದೇ ಇಲ್ಲ

## ಆತ್ಮನೊಬ್ಬನಲ್ಲಿಯೇ ಸಂಸಾರಿತ್ವ, ಅಸಂಸಾರಿತ್ವ ಇವುಗಳು ಕಲ್ಪಿತ

(ಭಾಷ್ಯ)

೧೪೪. ಈಶ್ವರಸ್ಯೈವ ವಿರುದ್ಧಲಕ್ಷಣತ್ವಮಯುಕ್ತಮ್ ಇತಿ ಚೇತ್, ಸುಖದುಃಖಾದಿಯೋಗಶ್ಚ । ನ । ನಿಮಿತ್ತತ್ವೇ ಸತಿ ಲೋಕವಿಪರ್ಯಯಾಧ್ಯಾರೋಪಣಾತ್ ಸವಿತೃವತ್ । ಯಥಾ ಹಿ ಸವಿತಾ ನಿತ್ಯಪ್ರಕಾಶರೂಪತ್ವಾತ್ ಲೋಕಾಭಿವ್ಯಕ್ತ್ಯನಭಿವಕ್ತಿನಿಮಿತ್ತತ್ವೇ ಸತಿ ಲೋಕದೃಷ್ಟಿವಿಪರ್ಯಯೇಣ ಉದಯಾಸ್ತಮಯಾಹೋರಾತ್ರಾದಿಕರ್ತೃತ್ವಾಧ್ಯಾರೋಪಭಾಗ್ ಭವತಿ, ಏವಮ್ ಈಶ್ವರೇ ನಿತ್ಯವಿಜ್ಞಾನಶಕ್ತಿರೂಪೇ ಲೋಕಜ್ಞಾನಾಪೋಹಸುಖದುಃಖಸ್ಮೃತ್ಯಾದಿನಿಮಿತ್ತತ್ವೇ ಸತಿ ಲೋಕವಿಪರೀತಬುದ್ಧ್ಯಾ ಅಧ್ಯಾರೋಪಿತಂ ವಿಪರೀತಲಕ್ಷಣತ್ವಂ ಸುಖದುಃಖಾದಯಶ್ಚ ನ ಸ್ವತಃ । ಆತ್ಮದೃಷ್ಟ್ಯನುರೂಪಾಧ್ಯಾರೋಪಾಚ್ಚ । ಯಥಾ ಘನಾದಿವಿಪ್ರಕೀರ್ಣೇ ಅಮ್ಯತೇ ಯೇನೈವ ಸವಿತೃಪ್ರಕಾಶೋ ನ ದೃಶ್ಯತೇ ಸ ಆತ್ಮದೃಷ್ಟ್ಯನುರೂಪಮೇವಾಧ್ಯಸ್ಯತಿ "ಸವಿತಾ ಇದಾನೀಮಿಹ ನ ಪ್ರಕಾಶಯತಿ" ಇತಿ ಸತ್ಯೇವ ಪ್ರಕಾಶೇಽನ್ಯತ್ರ ಭ್ರಾನ್ತ್ಯಾ । ಏವಮ್ ಇಹ ಬೌದ್ಧಾದಿವೃತ್ತ್ಯುದ್ಭವಾಭಿಭವಾಕುಲಭ್ರಾನ್ತ್ಯಾ ಅಧ್ಯಾರೋಪಿತಃ ಸುಖದುಃಖಾದಿಯೋಗ ಉಪಪದ್ಯತೇ । ತತ್ಸ್ಮರಣಾಚ್ಚ । ತಸ್ಯೈವ ಈಶ್ವರಸ್ಯೈವ ಹಿ ಸ್ಮರಣಮ್ "ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ" (ಗೀ. ೧೫-೧೫), 'ನಾದತ್ತೇ ಕಸ್ಯಚಿತ್ ಪಾಪಮ್" (ಗೀ. ೫-೧೫) ಇತ್ಯಾದಿ । ಅತೋ ನಿತ್ಯಮುಕ್ತೇ ಏಕಸ್ಮಿನ್ ಸವಿತರೀವ ಲೋಕಾವಿದ್ಯಾಧ್ಯಾರೋಪಿತಮ್ ಈಶ್ವರೇ ಸಂಸಾರಿತ್ವಮ್ । ಶಾಸ್ತ್ರಾದಿಪ್ರಾಮಾಣ್ಯಾದಭ್ಯುಪಗತಮ್ ಅಸಂಸಾರಿತ್ವಮ್ ಇತ್ಯವಿರೋಧ ಇತಿ ॥

(ಭಾಷ್ಯಾರ್ಥ)

(ಶಂಕೆ) :—ಈಶ್ವರ(ನೊಬ್ಬನಲ್ಲಿ)ಯೇ ವಿರುದ್ಧವಾದ ಸ್ವಭಾವಗ(ಳೆರಡಿ)( ವದೂ ಸುಖದುಃಖಾದಿಗಳ ಸಂಬಂಧವಿರುವದೂ ಸರಿಯಲ್ಲ.

(ಪರಿಹಾರ) :—ಹಾಗಲ್ಲ. ಏಕೆಂದರೆ ಸೂರ್ಯನಂತೆ (ಬರಿಯ) ನಿಮಿ ವಾಗಿರುವಲ್ಲಿ ಜನರು ತಪ್ಪಾಗಿ ಆರೋಪಮಾಡುತ್ತಿರುತ್ತಾರೆ. ಸೂರ್ಯನು ನಿತ್ಯಪ್ರಕಾ ರೂಪನಾಗಿರುವದರಿಂದ ಲೋಕದ (ಪದಾರ್ಥಗಳನ್ನು) ತೋರಿಸುವದು, ತೋರಿಸದಿ ವದು ಎಂಬಿವೆರಡಕ್ಕೂ (ಬರಿಯ) ಕಾರಣನಾಗಿರುವಲ್ಲಿ ಜನರ ತಪ್ಪಾದ ತಿಳಿವಳಿ ಯಿಂದ ಹುಟ್ಟುವದು, ಮುಳುಗುವದು, ಹಗಲುರಾತ್ರಿಗಳನ್ನುಂಟುಮಾಡುವದು ಮುಂತಾದ ಆರೋಪಕ್ಕೆ ಹೇಗೆ ಪಾತ್ರನಾಗುತ್ತಾನೋ ಅದರಂತೆ ನಿತ್ಯವಿಜ್ಞಾನಶ ರೂಪನಾದ ಈಶ್ವರನು ಜನರ ಜ್ಞಾನ, ಅದರ ನಾಶ, ಸುಖ, ದುಃಖ, ಸ್ಮೃತಿ ಮುಂತಾದವುಗಳಿಗೆ (ಕೇವಲ) ನಿಮಿತ್ತನಾಗಿರುವಲ್ಲಿ ಜನರ ತಪ್ಪುತಿಳಿವಳಿಕೆಯಿಂ ಆರೋಪಿತವಾಗಿ (ಅವನಲ್ಲಿ) ವಿರುದ್ಧಸ್ವಭಾವವೂ ಸುಖದುಃಖಾದಿಗಳೂ (ತೋ ವವೇ) ಹೊರತು ಅವನಲ್ಲಿಯೇ (ಅವು ನಿಜವಾಗಿರುವ)ದಿಲ್ಲ. ತಮ್ಮ ದೃಷ್ಟಿಗೆ ಅ ಗುಣವ್ವಾಗಿ ಆರೋಪವಮಾಡುತ್ತಿರುವದರಿಂದಲೂ (ಹೀಗೆಂದು ತಿಳಿಯಬೇಕು). ಆಕ ಶವು ಮೋಡವೇ ಮುಂತಾದವುಗಳಿಂದ ಮುಚ್ಚಿರುವಾಗ ಯಾವನಿಗೆ ಸೂರ್ಯ ಬೆಳಕು ಕಾಣುವದಿಲ್ಲವೋ ಅವನು ಮಾತ್ರವೇ "ಸೂರ್ಯನು ಈಗ ಇಲ್ಲಿ ಬೆಳಗು ಲಿಲ್ಲ" ಎಂದು ಮತ್ತೊಂದು ಕಡೆಯಲ್ಲಿ ಬೆಳಕು ಇರುತ್ತಿದ್ದರೂ ಭ್ರಾಂತಿಯಿಂದ ತ ದೃಷ್ಟಿಗೆ ಅನುಗುಣವಾಗಿಯೇ ಆರೋಪಿಸುತ್ತಾನೆ. ಅದರಂತೆ ಇಲ್ಲಿ(ಯೂ) ಬುದ್ಧಿಯೇ ಮುಂತಾದವುಗಳ ವೃತ್ತಿಗಳು ಹುಟ್ಟುವದು, ಮರೆಯಾಗುವದು ಇವುಗಳಿಂದ ಏನು ತೋಚದ ಭ್ರಾಂತಿಯಿಂದ ಆರೋಪಿತವಾದ ಸುಖ, ದುಃಖ—ಮುಂತಾದವುಗ ಸಂಬಂಧವು (ಈಶ್ವರನಲ್ಲಿ) ಹೊಂದುತ್ತದೆ. ಆತನ ಸ್ಮೃತಿಯಿರುವದರಿಂದಲು (ಹೀಗೆಂದು ತಿಳಿಯಬೇಕು). ಅದೇ ಈಶ್ವರನ ಸ್ಮೃತಿಯು "ನನ್ನಿಂದ ಸ್ಮೃತಿಯು ಜ್ಞಾನವು ಮತ್ತು (ಜ್ಞಾನದ) ನಾಶ—ಇವುಗಳುಂಟಾಗುವವು" (ಗೀ. ೧೫-೧೫) "(ಈಶ್ವರನು) ಯಾವನ ಪಾಪವನ್ನೂ ಸ್ವೀಕರಿಸುವದಿಲ್ಲ" (ಗೀ. ೫-೧೫) ಎಂದ ಮುಂತಾಗಿರುತ್ತದೆ. ಆದ್ದರಿಂದ ನಿತ್ಯಮುಕ್ತನಾದ ಒಬ್ಬನೇ ಆದ ಈಶ್ವರನ ಸೂರ್ಯನಲ್ಲಿ (ಉದಯಾದಿಗಳು ಆರೋಪಿತವಾಗಿರುವಂತೆ) ಜನರ ಅವಿದ್ಯೆಯಿಂ ಸಂಸಾರಿತ್ವವು ಆರೋಪಿತವಾಗಿರುತ್ತದೆ ಶಾಸ್ತ್ರವೇ ಮುಂತಾದ ಪ್ರಾಮಾಣ್ಯದಿಂ ಅವನಲ್ಲಿ ಅಸಂಸಾರಿತ್ವವನ್ನು ಒಪ್ಪಿರುತ್ತೇವೆ. ಆದ್ದರಿಂದ (ಇವೆರಡಕ್ಕೂ) ವಿರೋಧವಿಲ್ಲ

(ಭಾಷ್ಯ)

೧೪೫. ಏತೇನ ಪ್ರತ್ಯೇಕಂ ಜ್ಞಾನಾದಿಭೇದಃ ಪ್ರತ್ಯುಕ್ತಃ । ಸೌಕ್ಷ್ಮ್ಯಾಚ್ಚೈತನ

ಸರ್ವಗತ್ವಾದ್ಯವಿಶೇಷೇ ಚ ಭೇದಹೇತ್ವಭಾವಾತ್। ವಿಕ್ರಿಯಾವತ್ತ್ವೇ ಚಾನಿತ್ಯತ್ವಾತ್ । ಮೋಕ್ಷೇಚ ವಿಶೇಷಾನಭ್ಯುಪಗಮಾತ್, ಅಭ್ಯುಪಗಮೇ ಚಾನಿತ್ಯತ್ವಪ್ರಸಙ್ಗಾತ್ । ಅವಿದ್ಯಾವದುಪಲಭ್ಯತ್ವಾಚ್ಚ ಭೇದಸ್ಯ ತತ್ಕೃತ್ಯಯೇಽನುಪಪತ್ತಿಃ, ಇತಿ ಸಿದ್ಧಮೇಕತ್ವಮ್ । ತಸ್ಮಾತ್ ಶರೀರೇನ್ದ್ರಿಯಮನೋಬುದ್ಧಿವಿಷಯವೇದನಾಸನ್ತಾನಸ್ಯ ಅಹಙ್ಕಾರಸಮ್ಬನ್ಧಾದಜ್ಞಾನಬೀಜಸ್ಯ ನಿತ್ಯವಿಜ್ಞಾನಾನ್ಯನಿಮಿತ್ತಸ್ಯ ಆತ್ಮತತ್ತ್ವಯಾಥಾತ್ಮ್ಯವಿಜ್ಞಾನಾದ್ವಿನಿವೃತ್ತೌ ಅಜ್ಞಾನಬೀಜಸ್ಯ ವಿಚ್ಛೇದೇ ಆತ್ಮನೋ ಮೋಕ್ಷಸಂಜ್ಞಾ, ವಿಪರ್ಯಯೇ ಚ ಬನ್ಧಸಂಜ್ಞಾ । ಸ್ವರೂಪಾಪೇಕ್ಷತ್ವಾದುಭಯೋಃ ॥

(ಭಾಷ್ಯಾರ್ಥ)

ಇದರಿಂದ ಒಬ್ಬೊಬ್ಬ (ಜೀವನಲ್ಲಿಯೂ) ಜ್ಞಾನವೇ ಮುಂತಾದವುಗಳು ಬೇರೆ ಬೇರೆ ಇರುವವೆಂಬುದನ್ನೂ ನಿರಾಕರಿಸಿದಂತಾಯಿತು. ಏಕೆಂದರೆ ಸೂಕ್ಷ್ಮವಾಗಿರುವದು, ಚೈತನ್ಯ(ಸ್ವರೂಪ), ಸರ್ವಗತನಾಗಿರುವದು–ಮುಂತಾದವುಗಳು (ಎಲ್ಲರಲ್ಲಿಯೂ) ಸಮಾನವಾಗಿರುವಲ್ಲಿ ಭೇದಕ್ಕೆ (ಯಾವ) ಕಾರಣವೂ ಇರುವದಿಲ್ಲ. (ಆತ್ಮನು) ವಿಕಾರವುಳ್ಳವನೆಂದರೆ ಅನಿತ್ಯನೆಂದಾಗುವದಾದ್ದರಿಂದಲೂ ಮೋಕ್ಷದಲ್ಲಿ ಯಾವ ವಿಶೇಷವೂ (ಆತ್ಮನಲ್ಲಿ)ರುವದೆಂದು (ಯಾರೂ) ಒಪ್ಪುವದಿಲ್ಲವಾದ್ದರಿಂದಲೂ ಒಪ್ಪಿದರೆ (ಆತ್ಮನೇ) ಅನಿತ್ಯನಾಗುವದರಿಂದಲೂ (ಭೇದಕ್ಕೆ ಕಾರಣವಿರುವದಿಲ್ಲ). ಅವಿದ್ಯಾವಂತರಿಗೆ (ಮಾತ್ರ) ಕಾಣಿಸುವದರಿಂದಲೂ ಭೇದವು ಆ (ಅವಿದ್ಯೆ) ಹೋದ ಬಳಿಕ ಇರಲಾರದು. ಆದ್ದರಿಂದ ಆತ್ಮನು ಒಬ್ಬನೇ ಎಂದು ಸಿದ್ಧವಾಯಿತು. ಆದ್ದರಿಂದ ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ, ವಿಷಯಗಳು, ವೇದನೆ–ಇವುಗಳ ಪ್ರವಾಹವು ಅಹಂಕಾರಸಂಬಂಧವುಳ್ಳದ್ದಾಗಿರುವದರಿಂದ ಇದಕ್ಕೆ ಅಜ್ಞಾನವೇ ಕಾರಣವು; ನಿತ್ಯವಿಜ್ಞಾನರೂಪವಾದ (ಆತ್ಮನಿಗಿಂತ) ಬೇರೆಯಾದದ್ದೇ ಇದಕ್ಕೆ ನಿಮಿತ್ತವಾಗಿರುತ್ತದೆ. (ಆದ್ದರಿಂದ) ಆತ್ಮತತ್ತ್ವವನ್ನು ಇದ್ದದ್ದು ಇದ್ದಂತೆ ಅರಿತುಕೊಂಡ ಮೇಲೆ (ಇದು) ಹೋಗಿ ಅಜ್ಞಾನವೆಂಬ ಕಾರಣವು ನಾಶವಾಗಲಾಗಿ ಆತ್ಮನಿಗೆ ಮೋಕ್ಷವೆಂಬ ವ್ಯವಹಾರವುಂಟಾಗುತ್ತದೆ; ಹಾಗಿಲ್ಲದಿದ್ದರೆ ಬಂಧವೆಂಬ ವ್ಯವಹಾರವುಂಟಾಗುತ್ತದೆ. ಏಕೆಂದರೆ ಈ ಎರಡಕ್ಕೂ (ಆತ್ಮನ) ಸ್ವರೂಪವೇ ಬೇಕಾಗಿರುತ್ತದೆ.[1]

## ದೇವತೆಗಳ ಗರ್ವ

**ಬ್ರಹ್ಮ ಹ........ಅಮಹೀಯನ್ತ ॥ ೧ ॥**

---

1. ಆತ್ಮಸ್ವರೂಪದಲ್ಲಿಯೇ ಬಂಧಮುಕ್ತಿಗಳೆರಡೂ ಕಲ್ಪಿತವಾಗಿರುತ್ತವೆ.

(ಭಾಷ್ಯ)

೧೪೬. "ಬ್ರಹ್ಮ ಹ" ಇತ್ಯೈತಿಹ್ಯಾರ್ಥಃ । ಪುರಾಕಿಲದೇವಾಸುರಸಙ್ಗ್ರಾಮೇ ಜಗತ್ಸ್ಥಿತಿಪರಿಪಿಪಾಲಯಿಷಯಾ ಆತ್ಮಾನುಶಾಸನಾನುವರ್ತಿಭ್ಯೋ ದೇವೇಭ್ಯೋಽರ್ಥಿಭ್ಯೋಽರ್ಥಾಯ ವಿಜಿಗ್ಯೇ ಅಜೈಷೀತ್ ಅಸುರಾನ್ । ಬ್ರಹ್ಮಣ ಇಚ್ಛಾನಿಮಿತ್ತೋ ವಿಜಯೋ ದೇವಾನಾಂ ಬಭೂವ ಇತ್ಯರ್ಥಃ । ತಸ್ಯ ಹ ಬ್ರಹ್ಮಣೋ ವಿಜಯೇ ದೇವಾ ಅಮಹೀಯನ್ತ । ಯಜ್ಞಾದಿಲೋಕಸ್ಥಿತ್ಯಪಹಾರಿಷ್ವಸುರೇಷು ಪರಾಜಿತೇಷು ದೇವಾ ವೃದ್ಧಿಂ ಪೂಜಾಂ ವಾ ಪ್ರಾಪ್ತವನ್ತಃ ॥

(ಭಾಷ್ಯಾರ್ಥ)

"ಬ್ರಹ್ಮ ಹ" (ಎಂಬಲ್ಲಿ ಹ ಎಂಬುದು) ಹಿಂದೆ ನಡೆಯಿತೆಂಬುದನ್ನು ತಿಳಿಸುತ್ತದೆ. ಹಿಂದೆ ದೇವತೆಗಳಿಗೂ ಅಸುರರಿಗೂ ಯುದ್ಧವುಂಟಾಗಲಾಗಿ ಜಗತ್ತಿನ ಸ್ಥಿತಿಯನ್ನು ಕಾಪಾಡುವದಕ್ಕಾಗಿ (ಬ್ರಹ್ಮವು) ತನ್ನ ಅಪ್ಪಣೆಯನ್ನು ಅನುಸರಿಸುವ ವಿಜಯಾರ್ಥಿಗಳಾದ ದೇವತೆಗಳಿಗೋಸ್ಕರ "ವಿಜಿಗ್ಯೇ" ಎಂದರೆ ಅಸುರರನ್ನು ಸೋಲಿಸಿತಂತೆ. ಬ್ರಹ್ಮದ ಇಚ್ಛೆಯ ನಿಮಿತ್ತದಿಂದ ದೇವತೆಗಳಿಗೆ ಗೆಲವಾಯಿತು ಎಂದರ್ಥ. ಆ ಬ್ರಹ್ಮದ ವಿಜಯದಲ್ಲಿ ದೇವತೆಗಳು ಮಹಿಮೆಯನ್ನು ಪಡೆದರು ; ಯಜ್ಞವೇ ಮುಂತಾದ ಲೋಕದ ವ್ಯವಸ್ಥೆಯನ್ನು ಅಪಹರಿಸುತ್ತಿದ್ದ ಅಸುರರು ಸೋಲಲಾಗಿ ದೇವತೆಗಳು ಅಭಿವೃದ್ಧಿಯನ್ನು ಅಥವಾ ಪೂಜ್ಯತೆಯನ್ನು ಪಡೆದುಕೊಂಡರು.

## ಬ್ರಹ್ಮವು ಯಕ್ಷರೂಪದಿಂದ ಕಾಣಿಸಿಕೊಂಡದ್ದು

**ತ ಐಕ್ಷನ್ತಾಸ್ಮಾಕಮೇವಾಯಂ........ಯಕ್ಷಮಿತಿ ॥ ೨ ॥**

(ಭಾಷ್ಯ)

೧೪೭. "ತ ಐಕ್ಷನ್ತ" ಇತಿ ಮಿಥ್ಯಾಪ್ರತ್ಯಯತ್ವಾದ್ ಹೇಯತ್ವಖ್ಯಾಪನಾರ್ಥ * ಆಮ್ನಾಯಃ । ಈಶ್ವರನಿಮಿತ್ತೇ ವಿಜಯೇ "ಸ್ವಸಾಮರ್ಥ್ಯನಿಮಿತ್ತೋಽಸ್ಮಾಕಮೇವಾಯಂ ವಿಜಯಃ, ಅಸ್ಮಾಕಮೇವಾಯಂ ಮಹಿಮಾ" ಇತ್ಯಾತ್ಮನೋ ಜಯಾದಿಶ್ರೇಯೋನಿಮಿತ್ತಂ ಸರ್ವಾತ್ಮಾನಮ್ ಆತ್ಮಸ್ಥಂ ಸರ್ವಕಲ್ಯಾಣಾಸ್ಪದಮ್ ಈಶ್ವರಮೇವಾತ್ಮತ್ವೇನಾಬುದ್ಧ್ವಾ ಪಿಣ್ಡಮಾತ್ರಾಭಿಮಾನಾಃ ಸನ್ತೋ ಯಂ ಮಿಥ್ಯಾಪ್ರತ್ಯಯಂ ಚಕ್ರು, ತಸ್ಯ ಪಿಣ್ಡಮಾತ್ರ ವಿಷಯತ್ವೇನ ಮಿಥ್ಯಾಪ್ರತ್ಯಯತ್ವಾತ್ ಸರ್ವಾತ್ಮೇಶ್ವರಯಾಥಾತ್ಮ್ಯಾವಬೋಧೇನ ಹಾತವ್ಯತಾ ಖ್ಯಾಪನಾರ್ಥಃ "ತದ್ಧೈಷಾಮ್" ಇತ್ಯಾದ್ಯಾಖ್ಯಾಯಿಕಾಮ್ನಾಯಃ ॥

---

1. "ಖ್ಯಾಪನಾರ್ಥಮಾಮ್ನಾಯಃ" ॥ (ಅ॥)

(ಭಾಷ್ಯಾರ್ಥ)

"ತ ಐಕ್ಷನ್ತ" ಎಂಬ ವೇದವಾಕ್ಯವು (ದೇವತೆಗಳದ್ದು) ಮಿಥ್ಯಾಪ್ರತ್ಯಯವಾದ್ದರಿಂದ ಬಿಡತಕ್ಕದ್ದು ಎಂದು ತಿಳಿಸುವದಕ್ಕಾಗಿ ಬಂದಿರುತ್ತದೆ. ವಿಜಯವು ಈಶ್ವರನಿಂದಾದದ್ದಾದರೂ "ನಮ್ಮ ಸಾಮರ್ಥ್ಯದಿಂದಲೇ ಆದದ್ದು, ಇದು ನಮ್ಮದೇ ವಿಜಯವು, ಇದು ನಮ್ಮದೇ ಮಹಿಮೆಯು" ಎಂದು ತಮ್ಮ ವಿಜಯವೇ ಮುಂತಾದ ಶ್ರೇಯಸ್ಸಿಗೆ ಕಾರಣನಾದ ಎಲ್ಲರ ಆತ್ಮನಾದ ತಮ್ಮೊಳಗಿರುವ ಸರ್ವಕಲ್ಯಾಣಗಳಿಗೂ ಆಧಾರನಾದ ಈಶ್ವರನೇ (ತಮ್ಮ) ಆತ್ಮನೆಂದರಿಯದೆ ಶರೀರಮಾತ್ರದಲ್ಲಿಯೇ (ನಾವೆಂಬ) ಅಭಿಮಾನವುಳ್ಳವರಾಗಿ ಯಾವ ತಪ್ಪುತಿಳಿವಳಿಕೆಯನ್ನು (ದೇವತೆಗಳು) ಮಾಡಿಕೊಂಡರೋ ಅದು ಶರೀರಮಾತ್ರವಿಷಯಕವಾದ (ಆತ್ಮಜ್ಞಾನ)ವಾದ್ದರಿಂದ ತಪ್ಪುತಿಳಿವಳಿಕೆಯಾಗಿರುವದರಿಂದ ಎಲ್ಲರಿಗೂ ಆತ್ಮನಾದ ಈಶ್ವರನ ನಿಜವಾದ ಸ್ವರೂಪವನ್ನು ತಿಳಿದುಕೊಂಡು (ಅದನ್ನು) ಬಿಡತಕ್ಕದ್ದು ಎಂದು ತಿಳಿಸಿಕೊಡುವದಕ್ಕಾಗಿ "ತದ್ಧೈಷಾಮ್" ಮುಂತಾದ ಕಥಾರೂಪವಾದ ವೇದವಾಕ್ಯವು ಬಂದಿರುತ್ತದೆ.

(ಭಾಷ್ಯ)

೧೪೪. ತದ್ ಬ್ರಹ್ಮ ಹ ಕಿಲ ಏಷಾಂ ದೇವಾನಾಮ್ ಅಭಿಪ್ರಾಯಂ ಮಿಥ್ಯಾಹಂಕಾರರೂಪಂ ವಿಜಜ್ಞೌ ವಿಜ್ಞಾತವತ್ । ಜ್ಞಾತ್ವಾ ಚ ಮಿಥ್ಯಾಭಿಮಾನಶಾತನೇನ ತದನುಜಿಘೃಕ್ಷಯಾ ದೇವೇಭ್ಯೋಽರ್ಥಾಯ ತೇಷಾಮೇವ ಇನ್ದ್ರಿಯಗೋಚರೇ ನಾತಿದೂರೇ ಪ್ರಾದುರ್ಬಭೂವ । ಮಹೇಶ್ವರಶಕ್ತಿಮಾಯೋಪಾತ್ತೇನ ಅತ್ಯನ್ತಾದ್ಭುತೇನ ಪ್ರಾದುರ್ಭೂತಂ ಕಿಲ ಕೇನಚಿದ್ ರೂಪವಿಶೇಷೇಣ । ತತ್ ಕಿಲ ಉಪಲಭಮಾನಾ ಅಪಿ ದೇವಾ ನ ವ್ಯಜಾನತ ನ ವಿಜ್ಞಾತವನ್ತಃ । ಕಿಮಿದಂ ಯದೇತದ್ ಯಕ್ಷಂ ಪೂಜ್ಯಮ್ ಇತಿ ॥

(ಭಾಷ್ಯಾರ್ಥ)

ಆ ಬ್ರಹ್ಮವು ಈ ದೇವತೆಗಳ ಮಿಥ್ಯಾಹಂಕಾರರೂಪವಾದ ಅಭಿಪ್ರಾಯವನ್ನು ತಿಳಿದುಕೊಂಡಿತಂತೆ, ತಿಳಿದುಕೊಂಡದ್ದಾಯಿತಂತೆ. ತಿಳಿದುಕೊಂಡಬಳಿಕ ತಪ್ಪಾಗಿರುವ (ಅವರ) ಅಭಿಮಾನವನ್ನು ಕತ್ತರಿಸಿ ಅವರಿಗೆ ಅನುಗ್ರಹಮಾಡಬೇಕೆಂಬ ಇಚ್ಛೆಯಿಂದ ದೇವತೆಗಳಿಗೋಸ್ಕರ ಅವರಿಗೇ ಇಂದ್ರಿಯಗೋಚರವಾಗುವಂತೆ ಹತ್ತಿರದಲ್ಲಿ ತೋರಿಕೊಂಡಿತು. ಮಹೇಶ್ವರಶಕ್ತಿಯಾದ ಮಾಯೆಯಿಂದ ಸ್ವೀಕರಿಸಿದ ಅತ್ಯಂತ ಅದ್ಭುತವಾದ ಒಂದಾನೊಂದು ರೂಪವಿಶೇಷದಿಂದ ಕಾಣಿಸಿಕೊಂಡಿತಂತೆ. ಅದನ್ನು ಕಂಡರೂ ದೇವತೆಗಳು ಈ ಯಕ್ಷವು, ಪೂಜ್ಯತತ್ತ್ವವು, ಯಾವದು ?–ಎಂಬುದನ್ನು ತಿಳಿಯಲಿಲ್ಲ, ತಿಳಿಯದವರಾದರು.

## ಅಗ್ನಿ ವಾಯುಗಳ ಗರ್ವಭಂಗ

**ತೇಽಗ್ನಿಮಬ್ರುವನ್... ....ತಥೇತಿ ॥ ೩ ॥**

**ತದಭ್ಯದ್ರವತ್........ಅಹಮಸ್ಮೀತಿ ॥ ೪ ॥**

**ತಸ್ಮಿಗ್ಂಸ್ತ್ವಯಿ ....ಪೃಥಿವ್ಯಾಮ್ ಇತಿ ॥ ೫ ॥**

**ತಸ್ಮೈ .......ಯದೇತದ್ಯಕ್ಷಮಿತಿ ॥ ೬ ॥**

**ಅಥ ವಾಯುಮಬ್ರುವನ್.. ....ತಥೇತಿ ॥ ೭ ॥**

**ತದಭ್ಯದ್ರವತ್... ....ಅಹಮಸ್ಮೀತಿ ॥ ೮ ॥**

**ತಸ್ಮಿಗ್ಂಸ್ತ್ವಯಿ........ಪೃಥಿವ್ಯಾಮಿತಿ ॥ ೯ ॥**

**ತಸ್ಮೈ........ಯದೇತದ್ಯಕ್ಷಮಿತಿ ॥ ೧೦ ॥**

(ಭಾಷ್ಯ)

೧೪೯. ತದ್ವಿಜ್ಞಾನಾಯಾಗ್ನಿಮಬ್ರುವನ್ । ತೃಣನಿಧಾನೇಽಯಮಭಿಪ್ರಾಯಃ- ಅತ್ಯನ್ತಸಮ್ಭಾವಿತಯೋರಗ್ನಿಮಾರುತಯೋಃ ತೃಣದಹನಾದಾನಾಶಕ್ತ್ಯಾ ಆತ್ಮ ಸಮ್ಭಾವನಾ ಶಾತಿತಾ ಭವೇದಿತಿ ॥

(ಭಾಷ್ಯಾರ್ಥ)

ಅದನ್ನು ಅರಿತುಕೊಳ್ಳುವದಕ್ಕೆ ಅಗ್ನಿಯನ್ನು ಕುರಿತು ಇಂತೆಂದರು . (ಇತ್ಯಾದಿ ಗ್ರಂಥವು ಸ್ಪಷ್ಟವಾಗಿದೆ) ಹುಲ್ಲುಕಡ್ಡಿಯನ್ನು ಮುಂದೆ ಇಟ್ಟಿದ್ದರ ಅಭಿಪ್ರಾಯ ವೇನೆಂದರೆ ಅತ್ಯಂತ ಹೆಚ್ಚಿನವರೆಂದು (ಹೆಸರುವೆತ್ತ) ಅಗ್ನಿ, ವಾಯು ಇವರುಗಳಿಗೆ ಹುಲ್ಲುಕಡ್ಡಿಯನ್ನು ಸುಡುವದಕ್ಕೂ ಎತ್ತಿಕೊಳ್ಳುವದಕ್ಕೂ ಶಕ್ತಿಯಿಲ್ಲದೆ ಹೋಗಲು ತಮ್ಮಲ್ಲಿದ್ದ ಹೆಮ್ಮೆಯು ಕತ್ತರಿಸಿಹೋಗಲಿ ಎಂಬುದೇ.

## ಇಂದ್ರನ ಗರ್ವಭಂಗ

**ಅಥೇನ್ದ್ರಮಬ್ರುವನ್........ತಿರೋದಧೇ ॥ ೧೧ ॥**

(ಭಾಷ್ಯ)

೧೫೦. ಇನ್ದ್ರ ಆದಿತ್ಯೋ ವಜ್ರಭೃದ್ ವಾ । ಅವಿರೋಧಾತ್ । ಇನ್ದ್ರೋಽಪ ಸರ್ಪಣೇ ಬ್ರಹ್ಮ ತಿರೋದಧೇ ಇತ್ಯತ್ರಾಯಮಭಿಪ್ರಾಯಃ—"ಇನ್ದ್ರೋಽಹಮ್" ಇತ್ಯಧಿಕತಮೋಽಭಿಮಾನೋಽಸ್ಯ । "ಸೋಽಹಮ್ ಅಗ್ನ್ಯಾದಿಭಿಃ ಪ್ರಾಪ್ತಂ ವಾಕ್ಸಮ್ಭಾಷಣಮಾತ್ರಮಪಿ ಅನೇನ ನ ಪ್ರಾಪ್ತೋಽಸ್ಮಿ" ಇತ್ಯಭಿಮಾನಂ ಕಥಂ ನ(?) ನಾಮ ಜಹ್ಯಾತ್ ಇತಿ ತದನುಗ್ರಹಾಯೈವಾನ್ತರ್ಹಿತಂ ತದ್ಬ್ರಹ್ಮ ಬಭೂವ ॥

(ಭಾಷ್ಯಾರ್ಥ)

(ಇಲ್ಲಿ) ಇಂದ್ರನೆಂದರೆ ಆದಿತ್ಯನು,[1] ಅಥವಾ ವಜ್ರಾಯುಧಧಾರಿಯಾದ (ದೇವ ರಾಜನು); ಏಕೆಂದರೆ (ಈ ಎರಡು ಅರ್ಥಗಳನ್ನಿಟ್ಟುಕೊಂಡರೂ (ಯಾವ) ವಿರೋಧವೂ ಇರುವದಿಲ್ಲ. ಇಂದ್ರನು ಬಳಿಗೆ ಬರಲು ಬ್ರಹ್ಮ ಮರೆಯಾಯಿತು–ಎಂಬಲ್ಲಿ ಅಭಿಪ್ರಾಯವೇನೆಂದರೆ. "ನಾನು ಇಂದ್ರನು'' ಎಂದು ಇವನಿಗೆ ಎಲ್ಲರಿಗಿಂತಲೂ ಹೆಚ್ಚಿನ ಅಭಿಮಾನವಿರುತ್ತದೆ. "ಇಂಥ ನನಗೆ ಅಗ್ನಿಯೇ ಮೊದಲಾದವರಿಗೆ ದೊರಕಿದ ಮಾತುಕಥೆಕೂಡ ಈ (ಯಕ್ಷನಿಂದ) ದೊರಕಲಿಲ್ಲವಲ್ಲ!" ಎಂದು ಹೆಮ್ಮೆಯನ್ನು ಹೇಗಾದರೂ ತೊರೆಯಲಿ ಎಂದು ಅವನ ಅನುಗ್ರಹಕ್ಕಾಗಿಯೇ ಆ ಬ್ರಹ್ಮವು ಕಣ್ಮರೆಯಾಯಿತು.

## ಉಮಾದೇವಿಯ ದರ್ಶನ

**ಸ ತಸ್ಮಿನ್ನೇವಾಕಾಶೇ........ಕಿಮೇತದ್ಯಕ್ಷಮಿತಿ ॥ ೧೨ ॥**

(ಭಾಷ್ಯ)

೧೫೧. ಸ ಶಾನ್ತಾಭಿಮಾನ ಇನ್ದ್ರೋಽತ್ಯರ್ಥಂ ಬ್ರಹ್ಮ ವಿಜಿಜ್ಞಾಸುಃ ಯಸ್ಮಿನ್ ಆಕಾಶೇ ಬ್ರಹ್ಮಣಃ ಪ್ರಾದುರ್ಭಾವ ಆಸೀತ್ ತಿರೋಧಾನಂ ಚ । ತಸ್ಮಿನ್ನೇವ ಸ್ತ್ರಿಯಮ್ ಅತಿರೂಪಿಣೀಂ ವಿದ್ಯಾಮ್ ಆಜಗಾಮ । ಅಭಿಪ್ರಾಯೋದ್ಬೋಧಹೇತುತ್ವಾತ್ ರುದ್ರಪ್ರತ್ನ್ಯುಮಾ ಹೈಮವತೀವ ಸಾ ಶೋಭಮಾನ ವಿದ್ಯೈವ । ವಿರೂಪೋಽಪಿ ವಿದ್ಯಾವಾನ್ ಬಹುಶೋಭತೇ ॥

(ಭಾಷ್ಯಾರ್ಥ)

ಹೀಗೆ ಹೆಮ್ಮೆಯು ತೊಲಗಿದಬಳಿಕ ಇಂದ್ರನು ಬ್ರಹ್ಮವನ್ನು ತಿಳಿದುಕೊಳ್ಳಬೇಕೆಂಬ ಬಲವಾದ ಇಚ್ಛೆಯುಳ್ಳವನಾಗಿ ಬ್ರಹ್ಮವು ಯಾವ ಆಕಾಶದಲ್ಲಿ ತೋರಿಕೊಂಡು ಮರೆಯಾಯಿತೋ ಅದೇ ಆಕಾಶದಲ್ಲಿ ಪೂಜ್ಯರೂಪಳಾದ ವಿದ್ಯೆಯನ್ನು (ಕಂಡು) ಬಳಿಸಾರಿದನು. ಅಭಿಪ್ರಾಯವನ್ನು ಪ್ರಕಟಗೊಳಿಸುವದಕ್ಕೆ ಕಾರಣವಾಗಿರುವದರಿಂದ ರುದ್ರಪತ್ನಿಯಾದ ಹೈಮವತಿ ಉಮೆಯಂತೆ ಹೊಳೆಯುತ್ತಿದ್ದ (ಆಕೆಯು) ವಿದ್ಯೆಯೇ.[2] (ಏಕೆಂದರೆ) ವಿದ್ಯಾವಂತನು ರೂಪಹೀನನಾಗಿದ್ದರೂ ಬಹಳ ಶೋಭಿಸುತ್ತಿರುತ್ತಾನೆ.

1. ಈ ಅರ್ಥವು ಪದಭಾಷ್ಯದಲ್ಲಿಲ್ಲ; ಹೊಸ ಅರ್ಥಕ್ಕೆ ಇಲ್ಲಿ ಕಾರಣವನ್ನು ಕೊಟ್ಟಿಲ್ಲ.
2. ಉಮೆಯೆಂದೂ ಅರ್ಥವಾಗಬಹುದೆಂದು ಪದಭಾಷ್ಯದಲ್ಲಿದೆ.

# ನಾಲ್ಕನೆಯ ಖಂಡ

## ಉಮೆಯ ಉಪದೇಶದಿಂದ ಆದ ಜ್ಞಾನ

**ಬ್ರಹ್ಮೇತಿ[1] ಹೋವಾಚ........ಬ್ರಹ್ಮೇತಿ ‖ ೧ ‖**

**ತಸ್ಮಾದ್ವಾ ಏತೇ... . ಬ್ರಹ್ಮೇತಿ ‖ ೨ ‖**

**ತಸ್ಮಾದ್ವಾ ಇನ್ದ್ರೋ ....ಬ್ರಹ್ಮೇತಿ ‖ ೩ ‖**

(ಭಾಷ್ಯ)

೧।೩।೨. ತಾಂ ಚ ಪೃಷ್ಟ್ವಾ ತಸ್ಯಾ ಏವ ವಚನಾದ್ ವಿದಾಂಚಕಾರ ವಿದಿತವಾನ್ । ಅತ ಇನ್ದ್ರಸ್ಯ ಬೋಧಹೇತುತ್ವಾದ್ ವಿದ್ಯೈವೋಮಾ । ವಿದ್ಯಾಸಹಾಯವಾನ್ ಈಶ್ವರ ಇತಿ ಸ್ಮೃತಿಃ । ಯಸ್ಮಾತ್ ಇನ್ದ್ರವಿಜ್ಞಾನಪೂರ್ವಕಮ್ ಅಗ್ನಿವಾಯ್ವಿನ್ದ್ರಾಃ ತೇಹ್ಯೇನನ್ನೇದಿಷ್ಠಮ್ ಅತಿಸಮೀಪಂ ಬ್ರಹ್ಮವಿದ್ಯಯಾ ಬ್ರಹ್ಮಪ್ರಾಪ್ತಾಃ ಸನ್ತಃ ಪಸ್ಪೃಶುಃ ಸ್ಪೃಷ್ಟವನ್ತಃ । ತೇ ಹಿ ಏನತ್ ಪ್ರಥಮಃ ಪ್ರಥಮಂ ವಿದಾಞ್ಚಕಾರ ವಿದಾಞ್ಚಕ್ರುರಿತ್ಯೇತತ್ । ತಸ್ಮಾತ್ ಅತಿತರಾಮ್ ಅತೀತ್ಯಾನ್ಯಾನ್ ಅತಿಶಯೇನ ದೀಪ್ಯನ್ತೇ ಅನ್ಯಾನ್ ದೇವಾನ್ । ತತೋಽಪೀನ್ದ್ರೋಽತಿತರಾಂ ದೀಪ್ಯತೇ । ಆದೌ ಬ್ರಹ್ಮವಿಜ್ಞಾನಾತ್ ‖

(ಭಾಷ್ಯಾರ್ಥ)

ಆಕೆಯನ್ನು ಕೇಳಿ ಆಕೆಯ ಮಾತಿನಿಂದಲೇ (ಬ್ರಹ್ಮವೆಂದು) ತಿಳಿದುಕೊಂಡನು, ತಿಳಿದುಕೊಂಡವನಾದನು. ಆದ್ದರಿಂದ ಇಂದ್ರನಿಗೆ ಜ್ಞಾನಕ್ಕೆ ಕಾರಣವಾಗಿರುವದರಿಂದ ಉಮೆಯೆಂದರೆ ವಿದ್ಯೆಯೇ. ಈಶ್ವರನು ವಿದ್ಯೆಯೊಡನೆ ಇರುತ್ತಾನೆ ಎಂದು **ಸ್ಮೃತಿ** (?) ಇದೆ. ಇಂದ್ರನ ಜ್ಞಾನದಮೂಲಕ ಅಗ್ನಿ, ವಾಯು, ಇಂದ್ರ-(?) ಈ ದೇವತೆಗಳು ಈ ಬ್ರಹ್ಮವನ್ನು ಅತ್ಯಂತ ಸಮೀಪವಾಗಿ ಬ್ರಹ್ಮವಿದ್ಯೆಯಿಂದ ಬ್ರಹ್ಮವನ್ನು ಪಡೆದು ಸ್ಪರ್ಶಿಸಿದರು, ಮುಟ್ಟಿದರು. ಅವರೇ ಮೊದಲನೆಯವರಾಗಿ ಮೊದಲು 'ವಿದಾಂಚಕಾರ' ಎಂದರೆ ತಿಳಿದುಕೊಂಡರು ಎಂದರ್ಥ. ಆದ್ದರಿಂದ ಅತಿತರಾಮ್ ಎಂದರೆ ಮಿಕ್ಕವರನ್ನು ಅತಿಕ್ರಮಿಸಿ, ಹೆಚ್ಚಾಗಿ ಬೆಳಗುತ್ತಿರುವರು. ಅದರಲ್ಲಿಯೂ

---

1. "ಸಾ ಬ್ರಹ್ಮೇತಿ" ಎಂದೂ ಕೆಲವು ಪುಸ್ತಕಗಳಲ್ಲಿದೆ.

ಇಂದ್ರನು ಮಿಕ್ಕ ದೇವತೆಗಳನ್ನು ಮೀರಿ ಅತಿಶಯವಾಗಿ ದೀಪ್ತಿವಂತನಾಗಿರುತ್ತಾನೆ. ಏಕೆಂದರೆ ಅವನೇ ಮೊದಲು ಬ್ರಹ್ಮವನ್ನು ತಿಳಿದುಕೊಂಡನು.

## ಬ್ರಹ್ಮದ ವಿಷಯದ ಉಪಾಸನೆಗಳು

### ತಸ್ಯೈಷ ಆದೇಶೋ.......ಇತ್ಯಧಿದೈವತಮ್ ॥ ೪ ॥

(ಭಾಷ್ಯ)

೧೫೩. ತಸ್ಯೈಷ ಆದೇಶಃ ತಸ್ಯ ಬ್ರಹ್ಮಣಃ ಏಷಃ ವಕ್ಷ್ಯಮಾಣಃ ಆದೇಶಃ ಉಪಾಸನೋಪದೇಶಇತ್ಯರ್ಥಃ । ಯಸ್ಮಾದ್ ದೇವೇಭ್ಯೋ ವಿದ್ಯುದಿವ ಸಹಸೈವ ಪ್ರಾದುರ್ಭೂತಂ ಬ್ರಹ್ಮದ್ಯುತಿಮತ್, ತಸ್ಮಾತ್ ವಿದ್ಯುತೋ ವಿದ್ಯೋತನಂ ಯಥಾ ಯದೇತದ್ ಬ್ರಹ್ಮವ್ಯದ್ಯುತತ್ ವಿದ್ಯೋತಿತವತ್ । ಆ ಇವ ಇತ್ಯುಪಮಾರ್ಥ ಆಶಬ್ದಃ । ಯಥಾ ಘನಾನ್ಧಕಾರಂ ವಿದಾರ್ಯ ವಿದ್ಯುತ್ ಸರ್ವತಃ ಪ್ರಕಾಶತೇ, ಏವಂ ತದ್ ಬ್ರಹ್ಮ ದೇವಾನಾಂ ಪುರತಃ ಸರ್ವತಃ ಪ್ರಕಾಶವದ್ ವ್ಯಕ್ತೀಭೂತಮ್ । ಅತೋ ವ್ಯದ್ಯುತದಿವ ಇತ್ಯುಪಾಸ್ಯಮ್, "ಯಥಾ ಸಕೃದ್ವಿದ್ಯುತ್ತಮ್" (ಬೃ. ೨-೩-೬) ಇತಿ ಚ ವಾಜಸನೇಯಕೇ । ಯಸ್ಮಾಚ್ಚೇನ್ದ್ರೋಪಸರ್ಪಣಕಾಲೇ ನ್ಯಮೀಮಿಷತ್ ನಿಮಿಷತವದಿವ ತಿರೋಭೂತಮ್ । ಯಥಾಕಶ್ಚಿಚ್ಚಕ್ಷುರ್ನಿಮೇಷಣಂ ಕೃತವಾ ಇತಿ । 'ಇತಿ' 'ಇತ್' ಇತ್ಯನರ್ಥಕೌ ನಿಪಾತೌ ।* ಇತಿ ಏವಮ್ ಅಧಿದೈವತಂ ದೇವತಾಯಾ ಅಧಿ ಯದ್ ದರ್ಶನಮ್ ಅಧಿದೈವತಂ ತತ್ ॥

(ಭಾಷ್ಯಾರ್ಥ)

"ತಸ್ಯೈಷ ಆದೇಶಃ" ಎಂಬಲ್ಲಿ ತಸ್ಯ ಎಂದರೆ ಆ ಬ್ರಹ್ಮಕ್ಕೆ ಏಷಃ ಎಂದರೆ ಮುಂದೆ ಹೇಳುವದು, ಆದೇಶಃ ಎಂದರೆ ಉಪಾಸನೆಯ ಉಪದೇಶವು ಎಂದರ್ಥ. ದೇವತೆಗಳಿಗೆ ಮಿಂಚಿನಂತೆ ತಟ್ಟನೆ ಪ್ರಕಾಶಮಯವಾದ ಬ್ರಹ್ಮವು ತೋರಿಕೊಂಡಿತಷ್ಟೆ; ಆ ಕಾರಣದಿಂದ ಈ ಬ್ರಹ್ಮವು ವ್ಯದ್ಯುತತ್ ಎಂದರೆ ಮಿಂಚಿತು[1] ಎಂಬುದು ಯಾವದುಂಟೋ ಅದು ಮಿಂಚಿನ ಮಿಂಚುವಿಕೆಯಂತೆ. ಆ ಎಂದರೆ ಅಂತೆ ಎಂಬ ಅರ್ಥದಲ್ಲಿ ಆ ಶಬ್ದವನ್ನುಪಯೋಗಿಸಿರುತ್ತದೆ. ದಟ್ಟವಾದ ಕತ್ತಲೆಯನ್ನು ಸೀಳಿಕೊಂಡು ಮಿಂಚು ಎಲ್ಲಾ ಕಡೆಯಲ್ಲಿಯೂ ಹೇಗೆ ಥಳಗುಟ್ಟುವದೋ ಅದರಂತೆ ಆ ಬ್ರಹ್ಮವು ದೇವತೆಗಳ ಮುಂದೆ ಎಲ್ಲಾ ಕಡೆಯಲ್ಲಿಯೂ ಥಳಗುಟ್ಟಿ ತೋರಿ

---

* ಈ ವಾಕ್ಯಗಳೆರಡೂ 'ನ್ಯಮೀಮಿಷತ್' ಎಂಬ ಮಾತಿನ ಮುಂದೆ ಮೂಲದಲ್ಲಿವೆ. ಆದರೂ ಇದ್ದರೆ ಇಲ್ಲಿಯೇ ಇರಬೇಕು.

1. ಪದಭಾಷ್ಯದಲ್ಲಿ ಈ ಅರ್ಥವು ಹೊಂದುವದಿಲ್ಲವೆಂದಿರುತ್ತದೆ.

ಕೊಂಡಿತು. ಆದ್ದರಿಂದ ಮಿಂಚಿತೋ ಎಂಬಂತೆ ಎಂದು (ಅದನ್ನು) ಉಪಾಸನೆ ಮಾಡಬೇಕು. "ಹೇಗೆ ಒಂದೇಸಲಕ್ಕೆ (ತಟ್ಟನೆ) ಮಿಂಚುವದೋ ಹಾಗೆ"[1] (ಬೃ. ೨-೩-೬) ಎಂದು **ವಾಜಸನೇಯಕ**ದಲ್ಲಿಯೂ ಹೇಳಿರುತ್ತದೆ. ಇಂದ್ರನು ಹತ್ತಿರಕ್ಕೆ ಬಂದಕಾಲದಲ್ಲಿ ನ್ಯಮೀಮಿಷತ್ ಕಣ್ಣುಮುಚ್ಚಿತೋ ಎಂಬಂತೆ ಮರೆಯಾಯಿತಷ್ಟೆ. (ಆದ್ದರಿಂದ "ಕಣ್ಣುಮುಚ್ಚಿತೋ ಎಂಬಂತೆ" ಎಂದು ಉಪಾಸನೆ ಮಾಡಬೇಕು). ಯಾವನಾದರೂ ಒಬ್ಬನು ಕಣ್ಣುಮುಚ್ಚಿದನು. ಕಣ್ಣು ಮುಚ್ಚಿದನು ಎಂಬುದು ಹೇಗೆ (ಬೇಗನೆ ಆಗುವದೋ ಹಾಗೆ).[2] ಇತಿ, ಇತ್-ಎಂಬ ಪಾಠಗಳಿಗೆ (ಹೆಚ್ಚಿಗೆ) ಅರ್ಥವಿಲ್ಲ. ಹೀಗೆ ಈ ರೀತಿಯಲ್ಲಿ ಅಧಿದೈವತವು, ದೇವತೆಯನ್ನು ಕುರಿತ ದರ್ಶನವುಂಟಲ್ಲ, ಅದೇ ಅಧಿದೈವತವು.[3]

**ಅಥಾಧ್ಯಾತ್ಮಂ........ಸಙ್ಕಲ್ಪಃ ॥ ೫ ॥**

(ಭಾಷ್ಯ)

೧೫೪. ಅಥ ಅನನ್ತರಮ್ ಅಧ್ಯಾತ್ಮಮ್ । ಆತ್ಮನಃ ಅಧಿ[4] ಆತ್ಮವಿಷಯಮ್ ಅಧ್ಯಾತ್ಮಮ್ । ಉಚ್ಯತೇ ಇತಿ ವಾಕ್ಯಶೇಷಃ । ಯದೇತತ್ ಯಥೋಕ್ತಲಕ್ಷಣಂ ಬ್ರಹ್ಮ ಗಚ್ಛತೀವ ಪ್ರಾಪ್ನೋತೀವ ವಿಷಯೀಕರೋತೀವ ಇತ್ಯರ್ಥಃ । ನ ಪುನರ್ವಿಷಯೀಕರೋತಿ ಮನಃ[4] । ಅವಿಷಯತ್ವಾದ್ ಬ್ರಹ್ಮಣಃ । ಅತೋ ಮನೋ ನ ಗಚ್ಛತಿ । "ಯೇನಾಹುರ್ಮನೋ ಮತಮ್" (೧-೫) ಇತಿ ಚೋಕ್ತಮ್ । "ಗಚ್ಛತೀವ" ಇತಿ ತು ಮನಸೋಽಪಿ ಮನಸ್ತ್ವಾತ್ । ಆತ್ಮಭೂತತ್ವಾಚ್ಚ ಬ್ರಹ್ಮಣಃ । ತತ್ಸಮೀಪೇ ಮನೋ ವರ್ತತ ಇತಿ ಉಪಸ್ಮರತಿ ಅನೇನ ಮನಸೈವ ತದ್ ಬ್ರಹ್ಮ ವಿದ್ವಾನ್ ಯಸ್ಮಾತ್, ತಸ್ಮಾದ್ ಬ್ರಹ್ಮ ಗಚ್ಛತೀವ ಇತ್ಯುಚ್ಯತೇ । ಅಭೀಕ್ಷ್ಣಂ ಪುನಃ ಪುನಶ್ಚ ಸಙ್ಕಲ್ಪಃ ಬ್ರಹ್ಮಪ್ರೇಷಿತಸ್ಯ ಮನಸಃ । ಅತ ಉಪಸ್ಮರಣಸಙ್ಕಲ್ಪಾದಿಭಿರ್ಲಿಙ್ಗೈಃ ಬ್ರಹ್ಮ ಮನಆದ್ಯಾತ್ಮಭೂತಮ್ ಇತ್ಯುಪಾಸ್ಯಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಇನ್ನು (ಅಧಿದೈವತವಾದ) ಬಳಿಕ ಅಧ್ಯಾತ್ಮವು ಆತ್ಮನಮೇಲೆ ಎಂದರೆ ಆತ್ಮನನ್ನು ಕುರಿತದ್ದು ಅಧ್ಯಾತ್ಮವು; (ಅದು) ಹೇಳಲ್ಪಡುವದು ಎಂದು ವಾಕ್ಯಕ್ಕೆ ಸೇರಿಸಿಕೊಳ್ಳಬೇಕು. ಯಾವ ಈ ಹಿಂದೆ ಹೇಳಿರುವ ಬ್ರಹ್ಮವನ್ನು ಪಡೆಯುವಂತೆ ಹೊಂದುವಂತೆ, ಎಂದರೆ ವಿಷಯೀಕರಿಸುವಂತೆ ಎಂದರ್ಥ. ಹಾಗಲ್ಲದೆ ಮನಸು

1. ಬೃ. ಭಾ. ದಲ್ಲಿ ಇದನ್ನು ಹಿರಣ್ಯಗರ್ಭನ ಅಭಿವ್ಯಕ್ತಿಗೆ ಹೋಲಿಕೆಯಾಗಿ ಕೊಟ್ಟಿದೆ.
2. ಪದಭಾಷ್ಯದಲ್ಲಿ ಕೊಟ್ಟಿರುವ ವಾಕ್ಯಾರ್ಥವನ್ನು ಹೋಲಿಸಿರಿ.
3. ಕಣ್ಣಿನ ದೃಷ್ಟಾಂತವು ಹೇಗೆ ಅಧಿದೈವತವೆಂಬುದನ್ನು ಎಲ್ಲಿಯೂ ವಿವರಿಸಿಲ್ಲ.
4. (ವಾ॥) ಪಾಠ.

(ನಿಜವಾಗಿ ಬ್ರಹ್ಮವನ್ನು) ವಿಷಯೀಕರಿಸುವದೆಂದೇ (ಹೇಳುವದಕ್ಕೆ ಬರುವದಿಲ್ಲ). ಆದ್ದರಿಂದ ಮನಸ್ಸು (ಅದನ್ನು) ಹೊಂದುವದಿಲ್ಲ. "ಯಾವದರಿಂದ ಮನಸ್ಸು ಮತವಾಗುವದು ಎಂದು ಹೇಳುವರೋ" (೧-೫) ಎಂದು ಹಿಂದೆಯೂ ಹೇಳಿರುತ್ತದೆ. "ಹೊಂದುವಂತೆ (ಇರುತ್ತದೆ)" ಎಂದು (ಇಲ್ಲಿ) ಹೇಳಿರುವದು (ಬ್ರಹ್ಮವು) ಮನಸ್ಸಿಗೂ ಮನಸ್ಸಾಗಿರುವದರಿಂದ ಅದರ ಸಮೀಪದಲ್ಲಿ ಮನಸ್ಸು ಇರುವದರಿಂದ ಈ ಮನಸ್ಸಿನಿಂದಲೇ ಜ್ಞಾನಿಯು ಆ ಬ್ರಹ್ಮವನ್ನು ನೆನಪಿಗೆ ತಂದುಕೊಳ್ಳುತ್ತಿರುತ್ತಾನಷ್ಟೆ; ಆದ್ದರಿಂದ (ಮನಸ್ಸು) ಬ್ರಹ್ಮವನ್ನು "ಹೊಂದುವಂತೆ (ಇರುತ್ತದೆ)" ಎಂದು ಹೇಳಿರುತ್ತದೆ. ಅಭೀಕ್ಷ್ಣವಾಗಿ ಎಂದರೆ ಮತ್ತೆಮತ್ತೆ ಬ್ರಹ್ಮದಿಂದ ಪ್ರೇಷಿತವಾದ ಮನಸ್ಸು ಸಂಕಲ್ಪವನ್ನೂ ಮಾಡುತ್ತಿರುತ್ತದೆ. ಆದ್ದರಿಂದ ಉಪಸ್ಮರಣ, ಸಂಕಲ್ಪ-ಮುಂತಾದ ಗುರುತುಗಳಿಂದ ಮನಸ್ಸೇ ಮುಂತಾದವುಗಳ ಆತ್ಮವಾಗಿರುವದು[1] ಬ್ರಹ್ಮವು ಎಂದು ಉಪಾಸನೆಮಾಡಬೇಕು ಎಂದು ಅಭಿಪ್ರಾಯ.

**ತದ್ಧ ತದ್ವನಂ ನಾಮ　　ಸಂವಾಞ್ಛನ್ತಿ ॥ ೬ ॥**

(ಭಾಷ್ಯ)

೧೫೫. ತಸ್ಯ ಚಾಧ್ಯಾತ್ಮಮ್ ಉಪಾಸನೇ ಗುಣೋ ವಿಧೀಯತೇ–ತದ್ಧ ತದ್ವನಮ್ ತದೇತದ್ ಬ್ರಹ್ಮ ತಚ್ಚ ತದ್ ವನಂ ಚ ತತ್ ಪರೋಕ್ಷಂ ವನಂ ಸಮ್ಭಜನೀಯಮ್ । ವನತೇಸ್ತತ್ಕರ್ಮಣಃ । ತಸ್ಮಾತ್ ತದ್ವನಂ ನಾಮ । ಬ್ರಹ್ಮಣೋ ಗೌಣಂ ಹೀದಂ ನಾಮ । ತಸ್ಮಾತ್, ಅನೇನ ಗುಣೇನ ತದ್ವನಮ್ ಇತಿ ಉಪಾಸಿತವ್ಯಮ್ । ಸ ಯಃ ಕಶ್ಚಿತ್ ಏತದ್ ಯಥೋಕ್ತಮ್ ಏವಂ ಯಥೋಕ್ತೇನ ಗುಣೇನ "ವನಮ್" ಇತ್ಯನೇನ ನಾಮ್ನಾ ಅಭಿಧೇಯಂ ಬ್ರಹ್ಮ ವೇದ ಉಪಾಸ್ತೇ । ತಸ್ಯ ಏತತ್ಫಲಮ್ ಉಚ್ಯತೇ । ಸರ್ವಾಣಿ ಭೂತಾನಿ ಏನಮ್ ಉಪಾಸಕಮ್ ಅಭಿಸಂವಾಞ್ಛನ್ತಿ । ಇಹಾಭಿಸಮ್ಭಜನ್ತೇ ಸೇವನ್ತೇ ಸ್ಮೇತ್ಯರ್ಥಃ । ಯಥಾ ಗುಣೋಪಾಸನಂ ಹಿ ಫಲಮ್ ॥

(ಭಾಷ್ಯಾರ್ಥ)

ಆ ಬ್ರಹ್ಮವನ್ನು ಅಧ್ಯಾತ್ಮವಾಗಿ ಉಪಾಸನೆಮಾಡುವದಕ್ಕಾಗಿ (ಬ್ರಹ್ಮಕ್ಕೆ) ಗುಣವನ್ನು ವಿಧಿಸಲಾಗುತ್ತದೆ. 'ತದ್ಧ ತದ್ವನಮ್' ಎಂದರೆ ಆ ಈ ಬ್ರಹ್ಮವು(ತದ್ವನವು) ಅದೂ ವನವೂ ಆಗಿದೆ; ಅದು ಎಂದರೆ ಪರೋಕ್ಷವು, ವನವೆಂದರೆ ಚೆನ್ನಾಗಿ ಭಜಿಸುವದಕ್ಕೆ ತಕ್ಕದ್ದು. (ಸಂಭಜನೆ ಎಂಬ) ಆ ಅರ್ಥವನ್ನು ಹೇಳುವ ವನ ಧಾತುವಿ

---

1. "ಮನೋಽಧ್ಯಾತ್ಮಭೂತಮ್" ಎಂಬ (ಆ॥) ಪಾಠಕ್ಕೆ ಮನಸ್ಸೆಂದು ಅಧ್ಯಾತ್ಮವಾಗಿ ಉಪಾಸನೆಮಾಡಬೇಕು ಎಂಬರ್ಥವಾಗುತ್ತದೆ. ನಾವು ಕೊಟ್ಟಿರುವ (ವಾ॥) ಪಾಠವೇ ಮೇಲು.

ನಿಂದ (ಈ ಶಬ್ದರೂಪವು ಹುಟ್ಟಿರುತ್ತದೆ). ಆದ್ದರಿಂದ "ತದ್ವನಂ ನಾಮ" ಬ್ರಹ್ಮಕ್ಕೆ ಈ (ತದ್ವನವೆಂಬ) ನಾಮವು ಗುಣಕ್ಕೆ ಸಂಬಂಧಪಟ್ಟದ್ದು. ಆದ್ದರಿಂದ ಈ ಗುಣದಿಂದ (ಬ್ರಹ್ಮವನ್ನು) 'ತದ್ವನವು' ಎಂದು ಉಪಾಸನೆಮಾಡಬೇಕು. ಯಾವನೇ ಆಗಲಿ ಈ ಮೇಲೆ ಹೇಳಿದ (ಬ್ರಹ್ಮವನ್ನು) ಹೀಗೆ ಎಂದರೆ ಮೇಲೆ ಹೇಳಿದ ಗುಣ ದಿಂದ ಎಂದರೆ 'ವನ' ವೆಂಬ ಈ ಹೆಸರಿನಿಂದ ಕರೆಯುವದಕ್ಕೆ ಯೋಗ್ಯವಾದದ್ದು ಬ್ರಹ್ಮವು ಎಂದು ತಿಳಿಯುತ್ತಾನೋ ಎಂದರೆ ಉಪಾಸನೆಮಾಡುತ್ತಾನೋ ಅವನಿಗೆ ಈ ಫಲವನ್ನು ಹೇಳಲಾಗುತ್ತದೆ. ಸರ್ವ ಭೂತಗಳೂ ಈ ಉಪಾಸಕನನ್ನು ಅಭಿ ಸಂವಾಞ್ಛನ್ತಿ ಎಂದರೆ ಇಲ್ಲಿ ಅಭಿಪ್ರಾಯಪೂರ್ವಕವಾಗಿ ಚೆನ್ನಾಗಿ ಭಜಿಸುತ್ತವೆ, ಸೇವಿಸುತ್ತವೆ ಎಂದರ್ಥ ಏಕೆಂದರೆ ಯಾವ ಗುಣದಿಂದ ಉಪಾಸನೆಮಾಡುವರೋ ಅದಕ್ಕೆ ತಕ್ಕಂತೆ ಫಲವಾಗುತ್ತದೆ.

## ಬ್ರಾಹ್ಮೀ ಉಪನಿಷತ್

**ಉಪನಿಷದಂ ಭೋ.. ....ಉಪನಿಷದಮಬ್ರೂಮೇತಿ ॥ ೭ ॥**

(ಭಾಷ್ಯ)

೧೫೬ "ಉಪನಿಷದಂ ಭೋ ಬ್ರೂಹಿ" ಇತ್ಯುಕ್ತಾಯಾಮುಪ್ಯುಪನಿಷದಿ ಶಿಷ್ಯೇಣೋಕ್ತ ಆಚಾರ್ಯ ಆಹ । "ಉಕ್ತಾ ಕಥಿತಾ ತೇ ತುಭ್ಯಮ್ ಉಪನಿಷದ್ ಆತ್ಮೋಪಾಸನಮ್, ಅಧುನಾ ಬ್ರಾಹ್ಮೀಂ ವಾವ ತೇ ತುಭ್ಯಂ ಬ್ರಹ್ಮಣೋ ಬ್ರಾಹ್ಮಣ ಜಾತೇಃ ಉಪನಿಷದಮ್ ಅಬ್ರೂಮ ವಕ್ಷ್ಯಾಮ ಇತ್ಯರ್ಥಃ । ವಕ್ಷ್ಯತಿ ಹಿ । ಬ್ರಾಹ್ಮೀ ನೋಕ್ತಾ, ಉಕ್ತಾ ತ್ವಾತ್ಮೋಪನಿಷತ್ । ತಸ್ಮಾನ್ನ ಭೂತಾಭಿಪ್ರಾಯಃ "ಅಬ್ರೂಮ" ಇತ್ಯಯಂ ಶಬ್ದಃ ॥

**(ಭಾಷ್ಯಾರ್ಥ)**

"ಪೂಜ್ಯರೆ, ಉಪನಿಷತ್ತನ್ನು ಹೇಳಿರಿ" ಎಂದು ಹಿಂದೆ ಉಪನಿಷತ್ತನ್ನು ಹೇಳಿ ದ್ದರೂ ಶಿಷ್ಯನು (ಮತ್ತೆ) ಕೇಳಿದ್ದನ್ನು (ಕಂಡು) ಆಚಾರ್ಯನು ಹೇಳುತ್ತಿದ್ದಾನೆ: "ನಿನಗೆ ಉಪನಿಷತ್ತನ್ನು ಎಂದರೆ ಆತ್ಮನ ಉಪಾಸನೆಯನ್ನು ಹೇಳಿದ್ದಾಯಿತು. ಈಗ ಬ್ರಾಹ್ಮೀ ಉಪನಿಷತ್ತನ್ನು ಎಂದರೆ ಬ್ರಾಹ್ಮಣಜಾತಿಯ ಉಪನಿಷತ್ತನ್ನು ನಿನಗೆ, ನಿನಗೋಸ್ಕರ, "ಅಬ್ರೂಮ" ಎಂದರೆ ಹೇಳುವೆವು ಎಂದರ್ಥ. ಏಕೆಂದರೆ (ಇದನ್ನು) ಮುಂದೆ ಹೇಳುತ್ತಾರೆ. ಹಿಂದೆ ಬ್ರಾಹ್ಮೀ ಉಪನಿಷತ್ತನ್ನು ಹೇಳಿಲ್ಲ, ಆದರೆ ಆತ್ಮೋಪ ನಿಷತ್ತನ್ನು ಹೇಳಿರುತ್ತದೆ ಆದ್ದರಿಂದ "ಅಬ್ರೂಮ" ಎಂಬ ಈ ಮಾತು ಭೂತ ಕಾಲವನ್ನು ಹೇಳುವ ಅಭಿಪ್ರಾಯದಿಂದ ಬಂದದ್ದಲ್ಲ.[1]

---

1 ಈ ವ್ಯಾಖ್ಯಾನವು ಪದಭಾಷ್ಯಕ್ಕೆ ವಿರುದ್ಧವಾಗಿರುತ್ತದೆ. ಅಲ್ಲಿ ಮಾಡಿರುವ ಚರ್ಚೆಯನ್ನು ಇದಕ್ಕೆ ಹೋಲಿಸಿರಿ. ಬ್ರಾಹ್ಮಣಜಾತಿಯ ಉಪನಿಷತ್ತೆಂದರೆ ಅವರು ಮಾಡ ಬೇಕಾದ ಆತ್ಮಜ್ಞಾನಸಾಧನವೆಂದು ಟೀಕೆಯಲ್ಲಿ ಅರ್ಥವನ್ನು ಮಾಡಿದೆ.

**ತಸ್ಯೈ....... ಸತ್ಯಮಾಯತನಮ್ ॥ ೮ ॥**

(ಭಾಷ್ಯ)

೧೫೭. ತಸ್ಯಾ ವಕ್ಷ್ಯಮಾಣಾಯಾ ಉಪನಿಷದಃ ತಪೋ ಬ್ರಹ್ಮಚರ್ಯಾದಿ ದಮಃ ಉಪಶಮಃ ಕರ್ಮ ಅಗ್ನಿಹೋತ್ರಾದಿ ಇತ್ಯೇತಾನಿ ಪ್ರತಿಷ್ಠಾ ಆಶ್ರಯಃ । ಏತೇಷು ಹಿ ಸತ್ಸು ಬ್ರಾಹ್ಮ್ಯುಪನಿಷತ್ ಪ್ರತಿಷ್ಠಿತಾ ಭವತಿ । ವೇದಾಃ ಚತ್ವಾರಃ ಅಙ್ಗಾನಿ ಚ ಸರ್ವಾಣಿ । ಪ್ರತಿಷ್ಠಾ ಇತ್ಯನುವರ್ತತೇ । ಬ್ರಹ್ಮಾಶ್ರಯಾ ಹಿ ವಿದ್ಯಾ । ಸತ್ಯಂ ಯಥಾಭೂತವಚನಮ್ ಅಪೀಡಾಕರಮ್ ಆಯತನಂ ನಿವಾಸಃ । ಸತ್ಯವತ್ಸು ಹಿ ಸರ್ವಂ ಯಥೋಕ್ತಮ್ ಆಯತನೇ ಇವಾವಸ್ಥಿತಮ್ ॥

(ಭಾಷ್ಯಾರ್ಥ)

ಆ ಮುಂದೆ ಹೇಳುವ ಉಪನಿಷತ್ತಿಗೆ ತಪಸ್ಸು ಎಂದರೆ ಬ್ರಹ್ಮಚರ್ಯವೇ ಮುಂತಾದದ್ದು, ದಮ ಎಂದರೆ ಉಪಶಮವು, ಕರ್ಮವು ಎಂದರೆ ಅಗ್ನಿಹೋತ್ರವೇ ಮುಂತಾದದ್ದು-ಇವುಗಳು ಪ್ರತಿಷ್ಠೆಯು, ಎಂದರೆ ಆಶ್ರಯವು ಇವುಗಳು ಇದ್ದರೇ ಅಲ್ಲವೆ, ಬ್ರಾಹ್ಮೀ ಉಪನಿಷತ್ತು ನಿಂತಿರುವದು? ವೇದಗಳು ನಾಲ್ಕು, ಎಲ್ಲಾ ಅಂಗಗಳೂ 'ಪ್ರತಿಷ್ಠೆ' ಎಂಬ ಮಾತನ್ನು ಇಲ್ಲಿಯೂ ಸೇರಿಸಿಕೊಳ್ಳಬೇಕು. ಏಕೆಂದರೆ ವಿದ್ಯೆಯು ಬ್ರಹ್ಮವನ್ನು ಆಶ್ರಯಿಸಿರುತ್ತದೆ[1]. ಸತ್ಯವೆಂದರೆ ಇರುವದನ್ನು ಮತ್ತೊಬ್ಬರಿಗೆ ತೊಂದರೆಯಾಗದಂತೆ ಹೇಳುವ ಮಾತು, ಆಯತನವು ಎಂದರೆ ನಿವಾಸವು. ಏಕೆಂದರೆ ಸತ್ಯವಂತರಲ್ಲಿಯೇ ಮೇಲೆ ಹೇಳಿದ್ದೆಲ್ಲವೂ ಆಯತನದಲ್ಲಿರುವಂತೆ ಇದ್ದುಕೊಂಡಿರುತ್ತದೆ.

## ಉಪನಿಷತ್ತಿನ ಫಲ

**ಯೋ ವಾ ಏತಾಮೇವಂ... .. ಪ್ರತಿಷ್ಠತಿ ಪ್ರತಿತಿಷ್ಠತಿ ॥ ೯ ॥**

(ಭಾಷ್ಯ)

೧೫೮. ತಾಮ್ ಏತಾಂ ತಪಆದ್ಯಙ್ಗಾಂ ತತ್ಪ್ರತಿಷ್ಠಾಂ ಬ್ರಾಹ್ಮೀಮುಪನಿಷದಂ ಸಾಯತನಾಮ್ ಆತ್ಮಜ್ಞಾನಹೇತುಭೂತಾಮ್ ಏವಂ ಯಥಾವದ್ ಯೋ ವೇದ ಅನುವರ್ತತೇ ಅನುತಿಷ್ಠತಿ, ತಸ್ಯ ಏತತ್ಫಲಮ್ ಆಹ-ಅಪಹತ್ಯ ಪಾಪ್ಮಾನಮ್ ಅಪಕ್ಷೀಯ ಧರ್ಮಾಧರ್ಮೌ ಇತ್ಯರ್ಥಃ । ಅನನ್ತೇಽಪಾರೇ ಅವಿದ್ಯಮಾನಾನ್ತೇ ಸ್ವರ್ಗೇ ಲೋಕೇ ಸುಖಪ್ರಾಯೇ ನಿರ್ದುಃಖಾತ್ಮನಿ ಪರೇ ಬ್ರಹ್ಮಣಿ ಜ್ಯೇಯೇ ಮಹತಿ ಸರ್ವಮಹತ್ತರೇ ಪ್ರತಿತಿಷ್ಠತಿ । ಸರ್ವವೇದಾನ್ತವೇದ್ಯಂ ಬ್ರಹ್ಮ ಆತ್ಮತ್ವೇನಾವಗಮ್ಯ ತದೇವ ಬ್ರಹ್ಮ ಪ್ರತಿಪದ್ಯತೇ ಇತ್ಯರ್ಥಃ ॥

---

1. ಈ ವಾಕ್ಯವು ಇಲ್ಲಿ ಏಕೆ ಬಂದಿರುವದೋ ತಿಳಿಯದು.

(ಭಾಷ್ಯಾರ್ಥ)

ತಪಸ್ಸೇ ಮುಂತಾದವುಗಳೆಂಬ ಅಂಗವುಳ್ಳ, ಅದನ್ನೇ ಆಶ್ರಯವಾಗಿ ಉಳ್ಳ ಆತ್ಮಜ್ಞಾನಕ್ಕೆ ಕಾರಣವಾಗಿದ್ದುಕೊಂಡಿರುವ ಅಂಥ ಈ ಬ್ರಾಹ್ಮೀ ಉಪನಿಷತ್ತನ್ನು ಯಾವನು ತಿಳಿದುಕೊಳ್ಳುತ್ತಾನೋ, ಅಂದರೆ ಅನುಸರಿಸುತ್ತಾನೋ, ಅನುಷ್ಠಾನ ಮಾಡುತ್ತಾನೋ, ಅವನಿಗೆ ಈ ಫಲವನ್ನು (ಮಂತ್ರವು) ಹೇಳುತ್ತದೆ: ಪಾಪವನ್ನು ಹೊಡೆದುಹಾಕಿ ಎಂದರೆ ಧರ್ಮಾಧರ್ಮಗಳನ್ನು ಸವೆಯಿಸಿಕೊಂಡು ಎಂದರ್ಥ. ಅನಂತವಾದ ಪಾರವಿಲ್ಲದ ಕೊನೆಯಿಲ್ಲದ ಸ್ವರ್ಗಲೋಕದಲ್ಲಿ ಎಂದರೆ ಆನಂದಮಯವಾಗಿರುವ ದುಃಖರಹಿತವಾದ ಪರಬ್ರಹ್ಮದಲ್ಲಿ ಹಿರಿಯದಾದ ದೊಡ್ಡ (ಸ್ವರ್ಗಲೋಕದಲ್ಲಿ ಎಂದರೆ) ಎಲ್ಲಕ್ಕಿಂತಲೂ ದೊಡ್ಡದಾಗಿರುವ (ಬ್ರಹ್ಮದಲ್ಲಿ) ನೆಲೆನಿಲ್ಲುವನು. ಸಕಲ ವೇದಾಂತಗಳಿಂದಲೂ ತಿಳಿಯುವ ವಿಷಯವಾದ ಬ್ರಹ್ಮವನ್ನು (ತನ್ನ) ಆತ್ಮನೆಂದು ತಿಳಿದುಕೊಂಡು ಅದೇ ಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ ಎಂದರ್ಥ.



# ಉಪನಿಷತ್ತಿನ ಸಾರ

## ಒಂದನೆಯ ಖಂಡ

೧-೨ ನಮ್ಮ ಮನಸ್ಸೂ ಇಂದ್ರಿಯಗಳೂ ತಾವುತಾವೇ ತಮ್ಮ ವಿಷಯಗಳನ್ನು ಅರಿಯುವದಿಲ್ಲ, ತಾವುತಾವೇ ತಮ್ಮ ವ್ಯಾಪಾರವನ್ನು ಮಾಡುವದಿಲ್ಲ. ತಮ್ಮ ಜೀವಾಳವಾಗಿರುವ ಆತ್ಮಚೈತನ್ಯದ ಸನ್ನಿಧಿಯ ಬಲದಿಂದಲೇ ಇವು ಕೆಲಸಮಾಡುತ್ತಿರುತ್ತವೆ. ಇವುಗಳಲ್ಲಿ ನಾನು ನನ್ನದೆಂಬ ಭಾವನೆಯನ್ನು ತೊರೆದ ಧೀರರು ಅಮೃತರಾಗುತ್ತಾರೆ.

೩-೮. ಆತ್ಮತತ್ತ್ವವನ್ನು ಇಂದ್ರಿಯಗಳಾಗಲಿ ಮನಸ್ಸಾಗಲಿ ವಿಷಯೀಕರಿಸಲಾರವು. ಆದ್ದರಿಂದ ಅದನ್ನು ಇಂಥದ್ದೆಂದು ವಿಷಯವಾಗಿಸಿಕೊಂಡು ಅರಿಯುವದಕ್ಕೆ ಆಗುವದಿಲ್ಲ; ಮತ್ತೊಬ್ಬರಿಗೆ ಇಂಥದ್ದೆಂದು ತಿಳಿಸುವದಕ್ಕೂ ಆಗುವದಿಲ್ಲ. ಅದು ಅರಿಯಲ್ಪಡತಕ್ಕದ್ದು, ಅರಿಯಲ್ಪಡಲಾಗದ್ದು—ಎಂದು ಎರಡು ಬಗೆಯಾಗಿರುವ ವಿಷಯರಾಶಿಗಿಂತಲೂ ಬೇರೆಯಾಗಿಯೇ ಇರುವದು. ಯಾವದನ್ನು ಇಂದ್ರಿಯಮನಆದಿಗಳು ಅರಿಯಲಾರವೋ ಯಾವದು ಅವುಗಳನ್ನೆಲ್ಲ ತನ್ನ ಸ್ವಭಾವವಾದ ಅರಿವಿನಿಂದ ಬೆಳಗುತ್ತಿರುವದೋ ಆ ನಮ್ಮ ಆತ್ಮನೇ ಅದು ಎಂದು ಮಾತ್ರ ಅದನ್ನು ತಿಳಿದುಕೊಳ್ಳಬಹುದು, ಇದು ಎಂದು ವಿಷಯೀಕರಿಸಬಹುದಾದದ್ದು ಯಾವದೂ ಅದಲ್ಲ. ಇಂಥ ಆತ್ಮತತ್ತ್ವವೇ ಬ್ರಹ್ಮವೆಂದು ವೇದಾಂತಿಗಳು ಹೇಳುವರು.

## ಎರಡನೆಯ ಖಂಡ

೧-೪. ಬ್ರಹ್ಮವು ಜ್ಞಾನಕ್ಕೆ ವಿಷಯವಲ್ಲವಾದಕಾರಣ ಯಾರು ಇದನ್ನು ಇಂಥದ್ದೆಂದು ಅರಿತುಕೊಂಡೆವೆಂದು ಭಾವಿಸುವರೋ ಅವರು ಇದರ ಪರಮಾರ್ಥವನ್ನು ಅರಿಯರು. ಅದು ಯಾವದಕ್ಕೂ ವಿಷಯವಲ್ಲವೆಂದು ನಿಶ್ಚಯಿಸಿರುವವರೇ ಇದರ ನಿಜವನ್ನು ಬಲ್ಲರು. ಬ್ರಹ್ಮದ ಸ್ವರೂಪವು ನಮಗೆ ಹೇಗೂ ತಿಳಿಯಬರುವದೇ ಇಲ್ಲವೆಂದು ಎಣಿಸಬಾರದು. ಏಕೆಂದರೆ ಮನಸ್ಸಿನಲ್ಲಿ ಯಾವ ಯಾವ ಪ್ರತ್ಯಯವುಂಟಾದರೂ ಅದನ್ನು ಬೆಳಗುತ್ತಿರುವ ಸ್ವಯಂಪ್ರಕಾಶವಾದ ಆತ್ಮಚೈತನ್ಯರೂಪಸಾಕ್ಷಿಯಾಗಿ ಅದು ನಮಗೆ ತಿಳಿದುಬರುತ್ತಲೇ ಇರುವದು. ಹೀಗೆಂದು ಅರಿತವನಿಗೆ ಆತ್ಮನ ಸ್ವಭಾವವಾದ ಬಲವು ದಕ್ಕುವದು, ಈ ತಿಳಿವಳಿಕೆಯಿಂದ ಅಮೃತತ್ವವೂ ದೊರಕುವದು.

೫. ಮೇಲೆ ಹೇಳಿದ ರೀತಿಯಲ್ಲಿ ಬದುಕಿರುವಾಗಲೇ ಅರಿತುಕೊಂಡರೆ ಪರಮಾರ್ಥಸತ್ಯವು ಲಾಭವಾಗಿ ಜನ್ಮವು ಸಾರ್ಥಕವಾಗುವದು. ಇಲ್ಲದಿದ್ದರೆ ಸಂಸಾರದಲ್ಲಿ ತಪ್ಪದೆ ತೊಳಲಬೇಕಾಗುವದರಿಂದ ಜನ್ಮವು ವ್ಯರ್ಥವಾಗಿ ದೊಡ್ಡ ನಷ್ಟವಾದಂತೆ ಆಗುವದು. ಆದ್ದರಿಂದ ಜಾಣರಾದವರು ಸರ್ವ ಪ್ರಾಣಿಗಳಿಗೂ ಆತ್ಮನಾಗಿರುವ ಈ ಬ್ರಹ್ಮವನ್ನು ಕಂಡುಕೊಂಡು ಈ ಅವಿದ್ಯಾಮಯವಾದ ಸಂಸಾರವನ್ನು ದಾಟಿ ಅಮೃತರಾಗಬೇಕು.

## ಮೂರನೆಯ ಖಂಡ

೧. ಹಿಂದಕ್ಕೆ ದೇವತೆಗಳಿಗೂ ಅಸುರರಿಗೂ ಸಂಗ್ರಾಮವಾಗಲು ಬ್ರಹ್ಮವು ದೇವತೆಗಳಿಗೆ ಜಯವನ್ನು ತಂದುಕೊಟ್ಟಿತು. ಆದರೆ ದೇವತೆಗಳು ತಾವೇ ತಮ್ಮ ಶಕ್ತಿಯಿಂದಲೇ ಜಯಿಸಿ ತಮ್ಮ ತಮ್ಮ ಮಹಿಮೆಯನ್ನು ಪಡೆದುಕೊಂಡೆವೆಂದು ಭಾವಿಸಿಕೊಂಡರು.

೨. ಇವರ ಮಿಥ್ಯಾಭಿಮಾನವನ್ನರಿತುಕೊಂಡ ಬ್ರಹ್ಮವು ಒಂದು ಅದ್ಭುತವಾದ ಯ ರೂಪವನ್ನು ಧರಿಸಿ ಅವರಿಗೆ ಕಾಣಿಸಿಕೊಂಡಿತು. ಅವರಿಗೆ ಯಾರಿಗೂ ಆ ರೂಪದ ನಿಜವು ತಿಳಿಯದೆಹೋಯಿತು.

೩-೬. ಆಗ ದೇವತೆಗಳು ಆದದ್ದೆಲ್ಲವನ್ನೂ ತಿಳಿಯಬಲ್ಲವನೆಂದು ಪ್ರಸಿದ್ಧನಾದ ಅಗ್ನಿಯನ್ನು ಈ ಯಕ್ಷನು ಯಾರೆಂಬುದನ್ನು ತಿಳಿದುಕೊಂಡು ಬಾರೆಂದು ಕಳುಹಿಸಿದರು. ಬ್ರಹ್ಮವು "ನೀನು ಯಾರು?" ಎಂದು ಕೇಳಲು "ಲೋಕದಲ್ಲಿರುವದನ್ನೆಲ್ಲ ಸುಡುವ ಅಗ್ನಿಯು ನಾನು, ಜಾತವೇದನು ನಾನು" ಎಂದು ಅಗ್ನಿಯು ಉತ್ತರವನ್ನು ಕೊಟ್ಟನು. "ಹಾಗಾದರೆ ಇದನ್ನು ಸುಡು" ಎಂದು ಒಂದು ಹುಲ್ಲುಕಡ್ಡಿಯನ್ನು ಬ್ರಹ್ಮವು ಅವನ ಮುಂದಿಡಲು ಅಗ್ನಿಯಿಂದ ಅದನ್ನು ಸುಡುವದು ಆಗಲಿಲ್ಲ, ಆದ್ದರಿಂದ ಅವನು ನಾಚಿಕೊಂಡು ಯಕ್ಷನ ನಿಜವನರಿಯಲಾರದೆ ಹಿಂದಿರುಗಿದನು.

೭-೧೦. ಆಮೇಲೆ ದೇವತೆಗಳು ವಾಯುವನ್ನು ಕಳುಹಿಸಿದರು. ಅವನಿಗೂ ಬ್ರಹ್ಮಕ್ಕೂ ಮೇಲಿನಂತೆಯೇ ಸಂಭಾಷಣೆಯು ನಡೆಯಿತು ಪೃಥ್ವಿಯಲ್ಲಿರುವದನ್ನೆಲ್ಲ ಎತ್ತಬಲ್ಲೆನೆಂದು ಕೊಚ್ಚಿಕೊಂಡ ವಾಯುವಿನಿಂದ ಆ ಹುಲ್ಲುಕಡ್ಡಿಯನ್ನು ಎತ್ತುವದಾಗಲಿಲ್ಲ ವಾಯುವೂ ಯಕ್ಷನ ನಿಜವನ್ನರಿಯಲಾರದೆ ಹಿಂದಿರುಗಿದನು.

೧೧-೧೨. ಆಮೇಲೆ ದೇವತೆಗಳು ಇಂದ್ರನನ್ನು ಕಳುಹಿಸಿದರು. ಬ್ರಹ್ಮವು ಅವನಿಗೆ ದರ್ಶನವನ್ನು ಕೂಡ ಕೊಡದೆ ಅಲ್ಲಿಯೇ ಮಾಯವಾಯಿತು ಇಂದ್ರನು ಅಲ್ಲಿಯೇ ನಿಂತಿರಲು ಬ್ರಹ್ಮವಿದ್ಯಾದೇವಿಯು ಅವನಿಗೆ ಸುಂದರಿಯಾದ ಸ್ತ್ರೀಯ ರೂಪದಿಂದ ದರ್ಶನವನ್ನು ಕೊಟ್ಟಳು. ಆಕೆಯನ್ನು "ಈ ರೂಪದ ನಿಜವೇನು?" ಎಂದು ಇಂದ್ರನು ಕೇಳಿದನು.

## ನಾಲ್ಕನೆಯ ಖಂಡ

೧. ಆಕೆಯು "ಇದು ಬ್ರಹ್ಮವು. ಈ ಬ್ರಹ್ಮವು ಜಯವನ್ನು ತಂದುಕೊಟ್ಟದ್ದರಿಂದಲೇ ನೀವು ಮಹಿಮಾವಂತರಾಗಿರುವಿರಿ" ಎಂದಳು. ಆಗ ಆಕೆಯ ಉಪದೇಶದಿಂದಲೇ ಇಂದ್ರನಿಗೆ ಇದು ಬ್ರಹ್ಮವು ಎಂಬ ಅರಿವಾಯಿತು.

೨-೩. ಹೀಗೆ ಅಗ್ನಿ, ವಾಯು, ಇಂದ್ರ—ಈ ಮೂವರೂ ಬ್ರಹ್ಮವನ್ನು ಕಂಡು ಮಾತನಾಡಿದವರಾದ್ದರಿಂದ ಮಿಕ್ಕ ದೇವತೆಗಳಿಗಿಂತ ಹೆಚ್ಚಿನವರಾದರು. ಅವರಲ್ಲಿಯೂ ಇಂದ್ರನು ಮೊಟ್ಟಮೊದಲು ಇದು ಬ್ರಹ್ಮವು ಎಂದು ತಿಳಿದುಕೊಂಡವನಾದಕಾರಣ ದೇವತೆಗಳಲ್ಲೆಲ್ಲ ಶ್ರೇಷ್ಠನೆನಿಸಿದನು.

೪-೫. ಆ ಬ್ರಹ್ಮಕ್ಕೆ ಉಪಮಾನವನ್ನು ಕೊಡಬೇಕಾದರೆ ಮಿಂಚು ಥಳಾರೆಂದು ಹೊಳೆದು ಮರೆಯಾಗುವಂತೆ, ಕಣ್ಣು ತೆರೆದು ತಟ್ಟನೆ ಮುಚ್ಚಿಕೊಳ್ಳುವಂತೆ ಎಂಬ ಅಧಿದೈವತ್ವ

ವಾದ ಹೋಲಿಕೆಗಳನ್ನೂ ಮನಸ್ಸಿನ ಪ್ರತ್ಯಯಗಳು ಹುಟ್ಟಿಹೋಗುವಾಗಲೆಲ್ಲ ಅಭಿವ್ಯಕ್ತವಾಗುವ ರೂಪವೆಂದು ಆಧ್ಯಾತ್ಮವಾದ ಹೋಲಿಕೆಯನ್ನೂ ಕೊಟ್ಟು ವರ್ಣಿಸಬಹುದು.

೬. ಅದು ಎಲ್ಲರಿಗೂ ಆತ್ಮಸ್ವರೂಪವಾಗಿರುವವರಿಂದ ಅದನ್ನು ಎಲ್ಲರೂ ಪ್ರೀತಿಯಿಂದ ಭಜಿಸುವರು; ಆದ್ದರಿಂದ ಅದನ್ನು "ತದ್ವನಮ್" (ಪ್ರಾಣಿಗಳಿಗೆಲ್ಲ ಪ್ರಿಯವಾಗಿರುವದು) ಎಂಬ ಹೆಸರಿನಿಂದ ಉಪಾಸನೆ ಮಾಡಬೇಕು

೭. ಪರಮಾತ್ಮನ ಉಪನಿಷತ್ತು ಇಷ್ಟೇ, ಇದಕ್ಕಿಂತ ಹೆಚ್ಚಿನದೇನೂ ಇರುವದಿಲ್ಲ. ಇದನ್ನು ಪಡೆದುಕೊಳ್ಳುವದಕ್ಕೆ ತಪಸ್ಸು, ದಮ, ಕರ್ಮ, ವೇದವೇದಾಂಗಗಳ ಜ್ಞಾನ–ಇವೆಲ್ಲವೂ ಬೇಕಾಗುವ ಸಾಧನಗಳು. ವಿಶೇಷವಾಗಿ ಸತ್ಯವೆಂಬ ಸಾಧನವು ಅವಶ್ಯವಾಗಿ ಬೇಕಾಗುವದು.

೮. ಇಲ್ಲಿ ವರ್ಣಿಸಿರುವ ಪ್ರಕಾರದಿಂದ ಬ್ರಹ್ಮವನ್ನು ಅರಿತುಕೊಂಡಾತನು ಸಕಲ ಕಲ್ಮಷಗಳನ್ನೂ ತೊಲಗಿಸಿಕೊಂಡು ಆ ಪರಬ್ರಹ್ಮದಲ್ಲಿಯೇ ನಿಲುಗಡೆಯನ್ನು ಪಡೆಯುವನು.

---

# ಮಂತ್ರಗಳ ಅನುಕ್ರಮಣಿಕೆ

**ವಿಶೇಷ :**—ಇಲ್ಲಿ ಕೊಟ್ಟಿರುವ ಪುಟ ಸಂಖ್ಯೆಗಳಲ್ಲಿ ಮೊದಲನೆಯದು ಪದಭಾಷ್ಯದ್ದು ಎರಡನೆಯದು ವಾಕ್ಯಭಾಷ್ಯದ್ದು

---

# ಶಬ್ದಾನುಕ್ರಮಣಿಕೆ

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯದ ಯಾವ ಭಾಗದಲ್ಲಿ ಶಬ್ದವು ಬಂದಿದೆ ಎಂಬುದನ್ನು ಸೂಚಿಸುವವು.

೧. **ಅಜ್ಞಾನಮ್—**
ಆತ್ಮನನ್ನು ತಿಳಿಯದಿರುವದು, ತಪ್ಪಾಗಿ ತಿಳಿದುಕೊಂಡಿರುವದು, ೪.

೨. **ಅಧಿದೈವತಮ್—**
ದೇವತೆಗಳ ವಿಷಯವಾದದ್ದು, ೪೩, ೭೭.

೩. **ಅಧೋಗತಿಃ—**
ಪಶ್ವಾದಿಗಳಿಂದ ಹಿಡಿದು ಸ್ಥಾವರ ಪ್ರಾಣಿಗಳವರೆಗಿನ ಜನ್ಮಗಳನ್ನು ಪಡೆಯುವದು. ದಕ್ಷಿಣೋತ್ತರಮಾರ್ಗಗಳಿಗಿಂತ ಬೇರೆಯಾದ ಮೂರನೆಯ ಗತಿ-ಶಾಸ್ತ್ರೀಯ ಕರ್ಮವನ್ನಾಗಲಿ ಉಪಾಸನೆಯನ್ನಾಗಲಿ ಮಾಡದೆ ಸ್ವೇಚ್ಛೆಯಿಂದ ನಡೆಯುವವರಿಗೆ ಆಗುವ ಕೀಳುಗತಿ ೨.

೪. **ಅಧ್ಯವಸಾಯಃ—**
ಅಂತಃಕರಣದ ಬುದ್ಧಿವೃತ್ತಿಯ ವ್ಯಾಪಾರ, ನಿಶ್ಚಯಿಸುವದು, ೧೬, ೧೮, ೨೪.

೫. **ಅಧ್ಯಾತ್ಮಮ್—**
ತನ್ನೊಳಗಿನ, ಆತ್ಮವಿಷಯವಾದ, ೪೩, ೭೮.

೬. **ಅನ್ತಃಕರಣಮ್—**
ಒಳಗಿನ ಕರಣ; ಮನಸ್ಸು, ಬುದ್ಧಿ–ಎಂಬ ವೃತ್ತಿಗಳುಳ್ಳದ್ದು, ೩೮, ೩೪, ೩೬, ೧೮, ೪೨, ೭೮.

೭. **ಅಮೃತತ್ವಮ್—**
ಮರಣದ ಸಂಬಂಧವಿಲ್ಲದ ಮುಕ್ತಿ, ೨೩, ೫೮, ೫೯, ೮೫.

೮. **ಅವಿದ್ಯಾ—**
ಆತ್ಮನನ್ನು ತಿಳಿಯದೆ ಇರುವದು, ತಪ್ಪಾಗಿ ತಿಳಿದಿರುವದು, ತಪ್ಪಾಗಿ ತಿಳಿದಿರುವದು; ಅಜ್ಞಾನ, ೫೮, ೬೨.

೯. **ಅವಿದ್ಯಾಲಕ್ಷಣಮ್—**
ಅವಿದ್ಯಾಕಲ್ಪಿತವಾದ, ಅವ್ಯಾಕೃತ, ೨೭.

೧೦. **ಅವಿದ್ಯಾಕಾಮಕರ್ಮಲಕ್ಷಣಮ್—**
ಅವಿದ್ಯೆ, ಕಾಮ, ಕರ್ಮ ಎಂಬ ಸಂಸಾರ ಹೇತು, ೮೯.

೧೧. **ಅವ್ಯಾಕೃತಮ್—**
ಜಗತ್ತಿನ ಮೂಲಸ್ಥಿತಿ; ಅವಿದ್ಯೆಯಿಂದ ಕಲ್ಪಿತವಾದ ವ್ಯಾಕೃತನಾಮರೂಪಗಳ ಬೀಜ, ೨೭.

೧೨. **ಅಸಂಹತಃ—**
ಮತ್ತೊಂದರೊಡನೆ ಸೇರಿಕೊಳ್ಳದೆ ತಾನೇತಾನಾಗಿರುವ, ೧೬.

೧೩. **ಆಗಮಃ—**
ಸಂಪ್ರದಾಯಪರಂಪರೆಯಿಂದ ಬಂದಿ

ರುವ ಗುರುಗಳ ಉಪದೇಶ, ೨೯, ೪೪, ೪೬.

೧೪. **ಆತ್ಮಲೋಕಃ—**
ಆತ್ಮನೆಂಬ ಲೋಕ, ಹೊರಗೆ ಸಾಧನದಿಂದ ಸಂಪಾದಿಸಿಕೊಳ್ಳಬೇಕಾಗಿರುವ ಲೋಕಗಳಿಗಿಂತ ಬೇರೆಯಾದ ಆತ್ಮ, ೫.

೧೫. **ಆತ್ಮವಿದ್ಯಾ—**
ಪರಮಾತ್ಮಸ್ವರೂಪವನ್ನು ಅರಿತುಕೊಳ್ಳುವದು, ೫೯.

೧೬. **ಆತ್ಮಮನಃಸಂಯೋಗ—**
ಆತ್ಮ, ಮನಸ್ಸು—ಇವೆರಡೂ ಕೂಡಿಕೊಳ್ಳುವದು, ಇದು ಜ್ಞಾನವುಂಟಾಗುವದಕ್ಕೆ ಅವಶ್ಯವೆಂದು ಕಣಾದರ ಅನುಯಾಯಿಗಳ ಮತ, ೫೫.

೧೭. **ಆಲೋಚನಮ್—**
ಇಂದ್ರಿಯಗಳಿಗೂ ವಿಷಯಗಳಿಗೂ ಸಂಬಂಧವಾವಕೂಡಲೆ ಆಗುವ ಮೊದಲನೆಯ ಅರಿವು (sensation), ೧೬.

೧೮. **ಉಪನಿಷತ್—**
ಬ್ರಹ್ಮವಿದ್ಯೆ, ೮೧, ೮೫, ೮೬; ಉಪಾಸನೆ ೬೪, ಬ್ರಹ್ಮವಿದ್ಯೆಯನ್ನು ಎಂದರೆ ಜ್ಞಾನೋಪಾಸನೆಗಳನ್ನು ತಿಳಿಸುವ ಗ್ರಂಥ, ೧

೧೯. **ಉಪಲಕ್ಷಣಮ್—**
ಒಂದು ಪದಾರ್ಥವನ್ನು ಇನ್ನೂ ಕೆಲವನ್ನೂ ಗ್ರಹಿಸಬೇಕೆಂಬುದಕ್ಕೆ ಗುರುತಾಗಿ ಹೆಸರಿಸಿರುವದು, ೬೯, ೮೭.

೨೦. **ಉಪಾದೇಯಮ್—**
ಬೇಕೆಂದು ತೆಗೆದುಕೊಳ್ಳತಕ್ಕದ್ದು, ವ್ಯಾಕೃತ, ೨೮, ೩೯.

೨೧. **ಉಪಾಧಿಃ—**
ವಸ್ತುವಿನಲ್ಲಿ ತಾನು ಸೇರಿಕೊಂಡಿರದೆ ಅದರಲ್ಲಿಲ್ಲದ ಧರ್ಮವನ್ನು ಇರುವಂತೆ ತೋರಿಸಬಲ್ಲ ವಸ್ತು; ಆತ್ಮನಲ್ಲಿಲ್ಲದ ಧರ್ಮವನ್ನು ತೋರಿಸುವ ಶರೀರಾದಿಗಳು, ೨೩, ೩೩, ೪೨, ೪೩, ೫೬, ೭೮.

೨೨. **ಉಪಾಸನಮ್—**
ಧ್ಯಾನ ೧, ೩೦, ೭೯.

೨೩. **ಏಷಣಾ—**
ಪುತ್ರ, ವಿತ್ತ, ಲೋಕಗಳ ಬಯಕೆ, ೨೩

೨೪. **ಕರಣಾನಿ—**
ವಾಗಾದಿ ಕರ್ಮೇಂದ್ರಿಯಗಳು ಐದು, ಚಕ್ಷುರಾದಿ ಜ್ಞಾನೇಂದ್ರಿಯಗಳು ಐದು, ಮನಸ್ಸು, ಬುದ್ಧಿ—ಎಂಬ ಹನ್ನೆರಡು ಸಾಧನಗಳು, ೧೫, ೧೬, ೬೮.

೨೫. **ಕರ್ತೃತ್ವಭೋಕ್ತೃತ್ವೇ—**
ಇದನ್ನು ಮಾಡಿ ಇದನ್ನು ಅನುಭವಿಸುವೆನೆಂಬ ಅಭಿಮಾನಗಳು, ೬೪.

೨೬. **ಕರ್ಮ—**
ಶಾಸ್ತ್ರದಲ್ಲಿ ವಿಧಿಸಿರುವ ಕೆಲಸಗಳು, ೧, ೨, ೫, ೬, ೩೦.

೨೭. **ಕರ್ಮಾಂಗಸಾಮ—**
ಕರ್ಮವನ್ನು ಮಾಡುವಾಗ ಹೇಳಬೇಕಾದ ಸಾಮವು. ಇದರ ಉಪಾಸನೆಯನ್ನು ಅಂಗಾವಬದ್ಧ ಉಪಾಸನೆಯೆನ್ನುವರು, ೧.

೨೮. **ಕಾಮಕರ್ಮಪ್ರವೃತ್ತಿಕಾರಣಮ್—**
ಕಾಮವೂ ಕರ್ಮವೂ ಉಂಟಾಗುವದಕ್ಕೆ ಕಾರಣವಾದ ಅಜ್ಞಾನ, ೪.

೨೯. **ಕಾರ್ಯಕರಣಸಙ್ಘಾತಃ—**
ದೇಹ, ಇಂದ್ರಿಯಗಳು—ಇವುಗಳ ಸಮೂಹ, ೧೨.

೩೦. **ಕೂಟಸ್ಥಮ್**—
ಯಾವ ವಿಕಾರವೂ ಇಲ್ಲದೆ ಇದ್ದಂತೆ ಇರುವ, ೧೨.

೩೧. **ಕೇವಲತರ್ಕಃ**—
ಅನುಭವದ ಆಧಾರವಿಲ್ಲದ ಅವೈದಿಕ ತರ್ಕ, ಬರಿಯ ಊಹೆ, ೮; ವೇದಕ್ಕೆ ಹೊಂದುವ ತರ್ಕವು ಅವಶ್ಯ, ೪೪.

೩೨. **ಕ್ರಿಯಾಕಾರಕಫಲಭೇದಬುದ್ಧಿಃ**—
ನಾನು ಕರ್ತನು, ಇಂಥ ಸಾಧನಗಳಿಂದ ಈ ಕರ್ಮವನ್ನು ಮಾಡಿ ಇಂಥ ಫಲವನ್ನು ಪಡೆಯುವೆನು ಎಂದು ಕ್ರಿಯೆ, ಕಾರಕ, ಫಲ–ಇವುಗಳನ್ನು ಬೇರೆಬೇರೆಯಾಗಿ ಕಾಣುವ ಬುದ್ಧಿ, ೬, ೮೪.

೩೩. **ಚಿಚ್ಛಕ್ತಿಸ್ವರೂಪಮಾತ್ರಃ**—
ಜ್ಞಾನಶಕ್ತಿಯೇ ತನ್ನ ಸ್ವರೂಪವಾಗಿ ಉಳ್ಳ ಆತ್ಮನು, ಜ್ಞಾನವುಳ್ಳವನಲ್ಲ, ೫೨.

೩೪. **ಚಿನ್ಮಾತ್ರಜ್ಯೋತಿಃ**—
ಬರಿಯ ಜ್ಞಾನವೆಂಬ ಬೆಳಕಿನ ಸ್ವರೂಪದ ಆತ್ಮ, ೨೯.

೩೫. **ಚೈತನ್ಯಾತ್ಮಜ್ಯೋತಿಃ**—
ಚೈತನ್ಯ ಸ್ವರೂಪದ ಬೆಳಕು, ಆತ್ಮನ ಜ್ಞಾನಸ್ವರೂಪ, ೩೬, ೩೮.

೩೬. **ಚೈತನ್ಯಮಾತ್ರಸತ್ತಾಕಮ್**—
ಜ್ಞಾನವೊಂದೇ ಇರವಾಗಿ ಉಳ್ಳ ಆತ್ಮ, ವಾಗಾದಿಗಳ ನಿಜವಾದ ಸ್ವರೂಪವು ಇದೇ, ೩೧.

೩೭. **ಜಾತಿಗುಣಕ್ರಿಯಾವಿಶೇಷಣಾನಿ**—
ವಾಕ್ಕಿನಿಂದ ಹೇಳುವದಕ್ಕೆ ವಸ್ತುವಿನಲ್ಲಿ ನಿಮಿತ್ತವಾಗಿರಬೇಕಾದ ವಿಕಲ್ಪಗಳು, ೨೫.

೩೮. **ಜ್ಞಾನಮ್**—
ಉಪಾಸನೆ, ೨, ೫; ಆತ್ಮನನ್ನು ಅರಿತುಕೊಳ್ಳುವದು, ೪, ೬, ೨೬.

೩೯. **ತರ್ಕಃ**—
ಸುಮ್ಮನೆ ಊಹಿಸುವುದು ೮

೪೦. **ತಾರ್ಕಿಕಾಃ**—
ಬರಿಯ ತರ್ಕವನ್ನೇ ನಂಬಿರುವ ವಾದಿಗಳು, ೩೦.

೪೧. **ದಕ್ಷಿಣಮಾರ್ಗಃ**—
ಸಕಾಮಿಗಳು ಕರ್ಮವನ್ನು ಮಾಡಿ ಫಲವನ್ನು ಪಡೆಯುವದಕ್ಕೆ ಹೋಗುವ ಧೂಮಾದಿಮಾರ್ಗ.. ಇದರಲ್ಲಿ ಹೋದವರು ಸಂಸಾರಕ್ಕೆ ಮರಳುವರು, ೨.

೪೨. **ದೃಷ್ಟಾದೃಷ್ಟಾನಿ**—
ಈ ಲೋಕದಲ್ಲಿ ಕಾಣಬರುವ, ಮತ್ತು ಪರಲೋಕದ್ದಾದ್ದರಿಂದ ಕಾಣದಿರುವ ಶಾಸ್ತ್ರಮಾತ್ರದಿಂದ ತಿಳಿಯಬರುವ ಫಲಗಳು, ೭.

೪೩. **ದ್ರವ್ಯಮ್**—
ಗುಣಕ್ಕೂ ಕ್ರಿಯೆಗೂ ಆಧಾರವಾಗಿರುವ ವಸ್ತುರೂಪ, ೫೪, ೫೫.

೪೪. **ನಿರುಪಾಧಿಕಮ್**—
ಯಾವ ಉಪಾಧಿಯೂ ಇಲ್ಲದ, ೭೮.

೪೫. **ನಿರ್ವಿಶೇಷಮ್**—
ಇಂಥದ್ದೆಂದು ಹೇಳುವದಕ್ಕೆ ಬರುವ ವಿಶೇಷಗಳು ಯಾವವೂ ಇಲ್ಲದ, ೩೨, ೫೩, ೫೫.

೪೬. **ಪರಮಾತ್ಮಾ**—
ನಿಜವಾಗಿಯೂ ಆತ್ಮನಾಗಿರುವವನು, ಅವಿದ್ಯೆಯಿಂದ ಕಲ್ಪಿತವಾಗಿರುವ ಆತ್ಮಗಳಿಗೆಲ್ಲಕ್ಕೂ ಹೆಚ್ಚಿನವನು.

೪೭. **ಪರಾರ್ಥಃ**—
ಮತ್ತೊಂದರ ಪ್ರಯೋಜನಕ್ಕಾಗಿರತಕ್ಕದ್ದು, ೧೬.

೭೦. **ವ್ಯಾಕೃತಮ್**—
ಬಿಡಿಬಿಡಿಯಾದ ನಾಮರೂಪಗಳಿಂದ ತೋರುವ ಜಗತ್ತು, ೨೭.

೭೧. **ವ್ಯಾಕೃತಬೀಜಮ್**—
ವ್ಯಾಕೃತಜಗತ್ತಿನ ಕಾರಣ, ಅವ್ಯಾಕೃತ, ೨೭.

೭೨. **ಶೇಷಃ**—
ಕರ್ಮಕ್ಕೆ ಅಥವಾ ಉಪಾಸನೆಗೆ ಅಂಗವಾದದ್ದು, ೮೩.

೭೩. **ಶ್ರೌತಕರ್ಮ**—
ಶ್ರುತಿಯಲ್ಲಿ ಹೇಳಿರುವ ಅಗ್ನಿಹೋತ್ರಾದಿಕರ್ಮಗಳು, ೨.

೭೪. **ಸಂಯೋಗಃ**—
ಬೇರೆಬೇರೆಯಾಗಿರುವ ಎರಡು ವಸ್ತುಗಳು ಸೇರಿಕೊಳ್ಳುವ ಸಂಬಂಧ, ೫೫.

೭೫. **ಸಂಸಾರಬೀಜಮ್**—
ಸಂಸಾರವೆಂದರೆ ಹುಟ್ಟಿ ಸತ್ತು ಹುಟ್ಟುತ್ತಾ ಸುಖದುಃಖಗಳನ್ನು ಅನುಭವಿಸುತ್ತಿರುವದು ; ಸಂಸಾರ ಬೀಜವೆಂದರೆ ಅದಕ್ಕೆ ಕಾರಣವಾದ ಅಜ್ಞಾನ, ೪, ೮೯.

೭೬. **ಸಂಸ್ಕಾರಃ**—
ಚಿತ್ತವು ಶುದ್ಧಿಯಾಗಲು ಅದರಲ್ಲುಂಟಾಗುವ ಒಂದು ಬಗೆಯ ಯೋಗ್ಯತೆ, ೩.

೭೭. **ಸಂಹತಃ**—
ಒಂದಕ್ಕೊಂದು ಸೇರಿಕೊಂಡಿರುವದು ; ಉದಾಹರಣೆಗೆ ಕಂಬ, ತೊಲೆಗಳು ಮುಂತಾಗಿ ಸೇರಿಕೊಂಡು ಮನೆಯಾಗಿರುವವು. ಸಂಹತವಾದವುಗಳು ಪದಾರ್ಥವಾಗಿರುತ್ತವೆ, ೧೬.

೭೮. **ಸಙ್ಕಲ್ಪಃ**—
ಅಂತಃಕರಣದ ಮನೋವೃತ್ತಿ, ಹೀಗೆ ಮಾಡುವೆನೆಂದು ಯೋಚಿಸಿಕೊಳ್ಳುವದು, ೧೩, ೧೮, ೨೪.

೭೯. **ಸಙ್ಘಾತಃ**—
ಒಂದಕ್ಕೊಂದು ಕೂಡಿ ಆಗಿರುವ ಒಟ್ಟು, ೧೨.

೮೦. **ಸತ್ತ್ವಶುದ್ಧಿಃ**—
ಅಂತಃಕರಣದ ರಾಗಾದಿ ಮಲಗಳು ಹೋಗುವದು, ೨.

೮೧. **ಸದಸದ್ವಾದಿನಃ**—
ಸತ್ಕಾರ್ಯವಾದಿಗಳಾದ ಸಾಂಖ್ಯರು ಮತ್ತು ಅಸತ್ಕಾರ್ಯವಾದಿಗಳಾದ ವೈಶೇಷಿಕರು ೪೧.

೮೨. **ಸಮವಾಯಃ**—
ಗುಣವು ಗುಣಿಯಲ್ಲಿಯೂ, ಜಾತಿಯು ವ್ಯಕ್ತಿಯಲ್ಲಿಯೂ ಕ್ರಿಯೆಯು ಕ್ರಿಯಾವಂತವಾದ ದ್ರವ್ಯದಲ್ಲಿಯೂ ಸೇರಿಕೊಂಡಿರುವ ನಿತ್ಯಸಂಬಂಧ

೮೩. **ಸಮ್ಯಗ್ದರ್ಶನಮ್**—
ಸರಿಯಾದ ತಿಳಿವಳಿಕೆ, ೫೦.

೮೪. **ಸರ್ವಾತ್ಮಾ**—
ಎಲ್ಲರ ಆತ್ಮನಾದ ಬ್ರಹ್ಮ, ೨೯.

೮೫. **ಸರ್ವಾತ್ಮೈಕತ್ವಮ್**—
ಸರ್ವರ ಆತ್ಮನೂ ನನ್ನ ಆತ್ಮನೇ ಎಂಬ ಅದ್ವೈತಭಾವ, ೬೨.

೮೬. **ಸರ್ವಾನ್ತರಃ**—
ದೇಹಾದಿಗಳೆಲ್ಲಕ್ಕೂ ಒಳಗಿರುವ ಮುಖ್ಯಾತ್ಮ, ೧೭, ೨೫.

೮೭. **ಸಹಕಾರಿಸಾಧನಮ್**—
ಒಂದು ಸಾಧನದ ಜೊತೆಯಲ್ಲಿ ಕೆಲಸಮಾಡಿ ಒಂದೇ ಕಾರ್ಯಕ್ಕೆ ನೆರವಾಗುವ ಸಾಧನ, ೮೩, ೮೪.

೮೮. **ಸಾಧ್ಯಸಾಧನಸಮ್ಬನ್ಧಃ**—
ಪಾತ್ರ, ಮಾನುಷವಿತ್ತ, ದೈವವಿತ್ತ

ಎಂಬ ಸಾಧನಗಳು ಅವುಗಳಿಂದ ಪಡೆಯಬೇಕಾದ ಲೋಕತ್ರಯವೆಂಬ ಸಾಧ್ಯ—ಇವುಗಳ ಸಂಬಂಧ, ೩.

೮೯. **ಸ್ಮಾರ್ತಕರ್ಮ—**

ಸ್ಮೃತ್ಯುಕ್ತವಾದ ದೇವಯಜ್ಞವೇ ಮುಂತಾದ ಕರ್ಮಗಳು, ೨.

೯೦. **ಸ್ವರ್ಗಃ—**

ಸ್ವರ್ಗಲೋಕ ; ಆನಂದರೂಪವಾದ ಬ್ರಹ್ಮ, ೮೯.

೯೧. **ಸ್ವಭಾವದೋಷಃ—**

ಚಿತ್ತದಲ್ಲಿ ಸಹಜವಾಗಿ ಕಾಣುವ ದೋಷ, ೪೧.

೯೨. **ಸ್ವಾಭಾವಿಕಃ—**

ಅವಿಚಾರಸ್ವಭಾವದಿಂದ ಆದ, ೨ ; ಸ್ವಭಾವದಿಂದಲೇ ಸಿದ್ಧವಾಗಿರುವ, ೫.

೯೩. **ಹೇಯಮ್—**

ಬೇಡವೆಂದು ಬಿಡತಕ್ಕ, ಅನ್ನಾಕೃತ, ೨೮.



ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ

ಸಂಖ್ಯೆ ೨೦

ಶ್ರೀ ಶಾಂಕರಭಾಷ್ಯಸಮೇತ

# ಕಾಠಕೋಪನಿಷತ್ತು

ಉಪನಿಷತ್ತಿನ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ ಮುಂತಾದವುಗಳೊಡನೆ

ಬರೆದವರು :

ಅಧ್ಯಾತ್ಮಗ್ರಂಥಾವಳಿಯ ಸಂಪಾದಕ

**ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ**

ಎರಡನೆಯ ಸಂಸ್ಕರಣ

ಅಧ್ಯಾತ್ಮಗ್ರಂಥಾವಳಿ ಕ್ರಮಾಂಕ ೬

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
೧೯೬೫

# ಹೊಸ ಸಂಸ್ಕರಣದ ಮೊದಲ ಮಾತು

ಈ ಗ್ರಂಥವು ಈಗ ಸುಮಾರು ಹದಿನೈದು ವರ್ಷಗಳ ಹಿಂದೆ ಅಚ್ಚಾಗಿತ್ತು. ಈ ಸಲಕ್ಕೆ ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲೆಗೆ ಸೇರಿಸುವದಕ್ಕೆ ಅನುಕೂಲಿಸುವಂತೆ ಇದನ್ನು ಸಂಪೂರ್ಣವಾಗಿ ಪರಿಷ್ಕರಿಸಿರುತ್ತೇನೆ.

ಈಶಕೇನಗಳಂತೆಯೇ ಸಂಸ್ಕೃತ ಮೂಲವನ್ನು ಸೇರಿಸಿಕೊಂಡಿರುವದೂ, ಅನುವಾದ, ಟಿಪ್ಪಣಿ, ಸಾರ–ಇವುಗಳನ್ನು ಅವಶ್ಯಕಂಡಂತೆ ಮಾರ್ಪಡಿಸಿಕೊಂಡಿರುವದೂ ಶಬ್ದಾನುಕ್ರಮಣಿಕೆಯನ್ನು ಹಿಗ್ಗಿಸಿ ಆಯಾ ಶಬ್ದವು ಸಂತ್ಕೃತಭಾಷ್ಯದಲ್ಲಿ ಬಂದಿರುವ ಸ್ಥಲವನ್ನು ನಿರ್ದೇಶಿಸಿರುವದೂ ಈ ಸಂಸ್ಕರಣದ ವಿಶೇಷಗಳು. ಪೀಠಿಕೆಯನ್ನು ಪರಿಷ್ಕರಿಸಿ ಸಂಪೂರ್ಣವಾಗಿ ಹೊಸದಾಗಿಯೇ ಬರೆದಿರುತ್ತೇನೆ.

ಈ ಉಪನಿಷತ್ತನ್ನು **ಮೊದಲನೆಯ ಸಲ ಅಚ್ಚುಮಾಡಿಸುವದಕ್ಕೆ ಒಬ್ಬ ಮಹನೀಯರು ಧನಸಹಾಯವನ್ನು ಮಾಡಿದ್ದರು.** ಅವರು ತಮ್ಮ ಹೆಸರನ್ನು ಪ್ರಕಟಿಸುವದಕ್ಕೆ ಈಗಲೂ ಅನುಮತಿಯನ್ನು ಕೊಟ್ಟಿಲ್ಲವಾದ್ದರಿಂದ ಅವರ ಗುಪ್ತ ದಾನವನ್ನು ಇಷ್ಟು ಮಾತುಗಳಿಂದಲೇ ಕೃತಜ್ಞತೆಯಿಂದ ಉಲ್ಲೇಖಿಸಿ ಅವರಿಗೂ ಅವರ ವಂಶಿಕರಿಗೂ ಇಷ್ಟಾರ್ಥಗಳನ್ನು ನೀಡುವಮೂಲಕ ಅನುಗ್ರಹಿಸಬೇಕೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ. ಅವರಂಥ ಮಹಾಶಯರು ಮೊಟ್ಟಮೊದಲು ಮಾಡಿದ ಪ್ರೇಮಪೂರ್ವಕವಾದ ಪ್ರೋತ್ಸಾಹವೇ ಈಗ ನಮ್ಮನ್ನಾಳುವ ಶ್ರೀ ಮಹಾಪ್ರಭುಗಳವರ ಕೃಪಾಕಟಾಕ್ಷಾಂಕುರಕ್ಕೆ ಬೀಜವಾಗಿರಬೇಕೆಂದು ನನ್ನ ಹೃದಯವು ನುಡಿಯುತ್ತಿದೆ.

ಗ್ರಂಥವು ಮುದ್ರಣಶಾಲೆಯಿಂದ ಹೊರಕ್ಕೆ ಬರುವ ಕಾಲದಲ್ಲಿ ಬಗೆಬಗೆಯಿಂದ ಸಹಾಯಮಾಡಿರುವ ವೇದಾಂತಶಿರೋಮಣೀತ್ಯಾದಿಬಿರುದಾಂಕಿತರಾದ **ಬ್ರ॥ ಶ್ರೀ॥ ಎಸ್. ವಿಠಲಶಾಸ್ತ್ರಿಗಳವರಿಗೆ** ನಾನು ಕೃತಜ್ಞನಾಗಿರುತ್ತೇನೆ.

ತಾ॥ 26–7–45. **ಯ. ಸುಬ್ರಹ್ಮಣ್ಯಶರ್ಮ.**

# ಪೀಠಿಕೆ

ಕಠೋಪನಿಷತ್ತು ಕೃಷ್ಣಯಜುರ್ವೇದಕ್ಕೆ ಸೇರಿದ್ದೆಂದು ಪ್ರಸಿದ್ಧಿ. ಆದರೆ ಉಪನಿಷತ್ತಿಗೂ ಹಿಂದಿನ ಗ್ರಂಥಕ್ಕೂ ಸಂಬಂಧವನ್ನು ಭಾಷ್ಯದಲ್ಲಿ ತಿಳಿಸಿರುವದಿಲ್ಲವಾದ್ದರಿಂದ ಈ ಉಪನಿಷತ್ತನ್ನು ಯಾವ ವೇದದ ಭಾಗವೆಂತ ಶಂಕರಭಗವತ್ಪಾದರವರು ಎಣಿಸಿದ್ದರೆಂಬುದು ಸ್ಪಷ್ಟವಾಗಿ ತಿಳಿಯುವಂತಿಲ್ಲ.

## ನಚಿಕೇತನ ಕಥೆ

ಉಪನಿಷತ್ತಿನಲ್ಲಿ ನಚಿಕೇತನೆಂಬ ಬ್ರಹ್ಮಚಾರಿಗೆ ಮೃತ್ಯುದೇವತೆಯು ತತ್ತ್ವವನ್ನು ಉಪದೇಶಿಸಿದಂತೆ ಕಥೆ ಇದೆಯಷ್ಟೆ. ಈ ಕಥೆಯ ಅಂಶವು **ಮಹಾಭಾರತ**ದಲ್ಲಿಯೂ (ಅನುಶಾಸನ ೧೦೬) **ತೈತ್ತಿರೀಯಬ್ರಾಹ್ಮಣ**ದಲ್ಲಿಯೂ (೩-೧-೮) ಕಂಡು ಬರುತ್ತದೆ. ಮಹಾಭಾರತದ ಕಥೆಗೆ ಈ ಉಪನಿಷತ್ತೇ ಆಧಾರವಾಗಿದ್ದರೂ ಇರಬಹುದು ಆದರೆ ಅಲ್ಲಿ ಗೋದಾನವನ್ನು ಹೊಗಳುವದಿಷ್ಟೇ ಉದ್ದೇಶವಾಗಿರುತ್ತದೆ. ಆಜ್ಞೆಯನ್ನು ಉಲ್ಲಂಘಿಸಿದನೆಂಬ ಕಾರಣದಿಂದ ತಂದೆಯು "ಯಮನನ್ನು ನೋಡು" ಎಂದು ಮಗನನ್ನು ಶಪಿಸಿದಂತೆಯೂ ಯಮನು ನಚಿಕೇತನನ್ನು ಸತ್ಕರಿಸಿ ಅವನಿಗೆ ಪುಣ್ಯವಂತರ ಲೋಕಗಳನ್ನು ತೋರಿಸಿದಂತೆಯೂ ಅಲ್ಲಿ ಕಥೆಯಿದೆ. ಗೋದಾನವನ್ನು ಮಾಡಿದವರಿಗೆ ಆಗುವ ಉತ್ತಮಲೋಕಗಳನ್ನು ತಿಳಿದು ನಚಿಕೇತನು ತಂದೆಗೆ ಆ ಸಮಾಚಾರವನ್ನೆಲ್ಲ ತಿಳಿಸುತ್ತಾನೆ. ತೈತ್ತಿರೀಯಬ್ರಾಹ್ಮಣದಲ್ಲಿ ಉಪನಿಷತ್ತಿನಂತೆಯೇ ಕಥಾಸಂವಿಧಾನವಿದೆ. ಆದರೆ ಅಲ್ಲಿ ನಚಿಕೇತನು ಕೇಳಿಕೊಂಡ ವರಗಳು ಈ ಮೂರು: (೧) ತಾನು ತಂದೆಯ ಬಳಿಗೆ ಜೀವಂತನಾಗಿ ಹಿಂತಿರುಗಬೇಕು, (೨) ಇಷ್ಟಾಪೂರ್ತಗಳು ಅಕ್ಷಯವಾಗುವ ವಿಧಾನವನ್ನು ತನಗೆ ತಿಳಿಸಬೇಕು, (೩) ಮೃತ್ಯುವನ್ನು ಜಯಿಸುವ ವಿಧವನ್ನು ತಿಳಿಸಬೇಕು. ಕೊನೆಯ ಎರಡು ವರಗಳಿಗೂ ನಾಚಿಕೇತಾಗ್ನಿಯ ಚಯನವನ್ನೇ ಮೃತ್ಯುವು ಉಪದೇಶಿಸಿರುತ್ತಾನೆ. ಆ ಚಯನದಿಂದ ಅನೇಕ ದೃಷ್ಟಫಲಗಳೂ ಸ್ವರ್ಗಲೋಕಪ್ರಾಪ್ತಿಯೂ ಆದಿತ್ಯಸಾಯುಜ್ಯವೂ ಆಗುವದೆಂದು ಆ ಬ್ರಾಹ್ಮಣದಲ್ಲಿ ಹೇಳಿರುತ್ತದೆ. "ಯೋಽಗ್ನಿಂ ನಾಚಿಕೇತಂ ಚಿನುತೇ। ಯ ಉ ಚೈನಮೇವಂ ವೇದ" ಎಂಬ ವಾಕ್ಯವು ಅಲ್ಲಿ ಹಲವು ಬಾರಿ ಬಂದಿರುತ್ತದೆಯಾದ್ದರಿಂದ ಉಪಾಸನೆಯಲ್ಲಿ ಅನುವಾದಮಾಡಿಕೊಂಡಿರುವ ಕರ್ಮೋಪಾಸನೆಗಳ

ಸಮುಚ್ಚಯಾನುಷ್ಠಾನದ ಫಲದ ವಿಷಯವನ್ನು ತಿಳಿಸುವ ಕಥೆಯು ಪೂರ್ವರೂಪ ವಿದೆಂದು ನಾವು ಇಟ್ಟುಕೊಳ್ಳಬಹುದಾಗಿದೆ. ತೈತ್ತಿರೀಯಬ್ರಾಹ್ಮಣದ ಮೂರನೆಯ ಅಷ್ಟಕದ ಹತ್ತನೆಯ ಪ್ರಶ್ನೆಯಿಂದ ಮುಂದಕ್ಕಿರುವ ಭಾಗವನ್ನು '**ಕಾಠಕ**'ವೆಂದೇ ವೈದಿಕರು ಕರೆಯುತ್ತಾರೆ. ಈ ಭಾಗವು ಮೊದಲು ಕಾಠಕಶಾಖೆಯ ಬ್ರಾಹ್ಮಣಕ್ಕೆ ಸೇರಿದ್ದು. ಈಚೆಗೆ ತೈತ್ತಿರೀಯದೊಳಗೆ ಸೇರಿಕೊಂಡಿರಬಹುದೆ ?–ಎಂಬುದನ್ನು ಪುರಾತತ್ತ್ವವಿದರು ಶೋಧಿಸಬೇಕಾಗಿದೆ. ಮೊದಲನೆಯ ಎರಡು ಅಷ್ಟಕಗಳಲ್ಲಿ ಎಂಟೆಂಟೇ ಪ್ರಶ್ನೆಗಳಿರುವಲ್ಲಿ ಮೂರನೆಯ ಅಷ್ಟಕದಲ್ಲಿ ಮಾತ್ರ ಹನ್ನೆರಡು ಪ್ರಶ್ನೆಗಳಿರು ವದೂ ಅಷ್ಟಕವೆಂಬ ಹೆಸರಿಗೆ ಹೊಂದುಗಡೆಯಾಗುವದಿಲ್ಲವೆಂಬುದೂ ಇಲ್ಲಿ ನೆನಪಿಡ ತಕ್ಕದ್ದಾಗಿದೆ.

## ಬ್ರಹ್ಮವಿದ್ಯೆಯ ಸ್ವರೂಪ

ನಚಿಕೇತನು ಕೇಳಿಕೊಂಡ ಮೂರನೆಯ ವರದ ಸ್ವರೂಪವನ್ನು ಭಾಷ್ಯಕಾರರು ಹೇಗೆ ವಿವರಿಸಿರುವರೆಂಬದನ್ನು ಇಲ್ಲಿ ಒಂದಿಷ್ಟು ವಿಚಾರಿಸುವದು ಒಳ್ಳೆಯದು. ದೇಹ ವ್ಯತಿರಿಕ್ತನಾದ ಆತ್ಮನೊಬ್ಬನಿರುವನೆ? ಅವನ ಪರಮಾರ್ಥಸ್ವರೂಪವು ಹೇಗಿರು ವದು ? (೧-೧-೨೦, ೧-೨-೧೪) ಎಂಬುದು ನಚಿಕೇತನ ಪ್ರಶ್ನೆ. ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ- ಇವುಗಳೆಲ್ಲಕ್ಕಿಂತ ಬೇರೆಯಾಗಿ ಆತ್ಮನಿರುವನೆಂಬುದಕ್ಕೆ ಪ್ರತ್ಯಕ್ಷವಾಗಲಿ ಅನುಮಾನವಾಗಲಿ ಸಹಾಯಕವಾಗುವದಿಲ್ಲ ಏಕೆಂದರೆ ಇಂದ್ರಿಯಾ ದಿಗಳೇ ಅತೀಂದ್ರಿಯವಾಗಿವೆ, ಅವನ್ನು ಮೀರಿರುವ ವಸ್ತುವೊಂದಿದ್ದರೆ ಅದು ಹೇಗೆ ಇಂದ್ರಿಯಗೋಚರವಾದೀತು ? ಇಂದ್ರಿಯಕ್ಕೆ ವಿಷಯವೂ ಅಲ್ಲದ ಇಂದ್ರಿಯಕ್ಕೆ ವಿಷಯವಾದ ಗುರುತಿನ ಸಂಬಂಧವೂ ಇಲ್ಲದ, ವಸ್ತುವನ್ನು ಪ್ರತ್ಯಕ್ಷದಿಂದಲಾಗಲಿ ಅನುಮಾನದಿಂದಲಾಗಲಿ ತಿಳಿಯುವದಕ್ಕೆ ಹೇಗೆ ಆದೀತು ? ಆದ್ದರಿಂದ ಆತ್ಮವಸ್ತು ವನ್ನು ತಿಳಿಯುವದಕ್ಕೆ ಪ್ರತ್ಯಕ್ಷಾದಿಗಳಿಗಿಂತ ಬೇರೆಯಾದ ಪ್ರಮಾಣವಿದ್ದರೆ ಅದನ್ನು ತಿಳಿಸು ಎಂಬುದು ನಚಿಕೇತನ ಪ್ರಶ್ನೆ.

ಇದಕ್ಕೆ ಯಮನ ಉತ್ತರವೇನೆಂದರೆ: ಆತ್ಮತತ್ತ್ವವನ್ನು ಸಾಮಾನ್ಯ ಜನರು ವಿಚಾರಮಾಡುವದೇ ಇಲ್ಲ. ಅವರು ವಿಚಾರಮಾಡಿದರೂ ಅದು ಅವರಿಗೆ ತಿಳಿಯುವದೂ ಇಲ್ಲ (೧-೨-೫, ೬, ೭). ಅದು ತರ್ಕಕ್ಕೆ ನಿಲುಕುವದಿಲ್ಲ (೧-೨-೮, ೯). ಅದು ನಮ್ಮ ಹೃದಯದಲ್ಲಿಯೇ ಇರುವದರಿಂದ ಅದನ್ನು ಅಧ್ಯಾತ್ಮಯೋಗದಿಂದ ತಿಳಿದುಕೊಂಡು ಶೋಕಾದಿಗಳಿಂದ ಬಿಡುಗಡೆಯನ್ನು ಹೊಂದಬಹುದು (೧-೨-೧೨, ೧೩). ಈ ಆತ್ಮನನ್ನು ತಿಳಿದುಕೊಳ್ಳುವದಕ್ಕೆ ಅವಿದ್ಯೆ

ಯೂ ಕಾಮವೂ ಅಡ್ಡಿಯಾಗಿರುವವು (೨-೧-೧, ೨). ಇದನ್ನು ತಿಳಿದುಕೊಳ್ಳುವವನೂ ಹೇಳಿಕೊಡುವವನೂ ಆಶ್ಚರ್ಯಪ್ರಾಯರು (೧-೨-೭). ಇದನ್ನು ತಿಳಿದುಕೊಳ್ಳಬೇಕೆನ್ನುವವನು ದುರಾಚಾರವನ್ನು ಬಿಟ್ಟು ಅಂತಃಕರಣಬಹಿಃಕರಣಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರಬೇಕು (೧-೨-೨೪), ಆತ್ಮನನ್ನೇ ಬಯಸುತ್ತಿರಬೇಕು (೧-೨-೨೩). ಉತ್ತಮನಾದ ಆಚಾರ್ಯನನ್ನು ಸೇವಿಸಿ, ತತ್ತ್ವವನ್ನು ಅರಿತುಕೊಳ್ಳಬೇಕು (೧-೩-೧೪), ಹೇಳಿಕೊಡುವ ಆಚಾರ್ಯನು ಬ್ರಹ್ಮಜ್ಞಾನವನ್ನು ಹೊಂದಿ ಆ ಬ್ರಹ್ಮವೇ ತಾನೆಂಬ ಅರಿವಿನಲ್ಲಿ ನಿಂತವನಾಗಿರಬೇಕು (೧-೨-೮), ಹಾಗಾದರೆ ಮಾತ್ರ ಅದರ ಅರಿವಾಗುತ್ತದೆ.

## ಅವಿದ್ಯೆಯೆಂದರೇನು ?

ಆತ್ಮನನ್ನು ಅರಿಯುವದಕ್ಕೆ ಅಡ್ಡಿಯಾಗಿರುವ ಅವಿದ್ಯೆಯ ಸ್ವರೂಪದ ಬಗೆ ಭಾಷ್ಯಕಾರರ ಅಭಿಪ್ರಾಯವೇನೆಂದರೆ ಆತ್ಮನಲ್ಲಿ ಅವಿಚಾರಸ್ವಭಾವದಿಂದ ಕ್ರಿಯಾಕಾರಕಫಲಗಳನ್ನು ಆರೋಪಿಸುವದೇ ಅಜ್ಞಾನವು (೧-೧-೨೦) ಈ ಅವಿದ್ಯೆಗೆ 'ಮಿಥ್ಯಾಜ್ಞಾನ'ವೆಂದೂ ಹೆಸರು. ಅವಿದ್ಯೆಯಿಂದ ತೋರುವ ಕ್ರಿಯಾಕಾರಕಫಲರೂಪವಾದ ಪ್ರಪಂಚವೇ ನಾಮರೂಪಕರ್ಮಾತ್ಮಕವಾದ ಅನಾತ್ಮವು (೧-೩-೧೪), ನಮ್ಮ ಹೊರಗೆ ಅನಾತ್ಮವನ್ನು ಸ್ವಭಾವದಿಂದ ನೋಡುತ್ತಿರುವದೇ ಅವಿದ್ಯೆ (೧-೧-೨); ಉಪಾಧಿಯ ಸ್ವಭಾವದಿಂದ ಆಗಿರುವ ಭೇದದರ್ಶನವೇ ಅವಿದ್ಯೆ (೧-೧-೨೦).

ಅಜ್ಞಾನವು ಅಥವಾ ಅವಿದ್ಯೆಯು ಸಂಸಾರಕ್ಕೆ 'ಬೀಜ' ವೆಂದು (೧ ೧-೨೦) ಹೇಳಿರುವದಲ್ಲದೆ ಅವ್ಯಕ್ತ (ಅಥವಾ ಅವ್ಯಾಕೃತ) ವೂ ಜಗತ್ತಿಗೆ 'ಬೀಜ' ವೆಂದು (೧-೩-೧೧) ಭಾಷ್ಯದಲ್ಲಿ ಬರೆದಿರುವದು ಅಜ್ಞಾನ (ಅಥವಾ ಅವಿದ್ಯೆ) ಮತ್ತು ಅವ್ಯಾಕೃತ (ಅಥವಾ ಮಾಯೆ)–ಇವೆರಡೂ ಒಂದೇ ಪದಾರ್ಥವೆಂದು ಕೆಲವರು ಭ್ರಮಿಸುವದಕ್ಕೆ ಕಾರಣವಾಗಿರುತ್ತದೆ. ಆಚಾರ್ಯರು ಅವಿದ್ಯೆ, ಮಾಯೆ—ಎಂಬ ಶಬ್ದಗಳನ್ನು ಕೆಲವು ಕಡೆಗಳಲ್ಲಿ ಪರ್ಯಾಯವಾಗಿ ಪ್ರಯೋಗಿಸಿರುತ್ತಾರಾದರೂ **ಅವಿದ್ಯೆಯೆಂಬುದು** ವಿದ್ಯೆಯಿಂದ ಹೋಗುವ ಮಿಥ್ಯಾಜ್ಞಾನವೆಂದೂ [ಅಧ್ಯಾಸಭಾಷ್ಯ] **ಮಾಯೆಯೆಂಬುದು** ಅವಿದ್ಯಾಕಲ್ಪಿತವಾದ ನಾಮರೂಪಗಳ ಬೀಜರೂಪವೆಂದೂ, (ಸೂ.ಭಾ, ೨-೧-೧೪) ವಿವೇಚನೆಮಾಡಿರುವದಲ್ಲದೆ, 'ಅವ್ಯಕ್ತ' ವೆಂಬ ಶಬ್ದದ ಅರ್ಥವನ್ನು ವಿವೇಚನೆಮಾಡುವದಕ್ಕಾಗಿ ಹೊರಟಿರುವ ಒಂದು ಸೂತ್ರದ ಭಾಷ್ಯದಲ್ಲಿ ಅವ್ಯಕ್ತವೆಂದರೆ ಮಾಯೆಯೆಂದು ಒಂದು ಪಕ್ಷ, ಅವಿದ್ಯೆಯೆಂದು ಇನ್ನೊಂದು ಪಕ್ಷ–ಹೀಗೆ

ಎರಡರ್ಥಗಳ ಎರಡು ಪಕ್ಷಗಳನ್ನು ಬೇರೆಬೇರೆಯಾಗಿ ಬರೆದಿರುವದರಿಂದ (ಸೂ. ಭಾ. ೧-೪-೩) ಶಾಂಕರಪ್ರಸ್ಥಾನದಲ್ಲಿ ಅವಿದ್ಯೆಯು ಜ್ಞಾನಕೋಟಿಗೆ ಸೇರಿರುವದೆಂದೂ ಮಾಯೆಯು ಜ್ಞೇಯಕೋಟಿಗೆ ಸೇರಿರುವದೆಂದೂ ಸ್ಪಷ್ಟವಾಗುತ್ತದೆ. ಈ ಕಾರಣ ದಿಂದ ಅವಿದ್ಯೆಯು ಸಂಸಾರಕ್ಕೆ ಬೀಜವೆಂದರೆ ನಿಮಿತ್ತವು, ಅವ್ಯಕ್ತವು ಜಗತ್ತಿಗೆ ಬೀಜ ವೆಂದರೆ ಉಪಾದಾನಕಾರಣವು ಎಂದು ಅರ್ಥಮಾಡಿಕೊಳ್ಳಬೇಕಾಗಿದೆ.

## ಆತ್ಮಜ್ಞಾನಕ್ಕೆ ಸಹಾಯಕವಾದ ತರ್ಕ

ಆತ್ಮನು ತರ್ಕಕ್ಕೆ ಸಿಕ್ಕುವದಿಲ್ಲ (೧-೨-೮, ೯) ಎಂದು ಹೇಳಿರುವದರಿಂದ ತರ್ಕವು ಯಾವ ಬಗೆಯಿಂದಲೂ ಇಲ್ಲಿ ಉಪಯೋಗಕ್ಕೆ ಬರುವದಿಲ್ಲವೆಂದು ಕೆಲವರು ಅಭಿಪ್ರಾಯಪಡುತ್ತಾರೆ ಇದು ಸರಿಯಲ್ಲ. ಏಕೆಂದರೆ ಈ ಉಪನಿಷತ್ತಿನಲ್ಲಿಯೇ ಆತ್ಮಸ್ವರೂಪವನ್ನು ತಿಳಿಸುವದಕ್ಕೆ ತರ್ಕವನ್ನು ಉಪಯೋಗಿಸಿರುತ್ತದೆ. ಆದ್ದರಿಂದಲೇ "ಬರಿಯ ತನ್ನ ಬುದ್ಧಿಯಿಂದ ಮಾಡಿದ ಅಭಿಮಾನದ ಊಹೆಗೆ ಆತ್ಮನು ಸಿಕ್ಕು ವದಿಲ್ಲ" (೧-೨-೮) ಎಂದು ಆಚಾರ್ಯರು ಶ್ರುತಿಗೆ ಅರ್ಥವನ್ನು ಮಾಡಿರುತ್ತಾರೆ. ಸ್ವತಂತ್ರವಾದ ತರ್ಕವು ಮತ್ತೊಂದು ಪ್ರಬಲತರ್ಕದಿಂದ ಬಾಧಿತವಾಗಬಹುದು; ಆದರೆ ಶ್ರುತ್ಯುಕ್ತತರ್ಕವು ಅನುಭವಾನುಸಾರಿಯಾಗಿರುವದರಿಂದ ಅದು ಅಬಾಧ್ಯವಾ ಗಿರುತ್ತದೆ ಎಂಬುದೇ ಇಲ್ಲಿ ತಿಳಿಯಬೇಕಾದದ್ದು. ಆಗಮೋಪಪತ್ತಿಗಳಿಂದ ತಿಳಿದ ಅರ್ಥವು ಅಂಗೈನೆಲ್ಲಿಯಂತೆ ಸಂಪೂರ್ಣವಾಗಿ ಅನುಭವಕ್ಕೆ ಬರುತ್ತದೆ ಎಂದು ಬೃಹದಾರ ಣ್ಯಕ, ಮಾಂಡೂಕ್ಯ, ಬ್ರಹ್ಮಸೂತ್ರ-ಮುಂತಾದವುಗಳ ಭಾಷ್ಯದಲ್ಲಿ ಬರೆದಿರುವದಕ್ಕೆ ಇದೇ ಅಭಿಪ್ರಾಯ.

ಆತ್ಮಸ್ವರೂಪವನ್ನು ತಿಳಿಯುವದಕ್ಕೆ ಅನುಕೂಲವೆಂದು ಈ ಉಪನಿಷತ್ತಿನಲ್ಲಿ ಸೂಚಿಸಿರುವ ತರ್ಕಗಳು ಯಾವವೆಂದರೆ:—

(೧) ಇಂದ್ರಿಯ, ಮನಸ್ಸು, ಬುದ್ಧಿ, ಅವ್ಯಕ್ತ—ಇವುಗಳು ಒಂದಕ್ಕಿಂತ ಒಂದು ಸೂಕ್ಷ್ಮವಾಗಿಯೂ ವ್ಯಾಪಕವಾಗಿಯೂ ಒಳಗಿನ ಆತ್ಮನಾ ಗಿಯೂ ಇರುವವು; ಇವುಗಳೆಲ್ಲಕ್ಕಿಂತಲೂ ಸೂಕ್ಷ್ಮನಾಗಿ ವ್ಯಾಪಕ ನಾಗಿರುವ ಒಳತಿರುಳೇ ಆತ್ಮನು (೧-೩-೧೦, ೧೧; ೨-೩-೭, ೮).

(೨) ಯಾವ ಚೈತನ್ಯದಿಂದಲೇ ಹೊರಗಿನ ಶಬ್ದಾದಿಗಳನ್ನೂ ಒಳಗಿನ ದೇಹೇಂದ್ರಿಯಾದಿಗಳನ್ನೂ ಅರಿಯುವರೋ ಆ ಸ್ವರೂಪವೇ ಆತ್ಮ (೨-೧-೩).

(೩) ಎಚ್ಚರಕನಸುಗಳೆಂಬ ಅವಸ್ಥೆಗಳನ್ನು ಯಾವ ವ್ಯಾಪಕವಾದ ಚೈತನ್ಯದಿಂದ ನಾವು ಅರಿಯುತ್ತಿರುವೆವೋ ಆ ಸಾಕ್ಷಿಯೇ ಆತ್ಮ (೨-೧-೪).

(೪) ಕರ್ಮಫಲವನ್ನನುಭವಿಸುತ್ತಾ ಕಾಲತ್ರಯಕ್ಕೆ ಕಟ್ಟುಬಿದ್ದಿರುವಂತೆ ತೋರುವ ಭೋಕ್ತೃವಿನ ಪರಮಾರ್ಥರೂಪವೇ ಆತ್ಮನು (೨-೧-೫, ೧೩)

(೫) ಶರೀರೇಂದ್ರಿಯಪ್ರಾಣಗಳು ಒಂದಕ್ಕೊಂದು ಕೂಡಿಕೊಂಡು ಯಾರಿಗಾಗಿ, ಯಾರಿಂದ ಪ್ರೇರಿತವಾದಂತೆ, ಕೆಲಸಮಾಡುತ್ತಿರುವವೋ ಅಂಥ ಚೈತನ್ಯವೇ, ಅವುಗಳೊಡನೆ ಸೇರಿಕೊಳ್ಳದೆ ಸ್ವತಂತ್ರನಾಗಿರುವ ಸರ್ವವಿಕ್ರಿಯೆಗಳ ಆಧಾರರೂಪನೇ ಆತ್ಮನು (೨-೨-೧, ೩).

ಇವು ಆತ್ಮನಿರಬೇಕೆಂದು ಸಾಧಿಸುವ ಬರಿಯ ಅನುಮಾನಗಳಲ್ಲ, ಏಕೆಂದರೆ ತನ್ನ ಸ್ವರೂಪವನ್ನು ತರ್ಕದಿಂದ ಅಲ್ಲಗಳೆಯುವದು ಯಾರಿಂದಲೂ ಆಗಲಾರದು. (ನ ಹಾತವ್ಯಾ, ೧-೨-೯ ಭಾಷ್ಯ.) ಚೈತನ್ಯಸ್ವರೂಪವು ನಿತ್ಯಸಿದ್ಧವೆಂಬುದನ್ನು ನೆನಪುಕೊಡುವದಕ್ಕೆ ಇವು ಬಲವಾದ ಅನುಕೂಲತರ್ಕಗಳಾಗಿವೆ. ವೈದಿಕಸಂಪ್ರದಾಯಕ್ಕೆ ಆಗಮವೆಂದು ಹೆಸರು. ಈ ಆಗಮವನ್ನು ಬಿಟ್ಟು ಪ್ರತ್ಯಕ್ಷಾನುಮಾನಗಳಿಂದ ನೋಡಿ ಆತ್ಮನು ಇದ್ದಾನೆ, ಇಲ್ಲ, ಸ್ಥೂಲ, ಅಣು-ಎಂದು ಮುಂತಾಗಿ ವಿಕಲ್ಪಿಸುವ ಚಾರ್ವಾಕರು, ಕ್ಷಣಿಕವಿಜ್ಞಾನಿಗಳು ಮುಂತಾದ(೨-೧-೧೩)ಕುತಾರ್ಕಿಕರ ವಾದಗಳು ಅನುಭವವಿರುದ್ಧವಾಗಿವೆ, ಪರಸ್ಪರವಿರುದ್ಧವಾಗಿವೆ. ಇದನ್ನು ತಿಳಿಸುವದೇ ಆತ್ಮನು ತರ್ಕಕ್ಕೆ ನಿಲುಕುವದಿಲ್ಲವೆಂಬ ವಚನದ ಉದ್ದೇಶವು.

## ಯೋಗಕ್ಕೂ ಜ್ಞಾನಕ್ಕೂ ಸಂಬಂಧ

ಅಧ್ಯಾತ್ಮಯೋಗದಿಂದ (೧-೨-೧೨) ಜ್ಞಾನವಾಗುವದೆಂದೂ ನಚಿಕೇತನು ಯೋಗವಿಧಾನವನ್ನು ತಿಳಿದುಕೊಂಡು ಬ್ರಹ್ಮಸ್ವರೂಪವನ್ನು ಹೊಂದಿದನೆಂದೂ (೨-೩-೧೮) ಹೇಳಿರುತ್ತದೆಯಷ್ಟೆ ಆತ್ಮೈಕ್ಯವನ್ನು ಸುಮ್ಮನೆ ತಿಳಿದುಕೊಂಡರೆ ಸಾಲದೆಂದೂ ಅದನ್ನು ನೇರವಾಗಿ ಕಂಡುಕೊಳ್ಳಬೇಕೆಂದೂ ಈ ವಾಕ್ಯಕ್ಕೆ ಕೆಲವರು ತಾತ್ಪರ್ಯವನ್ನು ಕಲ್ಪಿಸುತ್ತಾರೆ. "ಸಾಕ್ಷಾದ್ ವಿಜಾನಾತಿ" (೧-೩-೨೦) "ಅವಗಮ್ಯ ಆತ್ಮಭಾವೇನ ಸಾಕ್ಷಾತ್" (೨-೧-೪), "ಸಾಕ್ಷಾದನುಭವನ್ತಿ" (೨-೩-೧೨) ಎಂಬ ಭಾಷ್ಯವಚನಗಳು ಈ ಅಭಿಪ್ರಾಯಕ್ಕೆ ಬೆಂಬಲವನ್ನು ಕೊಡುವಂತೆಯೂ ಕಾಣಿಸುತ್ತವೆ. ಆದರೆ ಈ ಸಾಕ್ಷಾತ್ಕಾರದ ಸ್ವರೂಪವೇನು? ಎಂಬುದನ್ನು ಸ್ವಲ್ಪವಿಚಾರಿ

ಸುವದು ಅವಶ್ಯ. ಏಕೆಂದರೆ ಆತ್ಮನನ್ನು ಪ್ರತ್ಯಕ್ಷಾದಿಗಳ ವಿಷಯಗಳಂತೆ ವಿಷಯವಾಗಿ ಅರಿಯುವದಕ್ಕೆ ಆಗಲಾರದೆಂದು ಭಾಷ್ಯಕಾರರೇ ಅಡಿಗಡಿಗೆ ಹೇಳುತ್ತಾಬಂದಿರುತ್ತಾರೆ. "ವಾಕ್ಯಾರ್ಥವನ್ನು ಅರಿತುಕೊಂಡಮೇಲೆ ಮತ್ತೇನೂ ಮಾಡಬೇಕಾದದ್ದು ಇರುವದಿಲ್ಲ." (ಮು. ಭಾ. ೧-೧-೬) ಉತ್ತಮಾಧಿಕಾರಿಗಳಿಗೆ ಒಂದು ಸಲ ವೇದಾಂತವಾಕ್ಯವನ್ನು ಶ್ರವಣಮಾಡುವದರಿಂದಲೇ ಜ್ಞಾನವಾಗಿಬಿಡುತ್ತದೆ (೪-೧-೨) ಎಂದು ಸ್ಪಷ್ಟವಾಗಿ ಹೇಳುವ ಭಾಷ್ಯವಚನಗಳೂ ಇರುತ್ತವೆ ಆದ್ದರಿಂದ ಸಾಕ್ಷಾತ್ತಾಗಿ ತಿಳಿಯುವದು ಎಂದರೆ ತನ್ನ ಸ್ವರೂಪದಲ್ಲಿಯೇ ನೆಲೆನಿಲ್ಲುವದೇ ಹೊರತು ಮತ್ತೆ ಬೇರೆಯ ಅನುಭವ ವನ್ನು ಪಡೆಯುವದೆಂದೇನೂ ಅಲ್ಲ ಆದ್ದರಿಂದಲೇ ಯೋಗದ ಅವಸ್ಥೆಯಲ್ಲಿ "ಅವಿದ್ಯಾಧ್ಯಾರೋಪಣವರ್ಜಿತವಾದ ಸ್ವರೂಪದಲ್ಲಿ ಆತ್ಮನು ನಿಂತಿರುತ್ತಾನೆ" (೨-೩-೧) ಎಂದು ಆಚಾರ್ಯರು ಬರೆದಿರುತ್ತಾರೆ. ಯೋಗವನ್ನು ಹೊಂದಿದಮೇಲೆ ಮತ್ತೇನೂ ಮಾಡಬೇಕಾದದ್ದಿಲ್ಲವಾದ್ದರಿಂದ ಅದನ್ನು ಪಡೆಯುವದಕ್ಕಾಗಿಯೂ ಅದು ಬಂದದ್ದು ಹೋಗದೆ ಇರುವದಕ್ಕಾಗಿಯೂ ಪ್ರಯತ್ನವನ್ನು ಮಾಡಬೇಕೆಂದು ಹೇಳುವ (೨-೩-೧) ಭಾಷ್ಯವಚನವೂ ಇವಕ್ಕೆ ಅನುಕೂಲವಾಗಿರುತ್ತದೆ "ಅಧ್ಯಾತ್ಮ ಯೋಗವೆಂದರೆ ವಿಷಯಗಳಿಂದ ಚಿತ್ತವನ್ನು ಸೆಳೆದು ಆತ್ಮನಲ್ಲಿ ನಿಲ್ಲಿಸಿಕೊಳ್ಳುವದು" (೧-೨-೧೨) ಎಂಬ ಭಾಷ್ಯಕ್ಕೆ ಏಕಾಗ್ರತೆಯಿಂದ ನೋಡಿದರ ಆತ್ಮಜ್ಞಾನವಾಗುತ್ತದೆ ಎಂದೇ ತಾತ್ಪರ್ಯ. ಆದ್ದರಿಂದ ಜ್ಞಾನಕ್ಕಾಗಿ ಯೋಗವೇ ಹೊರತು ಜ್ಞಾನವಾದ ಮೇಲೆ ಯೋಗದಿಂದ ಸಾಕ್ಷಾತ್ಕಾರವನ್ನು ಹೊಂದಬೇಕೆನ್ನುವವರ ಪಕ್ಷಕ್ಕೆ ಭಾಷ್ಯದಲ್ಲಿ ಎಲ್ಲಿಯೂ ಆಧಾರವು ದೊರಕುವದಿಲ್ಲವೆಂದು ತಿಳಿಯಬೇಕು.

## ಜ್ಞಾನದಿಂದಾಗುವ ಮುಕ್ತಿ

ಮುಕ್ತಿಯನ್ನು ಪಡೆಯುವ ಅಧಿಕಾರಿಗಳನ್ನು ಎರಡು ರಾಶಿಗಳಾಗಿ ಉಪ ನಿಷತ್ತಿನಲ್ಲಿ ವರ್ಗೀಕರಣಮಾಡಿರುತ್ತದೆ. ಸಗುಣಬ್ರಹ್ಮವನ್ನು ಉಪಾಸನೆಮಾಡು ವವರು ಮರಣಕಾಲದವರೆಗೂ ಉಪಾಸನೆಮಾಡುತ್ತಿದ್ದು ಅದೇ ತಾನೆಂಬ ಗಟ್ಟಿ ಭಾವನೆಯ ಸಾಕ್ಷಾತ್ಕಾರವನ್ನು ಪಡೆದುಕೊಂಡು (೧-೧-೧೭) ಬದುಕಿರುವಾಗಲೇ ಅಧರ್ಮ, ಅಜ್ಞಾನ-ಮುಂತಾದವುಗಳಿಂದ ಬಿಡುಗಡೆಹೊಂದಿ (೧-೧-೧೮) **ಸುಷು ಮ್ನಾ**ನಾಡಿಯ ದ್ವಾರವಾಗಿ ಹೊರಟು ಸೂರ್ಯದ್ವಾರದಿಂದ ಬ್ರಹ್ಮಲೋಕವನ್ನು ಸೇರುವರು. ಇದು ಬಹುಕಾಲ ಇರುವ ಫಲವಾದ್ದರಿಂದ **ಆಪೇಕ್ಷಿಕವಾದ ಅಮೃತ** ವೆನಿಸುವದು. ಅಥವಾ ಬ್ರಹ್ಮಲೋಕದಲ್ಲಿ ಜ್ಞಾನವನ್ನು ಹೊಂದಿ ಕಲ್ಪಾಂತದಲ್ಲಿ ಬ್ರಹ್ಮನೊಡನೆ **ಮುಖ್ಯವಾದ ಅಮೃತತ್ವವನ್ನೇ** ಪಡೆಯುವರು. (೨-೩-೧೫).

ಹೀಗೆ ಬ್ರಹ್ಮಲೋಕಕ್ಕೆ ಹೋಗಿ ಜ್ಞಾನವನ್ನು ಪಡೆದು ಮುಕ್ತಿಯನ್ನು ಪಡೆಯುವದನ್ನು **ಕ್ರಮಮುಕ್ತಿ** ಎಂದು ಆಚಾರ್ಯರು ಕರೆದಿರುತ್ತಾರೆ. ಇದಕ್ಕೆ ಬದಲು ಬದುಕಿರುವಾಗ ಈ ಲೋಕದಲ್ಲಿಯೇ ಜ್ಞಾನವನ್ನು ಪಡೆದು ಮುಕ್ತಿಯನ್ನು ಹೊಂದಿದರೆ ಅದು **ಸದ್ಯೋಮುಕ್ತಿ** ಎನಿಸುವದು ಲೋಕಾಂತರದಲ್ಲಿ ಕ್ರಮಮುಕ್ತಿಯನ್ನು ಪಡೆಯುವದು ಕಷ್ಟಸಾಧ್ಯವಾದ್ದರಿಂದ ಇಲ್ಲಿಯೇ ಜ್ಞಾನದಿಂದ ಮುಕ್ತಿಯನ್ನು ಪಡೆದುಕೊಳ್ಳಬೇಕೆಂದು (೨-೩-೪; ೫) ಹೇಳಿರುವದಲ್ಲದೆ ಭಾಷ್ಯಕಾರರು ಈ ಸದ್ಯೋಮುಕ್ತಿಯನ್ನು ಮುಖ್ಯವೆಂದು ಒತ್ತಿ ಹಲವು ಕಡೆಗಳಲ್ಲಿ (೨-೨-೧, ೨-೩-೮, ೨-೩-೧೪, ೨-೩-೧೫) ಹೇಳಿರುತ್ತಾರಲ್ಲದೆ ಜ್ಞಾನಿಯು ದೇಹವನ್ನು ಬಿಟ್ಟಮೇಲೆ ಮತ್ತೆ ಶರೀರವನ್ನು ಧರಿಸುವದಿಲ್ಲವೆಂಬ ಕಾರಣದಿಂದ **ವಿದೇಹಮುಕ್ತಿ**ಯನ್ನೂ ಗೌಣವಾಗಿ (೨-೨-೧, ೨-೩-೮) ಒಪ್ಪಿರುತ್ತಾರೆ.

ಹೀಗಿದ್ದರೂ ಕೆಲವರು ವೇದಾಂತಿಗಳು **ಜೀವನ್ಮುಕ್ತಿಯಲ್ಲಿ** ಒಂದಿಷ್ಟು ಅವಿದ್ಯೆ ಉಳಿದುಕೊಂಡಿರುವದರಿಂದ ಅದು ಗೌಣಮುಕ್ತಿಯೆಂದೂ ವಿದೇಹ ಮುಕ್ತಿಯೇ ಮುಖ್ಯವೆಂದೂ ಅಭಿಪ್ರಾಯಪಟ್ಟಿರುತ್ತಾರೆ. ಸದ್ಯೋಮುಕ್ತಿಯೆಂದರೆ ಜ್ಞಾನವುಂಟಾದಕೂಡಲೆ ಶರೀರವು ಬಿದ್ದುಹೋಗುವದು ಎಂದೂ ಕೆಲವರು ಅಭಿಪ್ರಾಯಪಟ್ಟಿರುತ್ತಾರೆ (!). ಈ ಅಭಿಪ್ರಾಯಗಳು ಭಾಷ್ಯವಿರುದ್ಧವಾಗಿರುವದಲ್ಲದೆ ಜ್ಞಾನದಿಂದಲೇ ಮೋಕ್ಷವಾಗುವದೆಂಬ ಅದ್ವೈತದ ಮುಖ್ಯಸಿದ್ಧಾಂತಕ್ಕೂ ವಿರುದ್ಧವಾಗಿರುವವೆಂಬುದನ್ನು ಹೇಳಬೇಕಾದದ್ದಿಲ್ಲ.

## ಈ ಉಪನಿಷತ್ತಿನ ಟೀಕಾಕಾರರು

ಈ ಉಪನಿಷತ್ತಿಗೆ "ಆನಂದಜ್ಞಾನ" "ಬಾಲಗೋಪಾಲೇಂದ್ರಯತೀಶ್ವರ" ಎಂಬ ಇಬ್ಬರು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಆನಂದಜ್ಞಾನರು ಮುಂಡಕೋಪನಿಷತ್ತಿಗೆ ವ್ಯಾಖಾನವನ್ನು ಬರೆದಿರುವವರೇ ಎಂದು ತೋರುತ್ತದೆ. ಏಕೆಂದರೆ ಈ ಎರಡು ವ್ಯಾಖಾನಗಳಲ್ಲಿಯೂ "**ಪ್ರಕಟಾರ್ಥ**" ವೆಂಬ ವೇದಾಂತಗ್ರಂಥವನ್ನು ಪ್ರಮಾಣವಾಗಿ ಬರೆದುಕೊಂಡಿರುತ್ತದೆ, ಎರಡರಲ್ಲಿಯೂ ಭಾಸ್ಕರಾಚಾರ್ಯರ ಮತವನ್ನು ಖಂಡಿಸಿರುತ್ತದೆ. ಇದು ನಿಜವಾದರೆ ಬೃಹದಾರಣ್ಯಕೋಪನಿಷತ್ತಿಗೆ ವ್ಯಾಖ್ಯಾನವನ್ನು ಬರೆದಿರುವ "ಆನಂದಗಿರಿ" ಗಳೆಂಬವರು ಇವರಲ್ಲವೆಂದು ಹೇಳಬೇಕಾಗುತ್ತದೆ; ಏಕೆಂದರೆ ಬೃಹದಾರಣ್ಯಕವ್ಯಾಖ್ಯಾನಕಾರರು ಏಕಜೀವವಾದಿಗಳು; ಮುಂಡಕೋಪನಿಷತ್ತಿನ ವ್ಯಾಖ್ಯಾನಕಾರರು ನಾನಾಜೀವವಾದಿಗಳು. ಭಾಷ್ಯದಲ್ಲಿ ಈ ವಾದಗಳ ಸುಳಿವೇ ಇಲ್ಲ; ಇವು ಅವರಿಂದೀಚೆಗೆ ವೇದಾಂತಿಗಳಲ್ಲಿ ಉಂಟಾದ ಚರ್ಚೆಗೆ ಸೇರಿದ

ಪ್ರಶ್ನೆಗಳಾಗಿರುತ್ತವೆ. ವ್ಯಾಖ್ಯಾನಕಾರರುಗಳು ಭಾಷ್ಯಕಾರರಿಗಿಂತ ಬಹಳ ಈಚಿನವರಾದ್ದರಿಂದ ಇವರು ತಮ್ಮ ವ್ಯಾಖ್ಯಾನಗಳಲ್ಲಿ ಹೊಸ ವೇದಾಂತಿಗಳ ವಾದಗಳನ್ನೂ ಬೆರೆಯಿಸಿ ಕೊಂಡಿರುತ್ತಾರೆ. ಬಾಲಗೋಪಾಲಯತೀಶ್ವರರು ಆನಂದಜ್ಞಾನರ ವ್ಯಾಖ್ಯಾನವನ್ನು ಬಲುಮಟ್ಟಿಗೆ ಶಬ್ದಶಃ ಉಪಯೋಗಿಸಿಕೊಂಡು ಅದನ್ನು ಇನ್ನಷ್ಟು ವಿಸ್ತರಿಸಿರುತ್ತಾರೆ. ಈ ಟೀಕೆಗಳೆರಡರಲ್ಲಿಯೂ ವಿವರಣೆಗಳು ಭಾಷ್ಯದ ಅಭಿಪ್ರಾಯಕ್ಕೆ ಬಿಡುವಂತೆ ನನಗೆ ತೋರಿದ ಕಡೆಗಳಲ್ಲಿ ಅಲ್ಲಲ್ಲಿಯೇ ಅಡಿ ಟಿಪ್ಪಣಿಯಲ್ಲಿ ವಿಮರ್ಶೆಯನ್ನು ಬರೆದಿರುತ್ತೇನೆ.

ಕಠೋಪನಿಷತ್ತು ಚಿಕ್ಕದಾದರೂ ಇದರಲ್ಲಿ ಅಮೋಘವಾದ ತತ್ತ್ವಗಳು ಅಡಗಿವೆ ಎಂಬುದನ್ನು ಭಾಷ್ಯಕಾರರು ಹೃದಯಂಗಮವಾದ ರೀತಿಯಿಂದ ತೋರಿಸಿ ಕೊಟ್ಟಿರುತ್ತಾರೆ. ಈ ಉಪನಿಷತ್ತಿನ ಸಾರವನ್ನು ಕೊನೆಯ ಮಂತ್ರಗಳಲ್ಲಿ ಸಂಗ್ರಹಿಸಿ ಹೇಳಿರುವದೇನಂದರೆ . ಮನುಷ್ಯನ ಹೃದಯದಲ್ಲಿ ಪರಿಚ್ಛಿನ್ನನಾಗಿ ಸಂಸಾರಿಯಾಗಿರುವಂತೆ ಕಾಣುತ್ತಿರುವ ಜೀವನನ್ನು ಉಪಾಧಿಗಳಿಂದ ವಿಂಗಡಿಸಿಕೊಂಡು ಅವನೇ ನಿತ್ಯಶುದ್ಧವಾದ ಅಮೃತವಾದ ಬ್ರಹ್ಮವೆಂದು ತಿಳಿದುಕೊಳ್ಳಬೇಕು. ನಮ್ಮ ಬುದ್ಧಿಗೆ ಗಂಟುಹಾಕಿಕೊಂಡಿರುವಂತೆ ಇರುವ ತಪ್ಪುತಿಳಿವಳಿಕೆಗಳನ್ನು ಕಳೆದುಕೊಂಡು ಕಾಮಗಳೆಲ್ಲವನ್ನೂ ಸಮೂಲವಾಗಿ ನಾಶಮಾಡಿಕೊಂಡರೆ ಮರ್ತ್ಯರೆನಿಸಿರುವ ನಾವು ಅಮೃತರಾಗುವೆವು, ಇಲ್ಲಿಯೇ ಬ್ರಹ್ಮವನ್ನು ಪಡೆದುಕೊಳ್ಳಬಹುದು. ಇದೇ ಸರ್ವವೇದಾಂತಸಾರವು ಎಂಬುದು ಉಪನಿಷತ್ತಿನ ಕೊನೆಯ ಮಾತು.

**ಯ. ಸುಬ್ರಹ್ಮಣ್ಯಶರ್ಮ.**



## ಸಂಕೇತಗಳ ವಿವರ

ಈಶ, ಕೇನ– ಈ ಉಪನಿಷತ್ತುಗಳಂತೆಯೇ ಇಲ್ಲಿಯೂ ಉಪನಿಷತ್ತುಗಳು, ಗೀತೆ- ಇವುಗಳನ್ನು ಮೊದಲನೆಯ ಅಕ್ಷರದಿಂದಲೂ ಆಯಾ ಭಾಷ್ಯವನ್ನು ಭಾ. ಎಂಬ ಅಕ್ಷರ ದಿಂದಲೂ ಸೂಚಿಸಿರುತ್ತದೆ. ಕೆಲವು ಸಂಕೇತಗಳನ್ನು ಮಾತ್ರ ಕೆಳಗೆ ವಿವರಿಸಿರುತ್ತದೆ.

(ಆ||). ಆನಂದಾಶ್ರಮಮುದ್ರಿತಪುಸ್ತಕದಲ್ಲಿರುವ ಪಾಠ. ಆನಂದಜ್ಞಾನರ ವ್ಯಾಖ್ಯಾನ

(ಆ|| ಗೋ||) ಆನಂದಜ್ಞಾನರ ಮತ್ತು ಬಾಲಗೋಪಾಲೇಂದ್ರಯತೀಶ್ವರರ ಕಾಠಕೋಪನಿಷದ್ವ್ಯಾಖ್ಯಾನ

ಋ. ಋಗ್ವೇದ

ತೈ. ಬ್ರಾ. ತೈತ್ತಿರೀಯಬ್ರಾಹ್ಮಣ

ತೈ. ಸಂ. ತೈತ್ತಿರೀಯಸಂಹಿತೆ

ಭಾ. ಭಾ. ಭಾಷ್ಯಭಾಗ ಈ ಉಪನಿಷತ್ತಿನ ಸಂಸ್ಕೃತಭಾಷ್ಯಭಾಗಗಳನ್ನು ತಿಳಿಸುವದಕ್ಕೆ ಉಪಯೋಗಿಸಿರುವ ಸಂಖ್ಯೆಗಳನ್ನು ಹೀಗೆ ತಿಳಿಸಿದೆ.

ಮನು. ಮನುಸ್ಮೃತಿ

(ಮೈ||) ಮೈಸೂರಿನಲ್ಲಿ ಮುದ್ರಿತವಾದ ತೆಲುಗಕ್ಷರದ ಪಾಠ

ವಿ. ಪು ವಿಷ್ಣುಪುರಾಣ

ಶ್ವೇ. ಶ್ವೇತಾಶ್ವತರಪಾಠ

ಸೂ. ಭಾ. ಸೂತ್ರಭಾಷ್ಯ, ಬ್ರಹ್ಮಸೂತ್ರಕ್ಕೆ ಶಂಕರಾಚಾರ್ಯರ ಭಾಷ್ಯ

# ವಿಷಯಾನುಕ್ರಮಣಿಕೆ

## ಭಾಷ್ಯಕಾರರ ಅವತರಣಿಕೆ



## ಒಂದನೆಯ ಅಧ್ಯಾಯ—ಒಂದನೆಯ ವಲ್ಲಿ



## ಒಂದನೆಯ ಅಧ್ಯಾಯ—ಎರಡನೆಯ ವಲ್ಲಿ



## ಒಂದನೆಯ ಅಧ್ಯಾಯ—ಮೂರನೆಯ ವಲ್ಲಿ



## ಎರಡನೆಯ ಅಧ್ಯಾಯ—ಒಂದನೆಯ ವಲ್ಲಿ



## ಎರಡನೆಯ ಅಧ್ಯಾಯ—ಎರಡನೆಯ ವಲ್ಲಿ

## ಎರಡನೆಯ ಅಧ್ಯಾಯ–ಮೂರನೆಯ ವಲ್ಲಿ

॥ ಓಂ ॥

ಶ್ರೀ ಶಾಂಕರಭಾಷ್ಯಸಮೇತವಾದ

# ಕಾಠಕೋಪನಿಷತ್ತು

---

## ಭಾಷ್ಯಕಾರರ ಅವತರಣಿಕೆ

(ಭಾಷ್ಯ)

೧. ಓಂ ನಮೋ ಭಗವತೇ ವೈವಸ್ವತಾಯ ಮೃತ್ಯವೇ ಬ್ರಹ್ಮವಿದ್ಯಾಚಾರ್ಯಾಯ ನಚಿಕೇತಸೇ ಚ । ಅಥ ಕಾಠಕೋಪನಿಷದ್ವಲ್ಲೀನಾಂ ಸುಖಾರ್ಥಪ್ರಬೋಧನಾರ್ಥಮ್ ಅಲ್ಪಗ್ರನ್ಥಾ ವೃತ್ತಿರಾರಭ್ಯತೇ ॥

(ಭಾಷ್ಯಾರ್ಥ)

ಓಂ! ಭಗವಂತನೂ[1] ವಿವಸ್ವಂತನ ಮಗನೂ[2] ಬ್ರಹ್ಮವಿದ್ಯಾಚಾರ್ಯನೂ[3] ಆದ ಮೃತ್ಯುವಿಗೂ[4] ನಚಿಕೇತಸ್ಸಿಗೂ ನಮಸ್ಕಾರವು. ಈಗ ಕಾಠಕೋಪನಿಷತ್ತಿನ[5]

---

1 ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿಮ್ । ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥ (ಪ್ರಾಣಿಗಳ ಉತ್ಪತ್ತಿಯನ್ನೂ ಪ್ರಲಯವನ್ನೂ ಆಗುಹೋಗುಗಳನ್ನೂ ವಿದ್ಯೆಯನ್ನೂ ಅವಿದ್ಯೆಯನ್ನೂ ಅರಿತಿರುವಾತನನ್ನು ಭಗವಂತನೆನ್ನಬೇಕು) ಎಂದು ಪುರಾಣವಾಕ್ಯ (ವಿ. ಪು ೬-೫-೭೮।

2 ಸೂರ್ಯನ ಮಗನು ಸೂರ್ಯನು ಬ್ರಹ್ಮವಿದ್ಯೆಯನ್ನು ಮನುವಿಗೆ ಹೇಳಿದನೆಂದು ಗೀತೆಯಲ್ಲಿದೆ (೪-೧).

3 ಮೂಲದಲ್ಲಿ ಈ ವಿಶೇಷಣವು ಮೃತ್ಯುವಿಗೂ ನಚಿಕೇತಸ್ಸಿಗೂ ಅನ್ವಯಿಸುವಂತೆ ಇದೆ. ಮೃತ್ಯುವೇ ಉಪನಿಷತ್ತಿನಲ್ಲಿ ಆಚಾರ್ಯನಾಗಿದ್ದರೂ ನಚಿಕೇತಸ್ಸು ಯಮನಿಂದ ಪಡೆದ ವಿದ್ಯೆಯನ್ನು ಭೂಲೋಕದಲ್ಲಿ ಹರಡಿದನು ಎಂಬ ಅರ್ಥವನ್ನು ಸೂಚಿಸುವದಕ್ಕಾಗಿ "ನಚಿಕೇತಸೇ" ಎಂಬ ಮಾತಿನ ಹಿಂದೆ ಈ ವಿಶೇಷಣವನ್ನು ಹಾಕಿರಬೇಕೆಂದು ತೋರುತ್ತದೆ.

4 "ಯಮನಿಗೂ. ಯಮನು ಜ್ಞಾನಿಯಾದರೂ ಅಧಿಕಾರಪುರುಷನಾದ್ದರಿಂದ ಪ್ರಾರಬ್ಧಕರ್ಮವು ಮುಗಿಯುವವರೆಗೆ ತನ್ನ ಅಧಿಕಾರದ ಕೆಲಸವನ್ನು ನಡೆಯಿಸುತ್ತಿರುವನು." (ಅ॥ ಟೀ॥) ಸೂ. ಭಾ. ೩-೩-೩೨ ನೋಡಿ.

5. ಕೃಷ್ಣಯಜುರ್ವೇದದಲ್ಲಿ ಕಾಠಕವೆಂಬುದೊಂದು ಶಾಖೆಯುಂಟು. ಈ ಉಪನಿಷತ್ತು ಅದಕ್ಕೆ ಸೇರಿದ್ದೆಂದು ಹೇಳುತ್ತಾರೆ. ಪೀಠಿಕೆಯನ್ನು ನೋಡಿ.

ವಲ್ಲಿಗಳಿಗೆ[1] ಸುಲಭವಾಗಿ ಅರ್ಥವು ತಿಳಿಯಲೆಂದು **ಸ್ವಲ್ಪಗ್ರಂಥದ ವೃತ್ತಿ**[2]ಯನ್ನು ಪ್ರಾರಂಭಿಸಿರುತ್ತದೆ.

## ಉಪನಿಷತ್ತೆಂದರೆ ಏನು ?

(ಭಾಷ್ಯ)

೨. ಸದೇರ್ಧಾತೋರ್ವಿಶರಣಗತ್ಯವಸಾದನಾರ್ಥಸ್ಯ, ಉಪನಿಪೂರ್ವಸ್ಯ, ಕ್ವಿಪ್‌ಪ್ರತ್ಯಯಾನ್ತಸ್ಯ ರೂಪಮಿದಮ್[3] "ಉಪನಿಷತ್" ಇತಿ। ಉಪನಿಷಚ್ಛಬ್ದೇನ ಚ ವ್ಯಾಚಿಖ್ಯಾಸಿತಗ್ರನ್ಥಪ್ರತಿಪಾದ್ಯವೇದ್ಯವಸ್ತುವಿಷಯಾ ವಿದ್ಯಾ ಉಚ್ಯತೇ। ಕೇನಪುನರರ್ಥಯೋಗೇನ ಉಪನಿಷಚ್ಛಬ್ದೇನ ವಿದ್ಯಾ ಉಚ್ಯತ ಇತಿ? ಉಚ್ಯತೇ। ಯೇ ಮುಮುಕ್ಷವೋ ದೃಷ್ಟಾನುಶ್ರವಿಕವಿಷಯವಿತೃಷ್ಣಾಃ ಸನ್ತಃ ಉಪನಿಷಚ್ಛಬ್ದವಾಚ್ಯಾಂ ವಕ್ಷ್ಯಮಾಣಲಕ್ಷಣಾಂ ವಿದ್ಯಾಮ್ ಉಪಸದ್ಯ ಉಪಗಮ್ಯ ತನ್ನಿಷ್ಠತಯಾ ನಿಶ್ಚಯೇನ ಶೀಲಯನ್ತಿ, ತೇಷಾಮ್ ಅವಿದ್ಯಾದೇಃ ಸಂಸಾರಬೀಜಸ್ಯ ವಿಶರಣಾತ್ ಹಿಂಸನಾತ್ ವಿನಾಶನಾತ್ ಇತ್ಯನೇನ ಅರ್ಥಯೋಗೇನ ವಿದ್ಯಾ 'ಉಪನಿಷತ್' ಇತ್ಯುಚ್ಯತೇ। ತಥಾ ಚ ವಕ್ಷ್ಯತಿ "ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ" (೧-೩-೧೫) ಇತಿ ॥

(ಭಾಷ್ಯಾರ್ಥ)

(೧) ವಿಶರಣ, (೨) ಗತಿ, (೩) ಅವಸಾದನ-ಎಂಬ ಅರ್ಥಗಳುಳ್ಳ[4] 'ಸದ್' ಧಾತುವಿಗೆ ಹಿಂದೆ 'ಉಪ', 'ನಿ'-ಎಂಬ (ಉಪಸರ್ಗಗಳೂ) ಮುಂದೆ ಕ್ವಿಪ್[5] ಎಂಬ ಪ್ರತ್ಯಯವೂ ಬಂದು "ಉಪನಿಷದ್" ಎಂಬ ಈ ರೂಪವಾಗಿರುತ್ತದೆ. ಮತ್ತು (ಈ) "ಉಪನಿಷದ್" ಎಂಬ ಶಬ್ದದಿಂದ (ನಾವು ಈಗ) ವ್ಯಾಖ್ಯಾನಮಾಡಬೇಕೆಂದಿರುವ ಗ್ರಂಥದಲ್ಲಿ ಹೇಳಿರುವದಾಗಿಯೂ (ಮುಮುಕ್ಷುಗಳು) ತಿಳಿದುಕೊಳ್ಳಬೇಕಾದದ್ದಾಗಿಯೂ ಇರುವ ವಸ್ತುವಿನ[6] ವಿಷಯವಾದ ವಿದ್ಯೆಯು ಹೇಳಲ್ಪಡುವದು.

---

1. ಈ ಉಪನಿಷತ್ತಿನ ಅಧ್ಯಾಯದ ವಿಭಾಗಗಳಿಗೆ "ವಲ್ಲಿ"ಗಳೆಂದು ಹೆಸರು.
2. ಭರ್ತೃಪ್ರಪಂಚರು ಮೊದಲಾದವರೂ ಉಪನಿಷತ್ತಿಗೆ ವ್ಯಾಖ್ಯಾನವನ್ನು ಬರೆದಿರುವರಾದರೂ ಅವರ ಗ್ರಂಥವು ಶಬ್ದಗಳ ದೃಷ್ಟಿಯಿಂದ ದೊಡ್ಡದು, ಅರ್ಥದ ದೃಷ್ಟಿಯಿಂದ ಅದರಲ್ಲಿ ಕೊರತೆಯಿದೆ-ಎಂದು ಭಾವ. (ಗೋ॥)
3. 'ಇದಮ್' ಎಂಬ ಮಾತು (ಆ॥) ಪಾಠದಲ್ಲಿಲ್ಲ; ಇಲ್ಲದಿದ್ದರೂ ಸಾಗುತ್ತದೆ.
4. ಈ ಅರ್ಥಗಳನ್ನು ಒಂದೊಂದಾಗಿ ಮುಂದೆ ವಿವರಿಸುವರು.
5. ಕ್ವಿಪ್ ಎಂಬ ಪ್ರತ್ಯಯವು ಬಂದು ಲೋಪವಾಗಿದೆ. ಉಪ + ನಿ + ಸದ್ + ಕ್ವಿಪ್ = ಉಪನಿಷದ್.
6. ಬ್ರಹ್ಮವಸ್ತುವಿನ.

(ಪ್ರಶ್ನೆ) :—ಹಾಗಾದರೆ ಯಾವ ಅರ್ಥದ ಸಂಬಂಧದಿಂದ[1] (ಈ ಮಾತಿನಿಂದ) ವಿದ್ಯೆಯು ಹೇಳಲ್ಪಡುವದು ?

(ಉತ್ತರ) :—ಹೇಳುತ್ತೇವೆ (ಕೇಳಿರಿ) : ಯಾವ ಮುಮುಕ್ಷುಗಳು (ಈ ಲೋಕದಲ್ಲಿ) ಕಂಡಿರುವವುಗಳಾಗಿಯೂ (ಪರಲೋಕದಲ್ಲಿವೆಯೆಂದು) ಶ್ರುತಿಯಲ್ಲಿ (ಹೇಳಿ)ರುವವುಗಳಾಗಿಯೂ ಇರುವ ವಿಷಯಗಳಲ್ಲಿ ಬಯಕೆಯಿಲ್ಲದವರಾಗಿ ಉಪನಿಷತ್ತು ಎಂಬ ಶಬ್ದಕ್ಕೆ ವಾಚ್ಯವಾದ ಮುಂದೆ ಹೇಳುವಂಥ ವಿದ್ಯೆಯನ್ನು (ಅದರ) ಹತ್ತಿರಕ್ಕೆ ಬಂದು ('ಉಪ') ಅದರಲ್ಲಿಯೇ ತಾತ್ಪರ್ಯವುಳ್ಳವರಾಗಿ ನಿಶ್ಚಯದಿಂದ ('ನಿ') ಪರಿಶೀಲಿಸುವರೋ ಅವರ ಸಂಸಾರಕ್ಕೆ ಬೀಜವಾದ[2] ಅವಿದ್ಯೆಯೇ ಮುಂತಾದವುಗಳನ್ನು[3] ವಿಶರಣಮಾಡುವದರಿಂದ ಎಂದರೆ ಹಿಂಸೆಮಾಡುವದರಿಂದ ವಿನಾಶಗೊಳಿಸುವದರಿಂದ ('ಸದ್')[4]–ಎಂಬೀ ಅರ್ಥದ ಸಂಬಂಧದಿಂದ ವಿದ್ಯೆಯು 'ಉಪನಿಷತ್ತು' ಎನಿಸುತ್ತದೆ. ಆದ್ದರಿಂದಲೇ ಮುಂದೆ (ಶ್ರುತಿಯು) "ಅವನನ್ನು ಅರಿತುಕೊಂಡರೆ ಮೃತ್ಯುವಿನ ಬಾಯಿಯಿಂದ ಬಿಡುಗಡೆಹೊಂದುತ್ತಾನೆ" (೧-೩-೧೫) ಎಂದು ಹೇಳುವದು.

(ಭಾಷ್ಯ)

3. ಪೂರ್ವೋಕ್ತವಿಶೇಷಣಾನ್ ಮುಮುಕ್ಷೂನ್ ವಾ ಪರಂ ಬ್ರಹ್ಮ ಗಮಯತೀತಿ ಬ್ರಹ್ಮಗಮಯಿತೃತ್ವೇನ ಯೋಗಾದ್ ಬ್ರಹ್ಮವಿದ್ಯಾ ಉಪನಿಷತ್ । ತಥಾ ಚ ವಕ್ಷ್ಯತಿ "ಬ್ರಹ್ಮಪ್ರಾಪ್ತೋ ವಿರಜೋಽಭೂದ್ ವಿಮೃತ್ಯುಃ" (೨-೩-೧೮) ಇತಿ ||

(ಭಾಷ್ಯಾರ್ಥ)

ಅಥವಾ ಹಿಂದೆ ಹೇಳಿರುವ ವಿಶೇಷಣಗಳುಳ್ಳ ಮುಮುಕ್ಷುಗಳನ್ನು ಪರಬ್ರಹ್ಮ

---

1 ಕಲ್ಲು, ಮಣ್ಣು–ಮುಂತಾದ ವಸ್ತುಗಳನ್ನು ರೂಢಿಯಿಂದ ಆ ಶಬ್ದಗಳು ಹೇಳುತ್ತವೆ. ಎಳನೀರು, ಒಡನಾಡಿ–ಮುಂತಾದವುಗಳನ್ನು ಯೋಗವೃತ್ತಿಯಿಂದ ಆ ಶಬ್ದಗಳು ಹೇಳುವವು. 'ಉಪನಿಷದ್' ಎಂಬ ಶಬ್ದಕ್ಕೆ ಬ್ರಹ್ಮವಿದ್ಯೆ ಎಂಬುದು ರೂಢಿಯ ಅರ್ಥವೊ, ಯೋಗದ (ಅವಯವಾ)ರ್ಥವೊ ?–ಎಂದು ಪ್ರಶ್ನೆ

2. ಕಾರಣವಾದ.

3. ಅವಿದ್ಯೆ, ಕಾಮ, ಕರ್ಮ–ಇವನ್ನು.

4 ಷದ್ಲ್ಯ ವಿಶರಣಗತ್ಯವಸಾದನೇಷು ಎಂದು ಧಾತುವಿಗೆ ಮೂರು ಅರ್ಥಗಳನ್ನು ಕೊಟ್ಟಿತ್ತಷ್ಟೆ ; ಈಗ ಮುಮುಕ್ಷುಗಳ ಸಂಸಾರಬೀಜವನ್ನು ನಾಶಪಡಿಸುತ್ತದೆ ಎಂದು ವಿಶರಣಾರ್ಥವನ್ನು ತೋರಿಸಿರುತ್ತಾರೆ. ಮುಮುಕ್ಷುಗಳ ವಿಶೇಷಣದಲ್ಲಿ ಇಹಾಮುತ್ರಫಲಭೋಗವಿರಾಗ (ವಿತೃಷ್ಣಾಃ), ಶಮಾದಿಗಳು (ನಿಶ್ಚಯೇನ), ವಿವೇಕ (ಶೀಲಯನ್ತಿ) ಎಂಬ ಸಾಧನಗಳನ್ನು ಸೂಚಿಸಿರುವದನ್ನು ಲಕ್ಷ್ಯದಲ್ಲಿಡಬೇಕು.

ವನ್ನು ಪಡೆಯಿಸುತ್ತದೆ ಎಂದು ಬ್ರಹ್ಮವನ್ನು ಪಡೆಯಿಸುವದೆಂಬ [1] (' ಸದ್ ') ಅರ್ಥದ ಯೋಗದಿಂದಲಾದರೂ ಬ್ರಹ್ಮವಿದ್ಯೆಯು ಉಪನಿಷತ್ತೆ(ನಿಸುವದು). ಆದ್ದರಿಂದಲೇ ಮುಂದೆ (ಶ್ರುತಿಯು) "ಬ್ರಹ್ಮವನ್ನು ಹೊಂದಿ ಕಲ್ಮಷವಿಲ್ಲದವನೂ ಮೃತ್ಯುವಿಲ್ಲದವನೂ ಆದನು" (೨-೩-೧೮) ಎಂದು ಹೇಳುವದು

(ಭಾಷ್ಯ)

೪. ಲೋಕಾದಿರ್ಬ್ರಹ್ಮಜಜ್ಞೋ ಯೋಽಗ್ನಿಃ, ತದ್ವಿಷಯಾಯಾ ವಿದ್ಯಾಯಾ ದ್ವಿತೀಯೇನ ವರೇಣ ಪ್ರಾರ್ಥ್ಯಮಾನಾಯಾಃ ಸ್ವರ್ಗಲೋಕಫಲಪ್ರಾಪ್ತಿಹೇತುತ್ವೇನ ಗರ್ಭವಾಸಜನ್ಮಜರಾದ್ಯುಪದ್ರವವೃನ್ದಸ್ಯ ಲೋಕಾನ್ತರೇ ಪೌನಃಪುನ್ಯೇನ ಪ್ರವೃತ್ತಸ್ಯ ಅವಸಾದಯಿತೃತ್ವೇನ ಶೈಥಿಲ್ಯಾಪಾದನೇನ (ಚ?) ಧಾತ್ವರ್ಥಯೋಗಾತ್, ಅಗ್ನಿವಿದ್ಯಾಪಿ "ಉಪನಿಷದ್" ಇತ್ಯುಚ್ಯತೇ । ತಥಾ ಚ ವಕ್ಷ್ಯತಿ "ಸ್ವರ್ಗಲೋಕಾ ಅಮೃತತ್ವಂ ಭಜನ್ತೇ" (೧-೧-೧೩) ಇತ್ಯಾದಿ ॥

(ಭಾಷ್ಯಾರ್ಥ)

(ಇನ್ನು) ಲೋಕಕ್ಕೆಲ್ಲ ಮೊದಲನೆಯವನಾಗಿಯೂ ಬ್ರಹ್ಮನಿಂದ ಹುಟ್ಟಿದವನಾಗಿಯೂ (ಎಲ್ಲವನ್ನೂ) ತಿಳಿಯುವಾತನಾಗಿಯೂ [2] ಇರುವ **ಅಗ್ನಿ**ಯುಂಟಷ್ಟೆ [3], (ನಚಿಕೇತನು ತನಗೆ) ಎರಡನೆಯ ವರವೆಂದು ಪ್ರಾರ್ಥಿಸಿರುವ ಆ (ಅಗ್ನಿ)ವಿಷಯವಾದ ವಿದ್ಯೆಯು [4] **ಸ್ವರ್ಗಲೋಕ**ವೆಂಬ [5] ಫಲವು ದೊರಕುವದಕ್ಕೆ ಕಾರಣವಾಗಿರುವದರಿಂದಲೂ [6] ಅದಕ್ಕಿಂತ ಬೇರೆಯಾದ (ಭೂ)ಲೋಕದಲ್ಲಿ ಮತ್ತೆ ಮತ್ತೆ ಆಗುತ್ತಿರುವ ಗರ್ಭವಾಸ, ಹುಟ್ಟು, ಮುಪ್ಪು-ಮುಂತಾದ ಸಂಕಟಗಳ ಸಮೂಹವನ್ನು ಅವಸಾದನಮಾಡುವದರಿಂದಲೂ ಎಂದರೆ ಸಡಿಲಮಾಡುವದರಿಂದಲೂ [7] (ಸದ್)

---

1. ಇದು ಧಾತುವಿನ ಎರಡನೆಯ ಅರ್ಥವಾದ ಗತಿ ಎಂಬುದನ್ನು ತೆಗೆದುಕೊಂಡು ಬ್ರಹ್ಮವಿದ್ಯೆಗೆ ಉಪನಿಷತ್ತೆಂಬ ಹೆಸರು ಬಂದಿರುವ ಪ್ರಕಾರವನ್ನು ತಿಳಿಸುವದು.

2. ಈ ವಿಶೇಷಣಗಳು ೧-೧-೧೮, ೧-೧-೧೭ ಈ ಮಂತ್ರಗಳನ್ನು ಸೂಚಿಸುವವು.

3 ಅಗ್ನಿ ಎಂದರೆ ಇಲ್ಲಿ ವಿರಾಟ್ಪುರುಷನು. ಸಮಷ್ಟಿಸ್ಥೂಲೋಪಾಧಿಯುಳ್ಳ ಅಪರ ಬ್ರಹ್ಮ.

4 ಪರಬ್ರಹ್ಮವಿದ್ಯೆಯಂತೆ ಅಪರಬ್ರಹ್ಮವಿದ್ಯೆಯಾದ ಉಪಾಸನೆಯೂ ಉಪನಿಷತ್ತೆನಿಸುತ್ತದೆ ಎಂದು ಭಾವ.

5 ಇಲ್ಲಿ ಸ್ವರ್ಗಲೋಕವೆಂದರೆ ಅಪರಬ್ರಹ್ಮಲೋಕವು.

6 ಅಗ್ನಿವಿದ್ಯೆಯು ಸ್ವರ್ಗಲೋಕಕ್ಕೆ ಕಾರಣವಾಗಿರುವದರಿಂದ ಸದ್ ಧಾತುವಿನ 'ಗತಿ' ಎಂಬರ್ಥವನ್ನು ಇಟ್ಟುಕೊಂಡರೆ ಉಪನಿಷತ್ತೆಂಬ ಹೆಸರಿಗೆ ತಕ್ಕದ್ದೆಂದಾಗುವದೆಂದು ಭಾವ.

7 ಗರ್ಭವಾಸಾದಿಗಳು ಅಗ್ನಿವಿದ್ಯೆಯಿಂದ ಅತ್ಯಂತವಾಗಿ ಹೋಗದಿದ್ದರೂ ಅವು ಒಂದು ಕಲ್ಪದವರೆಗೆ ಇಲ್ಲದಂತೆ ಆಗುವವು; ಸ್ವರ್ಗಲೋಕದಲ್ಲಿ ಈ ದುಃಖಗಳಿಲ್ಲವಾದ್ದರಿಂದ ಇವನ್ನು ಅದು ಸಡಿಲಮಾಡುವದು ಎಂದಿರುತ್ತದೆ.

ಧಾತುವಿನ ಅರ್ಥವು (ಅಗ್ನಿ ವಿದ್ಯೆಗೂ) ಇರುವದರಿಂದ ಅಗ್ನಿ ವಿದ್ಯೆಯೂ ಉಪನಿಷತ್ತು ಎನಿಸುವದು. ಆದ್ದರಿಂದಲೇ ಮುಂದೆ (ಶ್ರುತಿಯು) "ಸ್ವರ್ಗಲೋಕ(ವನ್ನು ಪಡೆದವರು) ಅಮೃತತ್ವವನ್ನು[1] ಪಡೆಯುವರು" (೧-೧-೧೩) ಎಂದು ಮುಂತಾಗಿ (ಇದನ್ನೂ) ಹೇಳುವದು.

(ಭಾಷ್ಯ)

೫ ನನು ಚ ಉಪನಿಷಚ್ಛಬ್ದೇನ ಅಧ್ಯೇತಾರೋ ಗ್ರನ್ಥಮಪ್ಯಭಿಲಪನ್ತಿ "ಉಪನಿಷದಮ್ ಅಧೀಮಹೇ," (ಇತಿ) "(ಉಪನಿಷದಮ್)[2] ಅಧ್ಯಾಪಯಾಮಃ" ಇತಿ ಚೈವಮ್ । ನೈಷ ದೋಷಃ । ಅವಿದ್ಯಾದಿಸಂಸಾರಹೇತುವಿಶರಣಾದೇಃ ಸದಿಧಾತ್ವರ್ಥಸ್ಯ ಗ್ರನ್ಥಮಾತ್ರೇ ಅಸಮ್ಭವಾತ್, ವಿದ್ಯಾಯಾಂ ಚ ಸಮ್ಭವಾತ್ । ಗ್ರನ್ಥಸ್ಯಾಪಿ ತಾದರ್ಥ್ಯೇನ ತಚ್ಛಬ್ದತ್ವೋಪಪತ್ತೇಃ । "ಆಯುರ್ವೈ ಘೃತಮ್" (ತೈ. ಸಂ. ೨-೩-೧೧) ಇತ್ಯಾದಿವತ್ । ತಸ್ಮಾತ್, ವಿದ್ಯಾಯಾಂ ಮುಖ್ಯಯಾ ವೃತ್ತ್ಯಾ ಉಪನಿಷಚ್ಛಬ್ದೋ ವರ್ತತೇ । ಗ್ರನ್ಥೇತು ಭಕ್ತ್ಯಾ ಇತಿ ॥

(ಭಾಷ್ಯಾರ್ಥ)

(ಶಂಕೆ) —ಅಧ್ಯಯನಮಾಡುವವರು "ಉಪನಿಷತ್ತನ್ನು ಅಧ್ಯಯನಮಾಡುತ್ತಿದ್ದೇವೆ" ಎಂದೂ "(ಉಪನಿಷತ್ತನ್ನು) ಹೇಳಿಕೊಡುತ್ತಿದ್ದೇವೆ" ಎಂದೂ ಈ ಬಗೆಯಾಗಿ "ಉಪನಿಷತ್ತು" ಎಂಬ ಶಬ್ದದಿಂದ ಗ್ರಂಥವನ್ನೂ ಹೇಳುತ್ತಿರುವರಲ್ಲ!

(ಪರಿಹಾರ).—ಇದೇನೂ ತಪ್ಪಲ್ಲ ಏಕೆಂದರೆ ಅವಿದ್ಯೆಯೇ ಮುಂತಾದ ಸಂಸಾರಹೇತುಗಳನ್ನು ನಾಶಮಾಡುವದು ಮುಂತಾದ[3] 'ಸದ್' ಧಾತುವಿನ ಅರ್ಥವು ಬರಿಯ ಗ್ರಂಥಕ್ಕೆ ಹೊಂದುವಹಾಗಿಲ್ಲ, ಮತ್ತು ವಿದ್ಯೆಗೆ ಹೊಂದುತ್ತದೆ. (ಆದ್ದರಿಂದ ವಿದ್ಯೆಯೇ ನಿಜವಾದ ಉಪನಿಷತ್ತು); ಆ (ವಿದ್ಯೆಗೆ) ಕಾರಣವಾಗಿರುವದರಿಂದ ಗ್ರಂಥವೂ ಆ (ಉಪನಿಷತ್ತೆಂಬ) ಶಬ್ದದಿಂದ (ಕರೆಯಲ್ಪಡ)ಬಹುದಾಗಿದೆ. "ತುಪ್ಪವೇ ಆಯುಸ್ಸು" (ತೈ. ಸಂ. ೨-೩-೧೧) ಮುಂತಾದ (ಪ್ರಯೋಗಗ)ಳಂತೆಯೇ[4] (ಇದು) ಆದ್ದರಿಂದ ಉಪನಿಷತ್ತು ಎಂಬ ಶಬ್ದವು ವಿದ್ಯೆಯಲ್ಲಿ ಮುಖ್ಯ

---

1 ಇದು ಸಾಪೇಕ್ಷವಾದ ಅಮೃತತ್ವವು, ಇತರ ಲೋಕಗಳ ಮರ್ತ್ಯತ್ವಕ್ಕೆ ಹೋಲಿಸಿದರೆ ಬಹುಕಾಲ ಮರಣವಿಲ್ಲದೆ ಇರುವ ಸ್ಥಿತಿಯು.

2 ಈ ಮಾತು ವಾ॥ ಪಾಠದಲ್ಲಿ ಮಾತ್ರ ಇದೆ.

3 ಬ್ರಹ್ಮವನ್ನು ಪಡೆಯಿಸುವದು ಎಂಬರ್ಥವನ್ನು 'ಮುಂತಾದ' ಎಂಬದರಿಂದ ಗ್ರಹಿಸಬೇಕು.

4. ತುಪ್ಪವು ಆಯುಸ್ಸು ಎಂದರೆ ಆಯುಸ್ಸು ಹೆಚ್ಚುವದಕ್ಕೆ ಕಾರಣವಾಗಿರುವದು ಎಂದರ್ಥ; ಇದರಂತೆ 'ಗ್ರಂಥವು ಉಪನಿಷತ್ತು' ಎಂದರೆ ಉಪನಿಷತ್ತಿಗೆ, ವಿದ್ಯೆಗೆ, ಕಾರಣವಾದದ್ದು ಎಂದರ್ಥ.

ವೃತ್ತಿಯಿಂದ ಬಂದಿರುತ್ತದೆ; ಗ್ರಂಥದಲ್ಲಿಯೋ ಎಂದರೆ ಗೌಣವೃತ್ತಿಯಿಂದ (ಬಂದಿರುತ್ತದೆ ಎಂದು ನಿಶ್ಚಯಿಸಬೇಕು).

## ಉಪನಿಷತ್ತಿನ ಅನುಬಂಧಚತುಷ್ಟಯ

(ಭಾಷ್ಯ)

೬. ಏವಮ್ ಉಪನಿಷನ್ನಿರ್ವಚನೇನೈವ ವಿಶಿಷ್ಟೋಽಧಿಕಾರೀ ವಿದ್ಯಾಯಾಮ್ ಉಕ್ತಃ। ವಿಷಯಶ್ಚ ವಿಶಿಷ್ಟ ಉಕ್ತೋ ವಿದ್ಯಾಯಾಃ ಪರಂ ಬ್ರಹ್ಮ ಪ್ರತ್ಯಗಾತ್ಮಭೂತಮ್। ಪ್ರಯೋಜನಂ ಚಾಸ್ಯಾ (ಉಪನಿಷದಃ)[1] ಆತ್ಯನ್ತಿಕೀ ಸಂಸಾರನಿವೃತ್ತಿರ್ಬ್ರಹ್ಮಪ್ರಾಪ್ತಿಲಕ್ಷಣಾ। ಸಮ್ಬನ್ಧಶ್ಚೈವಂಭೂತಪ್ರಯೋಜನೇನ ಉಕ್ತಃ। ಅತೋ ಯಥೋಕ್ತಾಧಿಕಾರಿವಿಷಯಪ್ರಯೋಜನಸಮ್ಬನ್ಧಾಯಾ ವಿದ್ಯಾಯಾಃ ಕರತಲನ್ಯಸ್ತಾಮಲಕವತ್ ಪ್ರಕಾಶಕತ್ವೇನ ವಿಶಿಷ್ಟಾಧಿಕಾರಿವಿಷಯಪ್ರಯೋಜನಸಮ್ಬನ್ಧಾ ಏತಾ ವಲ್ಲ್ಯೋ ಭವನ್ತಿ। ಇತ್ಯತಸ್ತಾ ಯಥಾಪ್ರತಿಭಾನಂ ವ್ಯಾಚಕ್ಷ್ಮಹೇ ॥

(ಭಾಷ್ಯಾರ್ಥ)

ಈರೀತಿಯಲ್ಲಿ ಉಪನಿಷತ್ತೆಂದರೇನೆಂಬುದನ್ನು ಗೊತ್ತುಪಡಿಸಿ ಹೇಳಿದ್ದರಿಂದಲೇ ವಿದ್ಯೆಗೆ ತಕ್ಕ **ಅಧಿಕಾರಿ**[2] (ಯಾರೆಂಬುದನ್ನು) ಹೇಳಿದಂತಾಯಿತು. ಒಳಗಿನ ಆತ್ಮನಾಗಿರುವ ಪರಬ್ರಹ್ಮವೇ[3] ಇದಕ್ಕೆ ಅಸಾಧಾರಣ**ವಿಷಯ**ವೆಂದೂ ಹೇಳಿದಂತಾಯಿತು. ಈ (ಉಪನಿಷತ್ತಿಗೆ) ಬ್ರಹ್ಮಪ್ರಾಪ್ತಿರೂಪವಾದ ಆತ್ಯಂತಿಕವಾದ ಸಂಸಾರನಿವೃತ್ತಿಯೇ[4] **ಪ್ರಯೋಜನ**(ವೆಂದೂ ಹೇಳಿದಂತಾಯಿತು).[5] (ಉಪನಿಷತ್ತಿಗೂ) ಇಂಥ ಪ್ರಯೋಜನಕ್ಕೂ ಇರುವ **ಸಮ್ಬನ್ಧ**[6] ವನ್ನೂ ಹೇಳಿದಂತಾಯಿತು ಆದ್ದರಿಂದ ಹಿಂದೆ ಹೇಳಿದಂತೆ ಅಧಿಕಾರಿ, ವಿಷಯ, ಪ್ರಯೋಜನ,

---

1 ಈ ಮಾತು (ಅ॥) ಪಾಠದಲ್ಲಿ ಮಾತ್ರ ಇದೆ.

2. ಹಿಂದೆ ೨ನೇ ಭಾಷ್ಯದಲ್ಲಿ ಹೇಳಿರುವ ವಿಶೇಷಣಗಳುಳ್ಳವರೇ ಅಧಿಕಾರಿಗಳು-ಎಂದರ್ಥ.

3. ಕೇ. ಭಾ. ದ ಸಂಬಂಧಗ್ರಂಥ ಳವನ್ನು ನೋಡಿರಿ.

4 ಬ್ರಹ್ಮವನ್ನು ಜ್ಞಾನದಿಂದ ಪಡೆದುಕೊಂಡಲ್ಲದೆ ಸಂಸಾರವು ಮತ್ತೆ ಬರದಂತೆ ನಾಶವಾಗಲಾರದು. ಆದ್ದರಿಂದ ಬ್ರಹ್ಮವಿದ್ಯೆಗೆ ಸಂಸಾರನಿವೃತ್ತಿಯು ಅಸಾಧಾರಣಪ್ರಯೋಜನವು.

5 ಭಾ. ಭಾ. ೫ರಲ್ಲಿ ಇದನ್ನು ಹೇಳಿರುತ್ತದೆ.

6. ವಿದ್ಯೆಯು ಸಾಧನ, ಸಂಸಾರನಿವೃತ್ತಿಯು ಸಾಧ್ಯ; ಆದ್ದರಿಂದ ವಿದ್ಯೆಯೆಂಬ ಉಪನಿಷತ್ತಿಗೂ ಪ್ರಯೋಜನಕ್ಕೂ ಈ ಬಗೆಯ ಸಾಧನಸಾಧ್ಯಭಾವವು ಎಂದರೆ ಪ್ರಕಾಶಕಪ್ರಕಾಶ್ಯತ್ವವೆಂಬ ಸಂಬಂಧವು, ಇದೆ.

ಸಂಬಂಧ–ಇವುಗಳನ್ನುಳ್ಳ ವಿದ್ಯೆಯನ್ನು ಅಂಗೈಯಲ್ಲಿಟ್ಟ ನೆಲ್ಲಿಯಂತೆ[1] ಬೆಳಗಿಸುವದರಿಂದ ಈ ವಲ್ಲಿಗಳಿಗೆ[2] ಅಸಾಧಾರಣವಾದ ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧ–ಇವುಗಳು ಇದ್ದಂತಾಯಿತು. ಆದ್ದರಿಂದ[3] ಇವುಗಳನ್ನು ತಿಳಿದಮಟ್ಟಿಗೆ ವ್ಯಾಖ್ಯಾನಮಾಡುತ್ತೇವೆ.



---

1. ಪೂರ್ಣವಾಗಿ, ಸಂಶಯಕ್ಕೆ ಎಡೆಯಿಲ್ಲದಂತೆ.

2. ವಲ್ಲಿಗಳು ಕಠೋಪನಿಷತ್ತಿನ ಭಾಗಗಳು. ಗ್ರಂಥರೂಪವಾದ ಈ ಉಪನಿಷತ್ತು ವಿದ್ಯೆಯನ್ನು ತಿಳಿಸಿಕೊಡುತ್ತದೆ. ವಿದ್ಯೆಗೆ ಮೇಲೆ ಹೇಳಿದಂತೆ ಅಧಿಕಾರಿಯೇ ಮುಂತಾದ ಅನುಬಂಧಗಳಿವೆ. ಆದ್ದರಿಂದ ಗ್ರಂಥಕ್ಕೂ ಇವು ಇದ್ದಂತಾಯಿತೆಂದು ಭಾವ.

3. ಗ್ರಂಥವು ಯಾರಿಗೆ, ಏನನ್ನು ಹೇಳುವದು, ಯಾವ ಪ್ರಯೋಜನವನ್ನು ಕೊಡತಕ್ಕದ್ದು, ಗ್ರಂಥಕ್ಕೂ ಪ್ರಯೋಜನಾದಿಗಳಿಗೂ ಸಂಬಂಧವೇನು ?–ಎಂಬದನ್ನು ತಿಳಿಸುವದು ಅತ್ಯವಶ್ಯ. ಏಕೆಂದರೆ ಈ ಅನುಬಂಧಚತುಷ್ಟಯವಿಲ್ಲದಿದ್ದರೆ ಯಾರೂ ಗ್ರಂಥವನ್ನು ಓದಲಾರರು.

# ಒಂದನೆಯ ಅಧ್ಯಾಯ—ಒಂದನೆಯ ವಲ್ಲಿ

## ನಚಿಕೇತನು ಯಮನಬಳಿಗೆ ಹೋದದ್ದು

**ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂ ದದೌ ।**
**ತಸ್ಯ ಹ ನಚಿಕೇತಾ ನಾಮ ಪುತ್ರ ಆಸ ॥ ೧ ॥**

೧. ಬಯಸುವವನಾಗಿ ವಾಜಶ್ರವಸನು ಸರ್ವವೇದಸವನ್ನು ಕೊಟ್ಟ ನಂತೆ. ಅವನಿಗೆ ನಚಿಕೇತಸ್ಸೆಂಬ ಮಗನಿದ್ದನಂತೆ.

(ಭಾಷ್ಯ)

೭. ತತ್ರ ಆಖ್ಯಾಯಿಕಾ ವಿದ್ಯಾಸ್ತುತ್ಯರ್ಥಾ । ಉಶನ್ ಕಾಮಯಮಾನಃ ಹ ವೈ ಇತಿ ವೃತ್ತಾರ್ಥಸ್ಮರಣಾರ್ಥೌ ನಿಪಾತೌ । ವಾಜಮ್ ಅನ್ನಮ್ ತದ್ದಾನಾದಿ ನಿಮಿತ್ತಂ ಶ್ರವೋ ಯಶೋ ಯಸ್ಯ ಸ ವಾಜಶ್ರವಾಃ । ರೂಢಿತೋ ವಾ । ತಸ ಅಪತ್ಯಂ ವಾಜಶ್ರವಸಃ । ಸ ವಾಜಶ್ರವಸಃ[1] ಕಿಲ ವಿಶ್ವಜಿತಾ ಸರ್ವಮೇಧೇನ್ಯ ಈಜೇ । ತತ್ಫಲಂ ಕಾಮಯಮಾನಃ । ಸ ತಸ್ಮಿನ್ ಕ್ರತೌ ಸರ್ವವೇದಸಂ ಸರ್ವಸ್ವಂ ಧನಂ ದದೌ ದತ್ತವಾನ್ । ತಸ್ಯ ಯಜಮಾನಸ್ಯ ಹ ನಚಿಕೇತಾನಾಮ ಪುತ್ರಃ ಕಿಲ ಆಸ ಬಭೂವ ॥

(ಭಾಷ್ಯಾರ್ಥ)

ಇಲ್ಲಿ ಕಥೆ(ಯನ್ನು ಪ್ರಾರಂಭಿಸಿರುವದು) ವಿದ್ಯೆಯನ್ನು ಹೊಗಳುವದಕ್ಕೆ.[2] ಬಯಸುವವನಾಗಿ ಎಂದರೆ (ಫಲವನ್ನು) ಇಚ್ಛಿಸುವವನಾಗಿ (ಮೂಲದಲ್ಲಿ) 'ಹ', 'ವಾ'—ಎಂಬಿವೆರಡೂ ಹಿಂದೆ ನಡೆದ ವಿಷಯವನ್ನು ನೆನಪುಕೊಡುವ ನಿಪಾತಗಳು.[3] ವಾಜವೆಂದರೆ ಅನ್ನವು, ಅದನ್ನು ದಾನಮಾಡುವದೇ ಮುಂತಾದ ನಿಮಿತ್ತದಿಂದ (ಬಂದ) ಶ್ರವ ಎಂದರೆ ಹೆಸರುವಾಸಿಯನ್ನುಳ್ಳವನಾದ್ದರಿಂದ ವಾಜಶ್ರವಸ್ಸು (ಎಂದು

---

1. "ಸ ವಾಚಶ್ರವಸಃ" ಎಂಬ ಮಾತುಗಳು (ವಾ॥) ಪಾಠದಲ್ಲಿವೆ

2. ಈ ಬ್ರಹ್ಮವಿದ್ಯೆಯನ್ನು ಅಧಿಕಾರಿಕಪುರುಷನಾದ ಯಮನು ಹೇಳಿರುತ್ತಾನೆ. ಶ್ರದ್ಧಾವಂತನೂ ವಿರಕ್ತನೂ ಆದ ನಚಿಕೇತಸ್ಸು ಶ್ರವಣಮಾಡಿ ಮುಕ್ತನಾಗಿರುತ್ತಾನೆ. ಇಂಥ ಹೆಚ್ಚಿನ ಮಹಿಮೆಯದೀವಿದ್ಯೆ—ಎಂದು ವಿದ್ಯೆಯನ್ನು ಹೊಗಳುವದಕ್ಕೆ.

3. ಹ ವಾ ಎಂಬಿವು ಅಂತೆ ಎಂಬರ್ಥದ ನಿಪಾತಗಳು ಎಂದರ್ಥ.

(ಭಾಷ್ಯ)

೧೭೭. ತತ್ರಾಪಿ ಉಭಯೋಃ ಸೋಪಾಧಿಕನಿರುಪಾಧಿಕಯೋಃ ಅಸ್ತಿತ್ವ ತತ್ತ್ವಭಾವಯೋಃ । ನಿರ್ಧಾರಣಾರ್ಥಾ ಷಷ್ಠೀ । ಪೂರ್ವಮ್ "ಅಸ್ತಿ" ಇತ್ಯೇವೋಪಲಬ್ಧಸ್ಯ ಆತ್ಮನಃ । ಸತ್ಕಾರ್ಯೋಪಾಧಿಕೃತಾಸ್ತಿತ್ವಪ್ರತ್ಯಯೇನೋಪಲಬ್ಧಸ್ಯ ಇತ್ಯರ್ಥಃ । ಪಶ್ಚಾತ್ ಪ್ರತ್ಯಸ್ತಮಿತಸರ್ವೋಪಾಧಿರೂಪಃ ಆತ್ಮನಃ ತತ್ತ್ವಭಾವಃ ವಿದಿತಾವಿದಿತಾಭ್ಯಾಮನ್ಯಃ, ಅದ್ವಯಸ್ವಭಾವಃ, "ನೇತಿ ನೇತಿ" (ಬೃ. ೨-೩-೬) "ಅಸ್ಥೂಲಮನಣ್ವಹ್ರಸ್ವಮ್" (ಬೃ ೩-೮-೮), "ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇ" (ತೈ. ೨-೭) ಇತ್ಯಾದಿಶ್ರುತಿನಿರ್ದಿಷ್ಟಃ ಪ್ರಸೀದತಿ ಅಭಿಮುಖೀಭವತಿ ಆತ್ಮಪ್ರಕಾಶನಾಯ । ಪೂರ್ವಮ್ "ಅಸ್ತಿ" ಇತ್ಯುಪಲಬ್ಧವತಃ ಇತ್ಯೇತತ್ ॥

(ಭಾಷ್ಯಾರ್ಥ)

ಅದರಲ್ಲಿಯೂ ಉಪಾಧಿಗಳಿಂದ ಕೂಡಿದ ಅಸ್ತಿಭಾವ, ಉಪಾಧಿಗಳಿಲ್ಲದ ತತ್ತ್ವಭಾವ ಈ ಎರಡರಲ್ಲಿ–ಉಭಯೋಃ ಎಂಬ ಷಷ್ಠಿಯು (ಎರಡರೊಳಗೆ ಇಂಥದ್ದೆಂದು) ಗೊತ್ತುಮಾಡುವದಕ್ಕಾಗಿ ಬಂದಿರುತ್ತದೆ–ಮೊದಲು "ಇದಾನೆ" ಎಂದು ತಿಳಿಯಲ್ಪಟ್ಟವನ, ಸತ್ಕಾರ್ಯವಾದ ಉಪಾಧಿಗಳಿಂದಾಗಿರುವ ಇರುವನೆಂಬ ಪ್ರತ್ಯಯದಿಂದ ತಿಳಿಯಲ್ಪಟ್ಟ ಆತ್ಮನ ಎಂದರ್ಥ. ಆಮೇಲೆ ಯಾವ ಉಪಾಧಿಗಳೂ ಇಲ್ಲವಾದ ಆತ್ಮನ ತತ್ತ್ವಭಾವವು, ತಿಳಿಯತಕ್ಕದ್ದು ತಿಳಿಯುವದಕ್ಕೆ ಬಾರದೆ ಇರುವದು–ಇವುಗಳಿಗಿಂತ ಬೇರೆಯಾದ,[2] ಅದ್ವಯಸ್ವಭಾವವಾದ, "ಇದಲ್ಲ ಇದಲ್ಲ" (ಬೃ. ೨-೩-೬), "ಸ್ಥೂಲವಲ್ಲ, ಅಣುವಲ್ಲ, ಹ್ರಸ್ವವಲ್ಲ" (ಬೃ ೩-೮-೮), "ಅದೃಶ್ಯವಾದ, ಅನಾತ್ಮವಾದ, ಅನಿರುಕ್ತವಾದ, ಅನಿಲಯನವಾದ" (ತೈ. ೨-೭) ಮುಂತಾದ ಶ್ರುತಿಗಳಿಂದ ತಿಳಿಸಿರುವದಾದ (ಆತ್ಮನ ತತ್ತ್ವಭಾವವು) ಪ್ರಸನ್ನವಾಗುವದು, ತಾನೇ ತೋರಿಕೊಳ್ಳುವದಕ್ಕೆ ಅಭಿಮುಖವಾಗುವದು. ಮೊದಲು ಇದಾನೆ ಎಂದು ತಿಳಿದುಕೊಂಡವನಿಗೆ (ಈ ಭಾವವು ಪ್ರಸನ್ನವಾಗುವದು) ಎಂದರ್ಥ.

**ಯದಾ ಸರ್ವೇ ಪ್ರಮುಚ್ಯನ್ತೇ**
**ಕಾಮಾ ಯೇಽಸ್ಯ ಹೃದಿ ಶ್ರಿತಾಃ ।**

---

1. ಸತ್ತೆಂದರೆ ಬ್ರಹ್ಮವು, ಅದರಿಂದುಂಟಾಗಿರುವ ಬುದ್ಧಿಯೇ ಮುಂತಾದ ಉಪಾಧಿಗಳಿಂದ ಕೂಡಿದ ರೂಪವು 'ಇದಾನೆ' ಎಂದೇ ತಿಳಿದುಬರುತ್ತದೆ.

2. ಕೇ. ೧-೪. ಸೋಪಾಧಿಕವಾದ ಅಸ್ತಿಭಾವವು ಅರಿವಿಗೆ ವಿಷಯ, ನಿರುಪಾಧಿಕವಾದ ತತ್ತ್ವಭಾವವು ಅನುಭವೈಕಗಮ್ಯ.

**ಅಥ ಮರ್ತ್ಯೋಽಮೃತೋಽಭವ-**
**ತ್ಯತ್ರ ಬ್ರಹ್ಮ ಸಮಶ್ನುತೇ ॥ ೧೪ ॥**

೧೪. ಯಾವಾಗ ಈತನ ಹೃದಯದಲ್ಲಿ ಆಶ್ರಯಿಸಿಕೊಂಡಿದ್ದ ಕಾಮಗಳು ಬಿಡುಗಡೆಯಾಗುವವೋ ಆಗ ಮರ್ತ್ಯನಾಗಿದ್ದವನು ಅಮೃತನಾಗುವನು, ಇಲ್ಲಿಯೇ ಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ.

(ಭಾಷ್ಯ)

೧೭೮. ಏವಂ ಪರಮಾರ್ಥಾತ್ಮದರ್ಶಿನೋ ಯದಾ ಯಸ್ಮಿನ್ ಕಾಲೇ ಸರ್ವೇ **ಕಾಮಾಃ** ಕಾಮಯಿತವ್ಯಸ್ಯ ಅನ್ಯಸ್ಯ ಅಭಾವಾತ್ ಪ್ರಮುಚ್ಯನ್ತೇ ವಿಶೀರ್ಯನ್ತೇ **ಯೇ ಅಸ್ಯ** ಪ್ರಾಕ್ ಪ್ರತಿಬೋಧಾತ್ ವಿದುಷೋ ಹೃದಿ ಬುದ್ಧೌ ಶ್ರಿತಾಃ ಆಶ್ರಿತಾಃ । ಬುದ್ಧಿರ್ಹಿ ಕಾಮಾನಾಮ್ ಆಶ್ರಯಃ ನಾತ್ಮಾ । "ಕಾಮಃ ಸಙ್ಕಲ್ಪಃ" (ಬೃ. ೧-೫-೩) ಇತ್ಯಾದಿಶ್ರುತ್ಯನ್ತರಾಚ್ಚ । **ಅಥ** ತದಾ **ಮರ್ತ್ಯಃ** ಪ್ರಾಕ್‌ಪ್ರಬೋಧಾದಾಸೀತ್ ಸಃ ಪ್ರಬೋಧೋತ್ತರಕಾಲಮ್ ಅವಿದ್ಯಾಕಾಮಕರ್ಮಲಕ್ಷಣಸ್ಯ ಮೃತ್ಯೋರ್ವಿನಾಶಾತ್ **ಅಮೃತೋ ಭವತಿ** । ಗಮನಪ್ರಯೋಜಕಸ್ಯ ಮೃತ್ಯೋರ್ವಿನಾಶಾದ್ಗಮನಾನುಪಪತ್ತೇಃ । ಇಹೈವ ಪ್ರದೀಪನಿರ್ವಾಣವತ್ ಸರ್ವಬನ್ಧನೋಪಶಮನಾತ್ **ಬ್ರಹ್ಮ ಸಮಶ್ನುತೇ** । ಬ್ರಹ್ಮೈವ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆ ಪರಮಾರ್ಥವಾದ ಆತ್ಮನನ್ನು [1] ಕಂಡುಕೊಂಡ ಈ ಜ್ಞಾನಿಗೆ ಜ್ಞಾನವಾಗುವದಕ್ಕೆ ಮೊದಲು ಹೃದಯವನ್ನು ಎಂದರೆ ಬುದ್ಧಿಯನ್ನು ಆಶ್ರಯಿಸಿಕೊಂಡಿದ್ದ ಕಾಮಗಳೆಲ್ಲ–ಬುದ್ಧಿಯೇ ಕಾಮಗಳಿಗೆ ಆಶ್ರಯವಲ್ಲದೆ ಆತ್ಮನಲ್ಲ; [2] "ಕಾಮ, ಸಂಕಲ್ಪ (ಮುಂತಾದದ್ದೆಲ್ಲ ಬುದ್ಧಿಯೇ)" (ಬೃ. ೧-೫-೩) ಎಂಬ ಬೇರೆಯ ಶ್ರುತಿಯೂ ಇದಕ್ಕೆ ಪ್ರಮಾಣವು (ಈ ಕಾಮಗಳು)–ಯಾವಾಗ ಬಯಸತಕ್ಕ ಮತ್ತೊಂದು ಪದಾರ್ಥವೇ ಇಲ್ಲದ್ದರಿಂದ [3] ಬಿಡುಗಡೆಯಾಗುವವೋ ಎಂದರೆ ನಾಶವಾಗಿಬಿಡುವವೋ ಆಗ **ಜ್ಞಾನಕ್ಕಿಂತ ಮೊದಲು ಮರ್ತ್ಯನಾಗಿದ್ದನಲ್ಲ, ಅವನು ಜ್ಞಾನ**

1. ತತ್ತ್ವಭಾವವನ್ನು, ಆತ್ಮನ ನಿರುಪಾಧಿಕರೂಪವನ್ನು.

2. ಬೃ ೪-೩-೨೨, ೪-೪-೭ ರ ಭಾಷ್ಯವನ್ನು ನೋಡಿರಿ. ಕಾಮವು ಆತ್ಮನ ಧರ್ಮವೆಂಬ ವೈಶೇಷಿಕರ ಮತ್ತು ಕೆಲವರು ವೇದಾಂತಿಗಳ ವಾದವನ್ನು ಇಲ್ಲಿ ತಿರಸ್ಕರಿಸಿದೆ.

3. ಅವಿದ್ಯೆಯಿಂದ ಕಾಮಗಳು ತೋರುವವು, ಅವು ಜ್ಞಾನದಿಂದ ಅವಿದ್ಯೆಯು ನಾಶವಾದಾಗ ಇರುವದಿಲ್ಲ. ಬೃ. ಭಾ. ೪-೩-೨೧.

**ವುಂಟಾದ ಬಳಿಕ ಅವಿದ್ಯೆ, ಕಾಮ, ಕರ್ಮ,–ಎಂಬ ಮೃತ್ಯುವು ನಾಶವಾದ ದ್ದರಿಂದ ಅಮೃತನಾಗುವನು.** (ದೇಹವನ್ನು ಬಿಟ್ಟು) ಹೊರಟುಹೋಗುವದಕ್ಕೆ ಕಾರಣವಾದ ಮೃತ್ಯುವೇ ನಾಶವಾಗಿರುವದರಿಂದ (ದೇಹವನ್ನು) ಬಿಟ್ಟು ಹೋಗುವ ದೆಂಬುದು ಇವನಿಗೆ ಹೊಂದುವದಿಲ್ಲ[1] **ಇಲ್ಲಿಯೇ ದೀಪವು ಆರಿಹೋದಂತೆ[2] ಎಲ್ಲಾ ಬಂಧಗಳೂ ನಾಶವಾಗಿಬಿಡುವದರಿಂದ, ಬ್ರಹ್ಮವನ್ನು ಪಡೆದುಕೊಳ್ಳು ತ್ತಾನೆ, ಎಂದರೆ ಬ್ರಹ್ಮವೇ ಆಗುತ್ತಾನೆ** ಎಂದರ್ಥ.

**ಯದಾ ಸರ್ವೇ ಪ್ರಭಿದ್ಯನ್ತೇ**
**ಹೃದಯಸ್ಯೇಹ ಗ್ರನ್ಥಯಃ ।**
**ಅಥ ಮರ್ತ್ಯೋಽಮೃತೋ ಭವ-**
**ತ್ಯೇತಾವದ್ಧ್ಯನುಶಾಸನಮ್ ॥ ೧೫ ॥**

೧೫. ಯಾವಾಗ ಹೃದಯದ ಗ್ರಂಥಿಗಳೆಲ್ಲ ಇಲ್ಲಿಯೇ ಭಿನ್ನವಾಗು ವವೋ ಆಗ ಮರ್ತ್ಯನು ಅಮೃತನಾಗುವನು. ಇಷ್ಟೇ ಅನುಶಾಸನವು.

(ಭಾಷ್ಯ)

೧೭೯ ಕದಾ ಪುನಃ ಕಾಮಾನಾಂ ಮೂಲತೋ ವಿನಾಶ ಇತಿ? ಉಚ್ಯತೇ– ಯದಾ ಸರ್ವೇ ಪ್ರಭಿದ್ಯನ್ತೇ ಭೇದಮ್ ಉಪಯಾನ್ತಿ ವಿನಶ್ಯನ್ತಿ ಹೃದಯಸ್ಯ ಬುದ್ಧೇಃ ಇಹ ಜೀವತ ಏವ ಗ್ರನ್ಥಯೋ ಗ್ರನ್ಥಿವದ್ ದೃಢಬನ್ಧನರೂಪಾ ಅವಿದ್ಯಾ ಪ್ರತ್ಯಯಾಃ ಇತ್ಯರ್ಥಃ । "ಅಹಮಿದಂ ಶರೀರಮ್", "ಮಮೇದಂ ಧನಮ್", "ಸುಖೀ ದುಃಖೀ ಚಾಹಮ್" ಇತ್ಯೇವಮಾದಿಲಕ್ಷಣಾಃ ತದ್ವಿಪರೀತಾತ್ ಬ್ರಹ್ಮಾತ್ಮ ಪ್ರತ್ಯಯೋಪಜನನಾತ್ "ಬ್ರಹ್ಮೈವಾಹಮಸ್ಮಿ ಅಸಂಸಾರೀ" ಇತಿ ವಿನಷ್ಟೇಷು ಅವಿದ್ಯಾಗ್ರನ್ಥಿಷು ತನ್ನಿಮಿತ್ತಾಃ ಕಾಮಾ ಮೂಲತೋ ವಿನಶ್ಯನ್ತಿ। ಅಥ ಮರ್ತ್ಯೋಽಮೃತೋ ಭವತಿ । ಏತಾವದ್ ಹಿ ಏತಾವದೇವ ಏತಾವನ್ಮಾತ್ರಂ ನಾಧಿಕಮಸ್ತೀತ್ಯಾಶಙ್ಕಾ ಕರ್ತವ್ಯಾ । ಅನುಶಾಸನಮ್ ಅನುಶಿಷ್ಟಿಃ ಉಪದೇಶಃ ಸರ್ವವೇದಾನ್ತಾನಾಮ್ ಇತಿ ವಾಕ್ಯಶೇಷಃ ॥

---

1 ಬ್ರಹ್ಮವನ್ನು ಪಡೆಯುವದಕ್ಕೆ ಹೋಗಬೇಕಾದದ್ದಿಲ್ಲ, ಸೂ. ಭಾ. ೪-೩-೧೪, ಅಕಾಮಿಯಾದ ಜ್ಞಾನಿಗೆ ಗತಿಯಾಗಲಿ ಉತ್ಕ್ರಾಂತಿಯಾಗಲಿ ಇಲ್ಲ. ಬೃ. ಭಾ. ೪-೪-೬, ಸೂ. ಭಾ. ೪-೨-೧೨, ೧೩, ೧೪.

2 ವ್ಯಕ್ತವಾಗಿದ್ದ ದೀಪವು ಅವ್ಯಕ್ತವಾದ ತೇಜಸ್ಸಿನಲ್ಲಿ ಸೇರಿಹೋಗುವಂತೆ, ಮು. ಭಾ. ೩-೨-೬, ಬೃ. ೩-೩ರ ಸಂಬಂಧಭಾಷ್ಯ.

(ಭಾಷ್ಯಾರ್ಥ)

ಹಾಗಾದರೆ ಕಾಮಗಳು ಬೇರುಸಹಿತ ಯಾವಾಗ ನಾಶವಾಗುವವು ? ಎಂದರೆ ಹೇಳುತ್ತಾನೆ ಯಾವಾಗ ಹೃದಯದ ಎಂದರೆ ಬುದ್ಧಿಯ ಗ್ರಂಥಿಗಳೆಲ್ಲ, ಗಂಟುಗಳಂತೆ ಗಟ್ಟಿಯಾಗಿ ಕಟ್ಟು ಬಿದ್ದಿರುವ ಅವಿದ್ಯೆಯ ಪ್ರತ್ಯಯಗಳೆಲ್ಲ ಎಂದರ್ಥ. 'ನಾನು ಈ ಶರೀರವು', 'ನನ್ನದೀ ಧನವು', 'ನಾನು ಸುಖಿಯು, ದುಃಖಿಯು–ಎಂದು ಮುಂತಾಗಿರುವ (ಅರಿವುಗಳೆಲ್ಲ) ಇದಕ್ಕೆ ವಿರುದ್ಧವಾಗಿರುವ 'ಅಸಂಸಾರಿಯಾದ ಬ್ರಹ್ಮವೇ ನಾನು' ಎಂಬ **ಬ್ರಹ್ಮಾತ್ಮಪ್ರತ್ಯಯವು ಹುಟ್ಟಿ ಅವಿದ್ಯಾಗ್ರಂಥಿಗಳು ಯಾವಾಗ ಭಿನ್ನವಾಗುವವೋ ಎಂದರೆ ಭೇದವನ್ನು ಹೊಂದುವವೋ ನಾಶವಾಗುವವೋ, ಆಗ ಆ (ಗ್ರಂಥಿ)ಗಳಿಂದ ಆಗಿದ್ದ ಕಾಮಗಳು ಬೇರು ಸಹಿತವಾಗಿ[1] ನಾಶವಾಗುತ್ತವೆ.** ಆಗ ಮರ್ತ್ಯನು ಅಮೃತನಾಗುವನು. ಇಷ್ಟೇ ಅನುಶಾಸನವು. ಇಷ್ಟೇ ಇಷ್ಟುಮಟ್ಟಿಗೇ ಹೊರತು ಇನ್ನೂ ಹೆಚ್ಚಾಗಿ (ತಿಳಿಯತಕ್ಕದ್ದು) ಇದೆ ಎಂದು ಶಂಕಿಸಬಾರದು. ಅನುಶಾಸನವೆಂದರೆ ತಿಳಿಸಿಕೊಡುವದು, ಉಪದೇಶವು. 'ಎಲ್ಲಾ ವೇದಾಂತಗಳೂ' (ತಿಳಿಸಿಕೊಡುವದು ಇಷ್ಟೇ)[2] ಎಂದು ಈ ವಾಕ್ಯಕ್ಕೆ ಸೇರಿಸಿಕೊಳ್ಳಬೇಕು.

(ಭಾಷ್ಯ)

೧೮೦ ನಿರಸ್ತಾಶೇಷವಿಶೇಷವ್ಯಾಪಿಬ್ರಹ್ಮಾತ್ಮಪ್ರತಿಪತ್ತ್ಯಾ ಪ್ರಭಿನ್ನಸಮಸ್ತಾವಿದ್ಯಾಗ್ರನ್ಥೇಃ ಜೀವತ ಏವ ಬ್ರಹ್ಮಭೂತಸ್ಯ ವಿದುಷೋ ನ ಗತಿರ್ವಿದ್ಯತೇ ಇತ್ಯುಕ್ತಮ್ "ಅತ್ರ ಬ್ರಹ್ಮ ಸಮಶ್ನುತೇ" (೨-೩-೧೪) ಇತ್ಯುಕ್ತತ್ವಾತ್, "ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ. ೪-೪-೬) ಇತಿ ಶ್ರುತ್ಯನ್ತರಾಚ್ಚ । ಯೇ ಪುನರ್ಮನ್ದಬ್ರಹ್ಮವಿದೋ ವಿದ್ಯಾನ್ತರಶೀಲಿನಶ್ಚ ಬ್ರಹ್ಮಲೋಕಭಾಜೋ ಯೇ ಚ ತದ್ವಿಪರೀತಾಃ ಸಂಸಾರಭಾಜಃ, ತೇಷಾಮೇಷ ಗತಿವಿಶೇಷ ಉಚ್ಯತೇ ಪ್ರಕೃತೋತ್ಕೃಷ್ಟಬ್ರಹ್ಮವಿದ್ಯಾಫಲಸ್ತುತಯೇ । ಕಿಂ ಚಾನ್ಯತ್–ಅಗ್ನಿವಿದ್ಯಾಪೃಷ್ಟಾ ಪ್ರತ್ಯುಕ್ತಾ ಚ । ತಸ್ಯಾಶ್ಚ ಫಲಪ್ರಾಪ್ತಿಪ್ರಕಾರೋ ವಕ್ತವ್ಯಃ ಇತಿ ಮನ್ತ್ರಾರಮ್ಭಃ ॥

(ಭಾಷ್ಯಾರ್ಥ)

**ಯಾವ ವಿಶೇಷಗಳೂ ಇಲ್ಲದೆ ವ್ಯಾಪಿಯಾಗಿರುವ ಬ್ರಹ್ಮಾತ್ಮನ ಜ್ಞಾನದಿಂದ ಅವಿದ್ಯೆಯೇ ಮುಂತಾದ ಎಲ್ಲಾ ಗ್ರಂಥಿಗಳನ್ನೂ ಬಿಚ್ಚಿಕೊಂಡು ಬದುಕಿರು**

---

1 ಅವಿದ್ಯೆಯೇ, ಆತ್ಮಾನಾತ್ಮಾಧ್ಯಾಸವೇ, ಕಾಮಗಳಿಗೆ ಬೇರು. ಮು. ಭಾ. ೨-೨-೮. ಈ ಅವಿದ್ಯೆಯು ಮರೆಯಾದರೆ ಸಾಲದು, ಜ್ಞಾನದಿಂದ ಬಾಧಿತವಾಗಬೇಕು.

2 ಅವಿದ್ಯಾಕಾಮಗಳು ಹೋದರೆ ಜೀವನು ತನ್ನ ನಿತ್ಯವಾದ ಬ್ರಹ್ಮಸ್ವಭಾವವನ್ನು ಕಂಡುಕೊಳ್ಳುವನು ಎಂಬುದೇ ಎಲ್ಲಾ ಉಪನಿಷತ್ತುಗಳ ಉಪದೇಶವು. ಪ್ರ. ೬-೭. ಬ್ರಹ್ಮಜ್ಞಾನವಾದಮೇಲೆ ಮಾಡತಕ್ಕದ್ದಾಗಲಿ ತಿಳಿಯತಕ್ಕದ್ದಾಗಲಿ ಇರುವದಿಲ್ಲ. ಗೀ. ೧೫-೨೦

**ವಾಗಲೇ ಬ್ರಹ್ಮವಾಗಿರುವ ಜ್ಞಾನಿಗೆ (ಶರೀರವನ್ನು ಬಿಟ್ಟು) ಹೋಗುವ ದೆಂಬುದು ಇಲ್ಲ**-ಎಂದು ಮೇಲೆ ಹೇಳಿರುತ್ತದೆ ಏಕೆಂದರೆ "ಇಲ್ಲಿಯೇ ಬ್ರಹ್ಮ ವನ್ನು ಪಡೆದುಕೊಳ್ಳುತ್ತಾನೆ" (೨-೩-೧೪) ಎಂದು (ಈ ಮೊದಲೇ) ಹೇಳಿರುತ್ತದೆ. "ಅವನ ಪ್ರಾಣಗಳು (ಶರೀರವನ್ನು ಬಿಟ್ಟು) ಹೋಗುವದಿಲ್ಲ, ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಲಯವಾಗುವನು" (ಬೃ. ೪-೪-೬) ಎಂಬ ಬೇರೊಂದು ಶ್ರುತಿಯ ಪ್ರಮಾಣವಿರುವದರಿಂದಲೂ (ಇದೇ ನಿರ್ಣಯವಾಗಿರುತ್ತದೆ).

ಆದರೆ ಯಾರು ಕಡಿಮೆಯ ಬ್ರಹ್ಮವನ್ನು [1] ತಿಳಿದವರಾಗಿರುವರೋ ಬೇರೆ ಬಗೆಯ ವಿದ್ಯೆಯನ್ನು [2] ಅನುಷ್ಠಾನಮಾಡುತ್ತಿದ್ದು ಬ್ರಹ್ಮಲೋಕವನ್ನು ಪಡೆಯುವವ ರಾಗಿರುತ್ತಾರೋ ಮತ್ತು ಯಾರು ಅವರಿಗೆ ವಿರುದ್ಧವಾಗಿ ಸಂಸಾರವನ್ನು ಹೊಂದು ವವರಾಗಿರುವರೋ [3] ಅವರಿಗೆ (ಆಗುವ) ಗತಿ ಎಂಥದ್ದೆಂಬುದನ್ನು (ಇಲ್ಲಿ) ಪ್ರಕೃತ ವಾಗಿರುವ ಪರಬ್ರಹ್ಮವಿದ್ಯೆಯ ಫಲವನ್ನು ಹೊಗಳುವದಕ್ಕಾಗಿ (ಮುಂದಿನ ಮಂತ್ರ ದಲ್ಲಿ) ಹೇಳಲಾಗುತ್ತದೆ. ಇದೂ ಅಲ್ಲದೆ ಹಿಂದೆ ಅಗ್ನಿವಿದ್ಯೆಯನ್ನು ಕೇಳಿದ್ದಾಗಿದೆ, ಅದಕ್ಕೆ ಉತ್ತರವನ್ನು ಹೇಳಿದ್ದೂ ಆಗಿದೆಯಷ್ಟೆ. ಅದರ ಫಲವನ್ನು ಹೊಂದುವ ಪ್ರಕಾರವನ್ನೂ [4] ಹೇಳಬೇಕಾಗಿದೆ ಆದ್ದರಿಂದಲೂ (ಈ ಮುಂದಿನ) ಮಂತ್ರವು ಆರಂಭವಾಗಿರುತ್ತದೆ

**ಶತಂ ಚೈಕಾ ಚ ಹೃದಯಸ್ಯ ನಾಡ್ಯ**
**ಸ್ತಾಸಾಂ ಮೂರ್ಧಾನಮಭಿನಿಸ್ಸೃತೈಕಾ ।**
**ತಯೋರ್ಧ್ವಮಾಯನ್ನಮೃತತ್ವಮೇತಿ**
**ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ ॥ ೧೬ ॥**

೧೬. ಹೃದಯಕ್ಕೆ ನೂರು ಮತ್ತೊಂದು ನಾಡಿಗಳಿವೆ. ಅವುಗಳಲ್ಲಿ ಒಂದು ನೆತ್ತಿಯ (ಆ) ಕಡೆಗೆ ಹೊರಟಿರುವದು. ಅದರಿಂದ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಹೊಂದುತ್ತಾನೆ. ಎಲ್ಲಾ ಕಡೆಗೂ ಹೋಗಿರುವ ಉಳಿದವು ಉತ್ಕ್ರಮಣಕ್ಕೆ ಆಗುವವು.

---

1 ಉಪಾಸನೆಮಾಡಬೇಕಾಗಿರುವ ಬ್ರಹ್ಮವು ಅಪರಬ್ರಹ್ಮ, ಕಡಿಮೆಯ ಬ್ರಹ್ಮ. ಪ್ರ ಭಾ. ೫, ಸೂ. ಭಾ ೪-೩-೧೪

2 ಪಂಚಾಗ್ನಿವಿದ್ಯೆಯೇ ಮುಂತಾದವುಗಳನ್ನು ಅಭ್ಯಾಸಮಾಡಿದವರಿಗೂ ಬ್ರಹ್ಮಲೋಕ ಪ್ರಾಪ್ತಿಯುಂಟೆಂದು ಶಾಸ್ತ್ರದಲ್ಲಿ ಹೇಳಿದೆ, ಛಾ. ೫-೧೦-೨ ಸೂ. ಭಾ. ೪-೩-೧೫.

3. ಬರಿಯ ಪುಣ್ಯಕರ್ಮವನ್ನು ಮಾಡಿದವರು ಕರ್ಮಫಲವನ್ನೂ ಅನುಭವಿಸಿ ಸಂಸಾ ರಕ್ಕೆ ಹಿಂತಿರಳುವರು; ಪಾಪಕರ್ಮವನ್ನು ಮಾಡಿದವರು ಅಧೋಗತಿಗೆ ಹೋಗುವರು.

4 ಅಗ್ನಿವಿದ್ಯೆಗೆ ವಿರಾಟ್ಪುರುಷನ ಲೋಕವೇ ಫಲವು; ಆದರೆ ಆ ಫಲವನ್ನು ಉಪಾಸ ಕನು ಹೊಂದುವ ಪ್ರಕಾರವು ಯಾವದು?-ಎಂಬುದನ್ನು ಇಲ್ಲಿ ಹೇಳಲಾಗುತ್ತದೆ.

(ಭಾಷ್ಯ)

೧೮೧. ತತ್ರ ಶತಂ ಚ ಶತಸಙ್ಖ್ಯಾಕಾಃ ಏಕಾ ಚ ಸುಷುಮ್ನಾ ನಾಮ ಪುರುಷಸ್ಯ ಹೃದಯಾದ್ವಿನಿಸ್ಸೃತಾಃ ನಾಡ್ಯಃ ಸಿರಾಃ । ತಾಸಾಂ ಮಧ್ಯೇ ಮೂರ್ಧಾನಂ ಭಿತ್ತ್ವಾ ಅಭಿನಿಸ್ಸೃತಾ ನಿರ್ಗತಾ ಏಕಾ ಸುಷುಮ್ನಾ ನಾಮ । ತಯಾ ಅನ್ತಕಾಲೇ ಹೃದಯೇ ಆತ್ಮಾನಂ ವಶೀಕೃತ್ಯ ಯೋಜಯೇತ್ । ತಯಾ ನಾಡ್ಯಾ ಊರ್ಧ್ವಮ್ ಉಪರಿ ಆಯನ್ ಗಚ್ಛನ್ ಆದಿತ್ಯದ್ವಾರೇಣ ಅಮೃತತ್ವಮ್ ಅಮರಣಧರ್ಮತ್ವಮ್ ಆಪೇಕ್ಷಿಕಮ್ । " ಆಭೂತಸಮ್ಪ್ಲವಂ ಸ್ಥಾನಮಮೃತತ್ವಂ ಹಿ ಭಾಷ್ಯತೇ " (ವಿ. ಪು. ೨-೮-೯೭) ಇತಿ ಸ್ಮೃತೇಃ । ಬ್ರಹ್ಮಣಾ ವಾ ಸಹ ಕಾಲಾನ್ತರೇಣ ಮುಖ್ಯಮ್ ಅಮೃತತ್ವಮ್ ಏತಿ ಭುಕ್ತ್ವಾ ಭೋಗಾನನುಪಮಾನ್ ಬ್ರಹ್ಮಲೋಕಗತಾನ್ । ವಿಷ್ವಙ್ ನಾನಾವಿಧಗತಯಃ ಅನ್ಯಾ ನಾಡ್ಯಃ ಉತ್ಕ್ರಮಣೇ ಉತ್ಕ್ರಮಣನಿಮಿತ್ತಂ ಭವನ್ತಿ ಸಂಸಾರಪ್ರತಿಪತ್ತ್ಯರ್ಥಾ ಏವ ಭವನ್ತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಅಲ್ಲಿ ನೂರು, ಎಣಿಸಿದರೆ ನೂರಾಗುವಷ್ಟು[1] ಮತ್ತು ಮೇಲೆ ಒಂದು ಎಂದರೆ **'ಸುಷುಮ್ನೆ'** ಎಂಬ ಹೆಸರಿನದು. ಮನುಷ್ಯನ ಹೃದಯದಿಂದ ಹೊರಟಿರುವ ನಾಡಿಗಳು ಎಂದರೆ ನರಗಳು. ಅವುಗಳಲ್ಲಿ ನೆತ್ತಿಯನ್ನು ಒಡೆದುಕೊಂಡು ಹೊರಟಿರುವದು ಆಚೆಗೆ ಬಂದಿರುವದು ಒಂದು, **'ಸುಷುಮ್ನೆ'**[2] ಎಂಬುದು. ಅದರ ಮೂಲಕ ಅವಸಾನಕಾಲದಲ್ಲಿ ಹೃದಯದಲ್ಲಿ ಮನಸ್ಸನ್ನು ಅಳವಡಿಸಿಕೊಂಡು ಇಟ್ಟುಕೊಳ್ಳಬೇಕು. ಆ ನಾಡಿಯ ಮೂಲಕ ಮೇಲಕ್ಕೆ ಮೇಲುಗಡೆಗೆ ಹೋಗುವವನು ತೆರಳುವವನು **ಆದಿತ್ಯನ ಮೂಲಕವಾಗಿ**[3] ಅಮೃತತ್ವವನ್ನು ಹೊಂದುತ್ತಾನೆ, **ಆಪೇಕ್ಷಿಕವಾದ ಅಮರಣಧರ್ಮತ್ವವನ್ನು** (ಹೊಂದುತ್ತಾನೆ ಎಂದರ್ಥ). ಏಕೆಂದರೆ " ಆಭೂತ ಸಂಪ್ಲವಂ ಸ್ಥಾನಮಮೃತತ್ವಂ ಹಿ ಭಾಷ್ಯತೇ" (ಭೂತಗಳೆಲ್ಲ ಪ್ರಲಯವಾಗುವವರೆಗೆ ಇರುವ ಸ್ಥಾನವನ್ನು ಅಮೃತತ್ವವೆಂದೇ ಕರೆಯುತ್ತಾರೆ) ಎಂಬ (ವಿ ಪು. ೨-೮-೯೭) ಎಂದು **ಸ್ಮೃತಿ**[4] ಇದೆ. ಅಥವಾ ಎಣೆಯಿಲ್ಲದ ಭೋಗಗಳನ್ನು ಬ್ರಹ್ಮಲೋಕದಲ್ಲಿ

1 ಅನೇಕ ಸಂಖ್ಯೆಯ. ಛಾ ಭಾ ೮-೬-೬.

2 ಯೋಗದಲ್ಲಿ ಈ ನಾಡಿಯು ಪ್ರಸಿದ್ಧ. ಪ್ರ. ಭಾ. ೩-೭, ತೈ. ಭಾ. ೧-೬, ಛಾ. ಭಾ ೮-೬-೧, ಗೀ. ಭಾ ೮-೧೦.

3. ಛಾ. ೮-೬ ಖಂಡ, ತೈ. ೧-೬, ಈ. ೧೬, ಬೃ. ೫-೧೫-೧.

4. ಇತರ ಗತಿಗಳಿಗೆ ಹೋಲಿಸಿದರೆ ಬಹುಕಾಲವಿರುವದರಿಂದ ಇದನ್ನು ಅಮೃತತ್ವವೆಂದು ಕರೆಯುವರು ಎಂದು ವಚನದ ಅಭಿಪ್ರಾಯ. ಈ ವಚನವು ಪುರಾಣದ್ದೆಂದು ಛಾ. ಭಾ. ೫-೧೦-೨ರಲ್ಲಿ ಸ್ಪಷ್ಟವಾಗಿ ಹೇಳಿದೆ. " ಹಿ ಭಾಷ್ಯತೇ " ಎಂಬುದರ ಬದಲು ' ವಿಭಾವ್ಯತೇ ' ಎಂದು ಪಾಠಾಂತರವೂ ಕಾಣಬರುತ್ತದೆ.

ಅನುಭವಿಸಿದ ಬಳಿಕ ಬ್ರಹ್ಮನೊಡನೆ[1] ಮತ್ತೊಂದು ಕಾಲದಲ್ಲಿ[2] ಮುಖ್ಯವಾದ ಅಮೃತತ್ವವನ್ನೇ[3] ಪಡೆಯುತ್ತಾನೆ (ಎಂದೂ ಅರ್ಥವನ್ನು ಮಾಡಬಹುದು). ಎಲ್ಲಾ ಕಡೆಯಲ್ಲಿಯೂ ಸಿಕ್ಕಸಿಕ್ಕ ಹಾಗೆ ಹೋಗಿರುವ ಉಳಿದ ನಾಡಿಗಳು ಉತ್ಕ್ರಮಣಕ್ಕೆ, ಕಾರಣವಾಗಿ, ಆಗುವವು; ಸಂಸಾರವನ್ನು ಪಡೆಯುವದಕ್ಕೇ ಕಾರಣವಾಗುವವು ಎಂದರ್ಥ.

## ಉಪಸಂಹಾರ

(ಭಾಷ್ಯ)

೧೮೨. ಇದಾನೀಂ ಸರ್ವವಲ್ಲ್ಯರ್ಥೋಪಸಂಹಾರಾರ್ಥಮಾಹ—

(ಭಾಷ್ಯಾರ್ಥ)

ಈಗ (ಈ) ಎಲ್ಲಾ ವಲ್ಲಿಗಳ ಅರ್ಥವನ್ನೂ ಉಪಸಂಹಾರಮಾಡಬೇಕೆಂದು ಹೇಳುತ್ತಾನೆ:—

**ಅಙ್ಗುಷ್ಠಮಾತ್ರಃ ಪುರುಷೋಽನ್ತರಾತ್ಮಾ**
**ಸದಾ ಜನಾನಾಂ ಹೃದಯೇ ಸಂನಿವಿಷ್ಟಃ ।**
**ತಂ ಸ್ವಾಚ್ಛರೀರಾತ್ ಪ್ರವೃಹೇ-**
**ನ್ಮುಞ್ಜಾದಿವೇಷೀಕಾಂ ಧೈರ್ಯೇಣ ।**
**ತಂ ವಿದ್ಯಾಚ್ಛುಕ್ರಮಮೃತಂ**
**ತಂ ವಿದ್ಯಾಚ್ಛುಕ್ರಮಮೃತಮಿತಿ ॥ ೧೭ ॥**

೧೭. ಅಂತರಾತ್ಮನಾದ ಪುರುಷನು ಅಂಗುಷ್ಠಮಾತ್ರನಾಗಿ ಜನಗಳ ಹೃದಯದಲ್ಲಿ ಯಾವಾಗಲೂ ಇದ್ದುಕೊಂಡಿರುತ್ತಾನೆ. ನೊಸೆಯ ಹುಲ್ಲಿನಿಂದ ದಂಟನ್ನು (ತೆಗೆಯುವಂತೆ) ಧೈರ್ಯದಿಂದ ಆತನನ್ನು ತನ್ನ ಶರೀರದಿಂದ ಹಿರಿದುಕೊಳ್ಳಬೇಕು. ಅವನನ್ನು ಶುಕ್ರನೆಂದೂ ಅಮೃತನೆಂದೂ ತಿಳಿದುಕೊಳ್ಳಬೇಕು. ಅವನನ್ನು ಶುಕ್ರನೆಂದೂ ಅಮೃತನೆಂದೂ ತಿಳಿದುಕೊಳ್ಳಬೇಕು. ಹೀಗೆ (ಉಪನಿಷತ್ತು ಮುಗಿಯಿತು).

---

1. ಬ್ರಹ್ಮಲೋಕದ ಭೋಗಗಳ ವರ್ಣನೆಯನ್ನು ಛಾ. ೮-೫-೩, ೪ರಲ್ಲಿ ನೋಡಿರಿ. ಈ ಗತಿಯು ಅನಿತ್ಯವಾದರೂ ಜ್ಞಾನದಿಂದ ಕ್ರಮಮುಕ್ತಿಯೂ ಆಗುವದೆಂಬ ಬಗ್ಗೆ ಸೂ.ಭಾ. ೪-೩-೧೦, ೧೧ ನೋಡಿರಿ.
2. ಬ್ರಹ್ಮಲೋಕವು ಪ್ರಲಯವಾದ ಬಳಿಕ.
3. ಆತ್ಮಸ್ವರೂಪವೇ ಆಗಿರುವ ನಿರಪೇಕ್ಷವಾದ ಅಮೃತತ್ವವನ್ನೇ, ಮುಕ್ತಿಯನ್ನೇ.

(ಭಾಷ್ಯ)

೧೮೩. ಅಙ್ಗುಷ್ಠಮಾತ್ರಃ ಪುರುಷಃ ಅನ್ತರಾತ್ಮಾ ಸದಾ ಜನಾನಾಂ ಸಮ್ಬನ್ಧಿನಿ ಹೃದಯೇ ಸಂನಿವಿಷ್ಟಃ ಯಥಾವ್ಯಾಖ್ಯಾತಃ । ತಂ ಸ್ವಾತ್ ಆತ್ಮೀಯಾತ್ ಶರೀರಾತ್ ಪ್ರವೃಹೇತ್ ಉದ್ಯಚ್ಛೇತ್ ನಿಷ್ಕರ್ಷೇತ್ ಪೃಥಕ್ಕುರ್ಯಾತ್ ಇತ್ಯರ್ಥಃ । ಕಿಮಿವೇತಿ ? ಉಚ್ಯತೇ । ಮುಞ್ಜಾದಿವ ಇಷೀಕಾಮ್ ಅನ್ತಃಸ್ಥಾಂ ಧೈರ್ಯೇಣ ಅಪ್ರಮಾದೇನ । ತಂ ಶರೀರಾನ್ನಿಷ್ಕೃಷ್ಟಂ ಚಿನ್ಮಾತ್ರಂ ವಿದ್ಯಾತ್ ವಿಜಾನೀಯಾತ್ ಶುಕ್ರಂ ಶುದ್ಧಮ್ ಅಮೃತಂ ಯಥೋಕ್ತಂ ಬ್ರಹ್ಮ ಇತಿ । ದ್ವಿರ್ವಚನಮ್ ಉಪನಿಷತ್ಪರಿಸಮಾಪ್ತ್ಯರ್ಥಮ್, ಇತಿಶಬ್ದಶ್ಚ ॥

(ಭಾಷ್ಯಾರ್ಥ)

ಅಂತರಾತ್ಮನಾದ ಪುರುಷನು ಜನಗಳಿಗೆ ಸೇರಿರುವ ಹೃದಯದಲ್ಲಿ[1] ಅಂಗುಷ್ಠಮಾತ್ರನಾಗಿ ಯಾವಾಗಲೂ ಇದ್ದುಕೊಂಡಿರುತ್ತಾನೆ. ಇದನ್ನು ಹಿಂದೆ ವ್ಯಾಖ್ಯಾನ ಮಾಡಿರುವಂತೆ (ತಿಳಿದುಕೊಳ್ಳಬೇಕು). ಆತನನ್ನು ತನ್ನ ಶರೀರದಿಂದ[2] ಹಿರಿದುಕೊಳ್ಳಬೇಕು, ಎತ್ತಿಕೊಳ್ಳಬೇಕು, ಎಳೆದುಕೊಳ್ಳಬೇಕು, ಬೇರ್ಪಡಿಸಿಕೊಳ್ಳಬೇಕು ಎಂದರ್ಥ. ಏತರ ಹಾಗೆ? ಎಂದರೆ ಹೇಳುತ್ತಾನೆ: ನೊಸೆಯ ಹುಲ್ಲಿನಿಂದ[3] ಒಳಗಿರುವ ದಂಟನ್ನು (ಹಿರಿದುಕೊಳ್ಳುವಂತೆ) ಧೈರ್ಯದಿಂದ ಎಂದರೆ ಎಚ್ಚರಿಕೆಯಿಂದ (ಬಿಡಿಸಿಕೊಳ್ಳಬೇಕು). ಹಾಗೆ ಶರೀರದಿಂದ ಎಳೆದುಕೊಂಡ ಚಿನ್ಮಾತ್ರಸ್ವರೂಪವನ್ನು ಶುಕ್ರನೆಂದೂ ಎಂದರೆ ಶುಭ್ರನೆಂದೂ ಅಮೃತವೆಂದೂ ಹಿಂದೆ ಹೇಳಿರುವ ಬ್ರಹ್ಮವೇ ಎಂದೂ ತಿಳಿಯಬೇಕು, ಅರಿತುಕೊಳ್ಳಬೇಕು. (ಅವನನ್ನು ಶುಕ್ರನೆಂದೂ ಅಮೃತನೆಂದೂ ತಿಳಿಯಬೇಕು ಎಂಬ ವಾಕ್ಯವನ್ನು) ಎರಡು ಸಲ ಹೇಳಿರುವದೂ ಕೊನೆಯಲ್ಲಿ ಹೀಗೆ('ಇತಿ') ಎಂಬ ಶಬ್ದವನ್ನು (ಉಪಯೋಗಿಸಿರುವದೂ) ಉಪನಿಷತ್ತು ಮುಗಿಯಿತೆಂದು (ಸೂಚಿಸುವದಕ್ಕೆ).

(ಭಾಷ್ಯ)

೧೮೪. ವಿದ್ಯಾಸ್ತುತ್ಯರ್ಥೋಽಯಮಾಖ್ಯಾಯಿಕಾರ್ಥೋಪಸಂಹಾರಃ ಅಧುನಾ ಉಚ್ಯತೇ—

---

1. ೨-೧-೧೨ ರಲ್ಲಿ.
2. ಸ್ಥೂಲಶರೀರ, ಮತ್ತು ಸೂಕ್ಷ್ಮಶರೀರ_ಎರಡರಿಂದಲೂ.
2. ಇದನ್ನು ನೊದೆಯ ಹುಲ್ಲು ಎಂದೂ ಕರೆಯುತ್ತಾರೆ.

(ಭಾಷ್ಯಾರ್ಥ)

ವಿದ್ಯೆಯನ್ನು ಹೊಗಳುವದಕ್ಕಾಗಿ[1] ಕಥೆಯಲ್ಲಿ ಹೇಳಿದ ವಿಷಯವನ್ನು ಈಗ ಉಪಸಂಹಾರಮಾಡಿ ಹೇಳಲಾಗುತ್ತದೆ —

**ಮೃತ್ಯುಪ್ರೋಕ್ತಾಂ ನಚಿಕೇತೋಽಥ ಲಬ್ಧ್ವಾ**
**ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಮ್ ।**
**ಬ್ರಹ್ಮಪ್ರಾಪ್ತೋ ವಿರಜೋಽಭೂದ್ವಿಮೃತ್ಯು-**
**ರನ್ಯೋಽಪ್ಯೇವಂ ಯೋ ವಿದಧ್ಯಾತ್ಮಮೇವ ॥ ೧೮ ॥**

೧೮. ಮೃತ್ಯುವು ಹೇಳಿದ ಈ ವಿದ್ಯೆಯನ್ನೂ ಯೋಗದ ವಿಧಾನವೆಲ್ಲವನ್ನೂ ನಚಿಕೇತನು ಪಡೆದುಕೊಂಡು ಬ್ರಹ್ಮವನ್ನು ಹೊಂದಿದನು, ವಿರಜನಾದನು, ವಿಮೃತ್ಯುವಾದನು. ಇನ್ನೊಬ್ಬನೂ ಯಾವನು ಅಧ್ಯಾತ್ಮವನ್ನೇ ಹೀಗೆ ತಿಳಿದುಕೊಳ್ಳುವನೋ (ಅವನೂ ಆಗುವನು).

(ಭಾಷ್ಯ)

೧೮೫. ಮೃತ್ಯುಪ್ರೋಕ್ತಾಮ್ ಯಥೋಕ್ತಾಮ್ ಏತಾಂ ಬ್ರಹ್ಮವಿದ್ಯಾಂ ಯೋಗವಿಧಿಂ ಚ ಕೃತ್ಸ್ನಂ ಸಮಸ್ತಂ ಸೋಪಕರಣಂ ಸಫಲಮ್ ಇತ್ಯೇತತ್ । ನಾಚಿಕೇತಃ ಅಥ ವರಪ್ರದಾನಾತ್ ಮೃತ್ಯೋಃ ಲಬ್ಧ್ವಾ ಪ್ರಾಪ್ಯ ಇತ್ಯರ್ಥಃ । ಕಿಮ್ ? ಬ್ರಹ್ಮ ಪ್ರಾಪ್ತೋಽಭೂತ್ ಮುಕ್ತೋಽಭವತ್ ಇತ್ಯರ್ಥಃ । ಕಥಮ್ ? ವಿದ್ಯಾಪ್ರಾಪ್ತ್ಯಾ ವಿರಜಃ ವಿಗತರಜಾಃ ವಿಗತಧರ್ಮಾಧರ್ಮಃ । ವಿಮೃತ್ಯುಃ ವಿಗತಕಾಮಾವಿದ್ಯಶ್ಚ ಸನ್ ಪೂರ್ವಮ್ ಇತ್ಯರ್ಥಃ । ನ ಕೇವಲಂ ನಾಚಿಕೇತ ಏವ । ಅನ್ಯೋಽಪಿ ಯ ಏವಂ ನಾಚಿಕೇತವತ್ ಆತ್ಮವಿತ್ ಅಧ್ಯಾತ್ಮಮೇವ ನಿರುಪಚರಿತಂ ಪ್ರತ್ಯಕ್ಸ್ವರೂಪಂ ಪ್ರಾಪ್ಯತತ್ತ್ವಮೇವ ಇತ್ಯಭಿಪ್ರಾಯಃ । ನಾನ್ಯದ್ರೂಪಮಪ್ರತ್ಯಗ್ರೂಪಮ್ । ತದೇವಮ್ ಅಧ್ಯಾತ್ಮಮ್ ಏವಮ್ ಉಕ್ತೇನ ಪ್ರಕಾರೇಣ ವೇದ ವಿಜಾನಾತಿ ಇತಿ ಏವಂವಿತ್ । ಸೋಽಪಿ ವಿರಜಾಃ ಸನ್ ಬ್ರಹ್ಮ ಪ್ರಾಪ್ಯ ವಿಮೃತ್ಯುರ್ಭವತಿ ಇತಿ ವಾಕ್ಯಶೇಷಃ ॥

(ಭಾಷ್ಯಾರ್ಥ)

ಮೃತ್ಯುವು ಹೇಳಿರುವ ಹಿಂದೆ ವರ್ಣಿಸಿರುವ ಈ ಬ್ರಹ್ಮವಿದ್ಯೆಯನ್ನೂ ಮತ್ತು ಯೋಗವಿಧಾನವೆಲ್ಲವನ್ನೂ ಸಮಸ್ತವನ್ನೂ ಎಂದರೆ ಉಪಕರಣಗಳೊಡನೆ, ಫಲದೊ

1. ತತ್ತ್ವದರ್ಶಿಯಾದ ಗುರುವು ಉಪದೇಶಿಸಿದರೆ ಶಿಷ್ಯನು ಯೋಗ್ಯನಾಗಿಯೂ ಇದ್ದರೆ ಫಲವು ಆಗಿಯೇ ಆಗುತ್ತದೆ, ವೈದ್ಯಾದಿಗಳಂತೆ ವಿದ್ಯೆಯ ಫಲವು ಸಂದಿಗ್ಧವಲ್ಲ ಎಂದು ತಿಳಿಸುವದಕ್ಕಾಗಿ ವಿದ್ಯೆಯನ್ನು ಹೊಗಳಿದೆ.

ಡನೆ[1] ಎಂದರ್ಥ. ನಚಿಕೇತನು[2] ಇನ್ನು ಎಂದರೆ ಮೃತ್ಯುವಿನ ವರಪ್ರದಾನದಿಂದ ಪಡೆದುಕೊಂಡು ದೊರಕಿಸಿಕೊಂಡು ಎಂದರ್ಥ. (ಪಡೆದುಕೊಂಡು) ಏನಾದನು? ಎಂದರೆ, ಬ್ರಹ್ಮವನ್ನು ಪಡೆದವನಾದನು, ಮುಕ್ತನಾದನು ಎಂದರ್ಥ. ಹೇಗೆ (ಮುಕ್ತನಾದನು)?–ಎಂದರ ವಿದ್ಯೆಯನ್ನು ಪಡೆದುಕೊಂಡದ್ದರಿಂದ ವಿರಜನೂ ಎಂದರೆ ಧೂಳಿಲ್ಲದವನೂ ಧರ್ಮಾಧರ್ಮಗಳ (ಸೋಂಕು) ಇಲ್ಲದವನೂ ಮೃತ್ಯುವಿಲ್ಲದವನೂ ಎಂದರೆ ಕಾಮ, ಅವಿದ್ಯೆ–ಇವುಗಳಿಲ್ಲದವನೂ ಮೊದಲು[3] ಆಗಿ (ಮುಕ್ತನಾದನು) ಎಂದರ್ಥ.

ನಚಿಕೇತನೊಬ್ಬನೇ ಅಲ್ಲ, ಇನ್ನೂ ಯಾವನು ಹೀಗೆ ಎಂದರೆ ನಚಿಕೇತನಂತೆ ಆತ್ಮನನ್ನರಿಯುವನೋ ಅಧ್ಯಾತ್ಮವನ್ನೇ ಎಂದರೆ ಗೌಣವಲ್ಲದ ಒಳಗಿನ (ಆತ್ಮ) ಸ್ವರೂಪವನ್ನೇ ಪಡೆದುಕೊಳ್ಳಬೇಕಾಗಿರುವ (ಆತ್ಮ) ತತ್ತ್ವವನ್ನೇ[4] ಒಳಗಿನದಲ್ಲದ ಮತ್ತೊಂದು ರೂಪವನ್ನಲ್ಲ ಎಂದಭಿಪ್ರಾಯ ಇಂತೀಪರಿಯಲ್ಲಿ ಅಧ್ಯಾತ್ಮವನ್ನೆ ಹೀಗೆ ಎಂದರೆ ಹಿಂದೆ ಹೇಳಿರುವ ಪ್ರಕಾರದಿಂದ ತಿಳಿಯುವವನು 'ಏವಂವಿತ್'[5] ಎನಿಸುವನು. ಅವನೂ ವಿರಜನಾಗಿ ಬ್ರಹ್ಮವನ್ನು ಪಡೆದುಕೊಂಡು ವಿಮೃತ್ಯುವಾಗು ವನು ಎಂದು ವಾಕ್ಯಕ್ಕೆ ಸೇರಿಸಿಕೊಳ್ಳಬೇಕು.

(ಭಾಷ್ಯ)

೧೮೬. ಅಥ ಶಿಷ್ಯಾಚಾರ್ಯಯೋಃ ಪ್ರಮಾದಕೃತಾನ್ಯಾಯೇನ ವಿದ್ಯಾ ಗ್ರಹಣಪ್ರತಿಪಾದನನಿಮಿತ್ತದೋಷಪ್ರಶಮನಾರ್ಥಾ ಇಯಂ ಶಾನ್ತಿರುಚ್ಯತೇ—

(ಭಾಷ್ಯಾರ್ಥ)

ಈಗ ಶಿಷ್ಯನೂ ಆಚಾರ್ಯನೂ ಪ್ರಮಾದದಿಂದ ಅನ್ಯಾಯವಾಗಿ[6] ವಿದ್ಯೆ

1. ಕರ್ಮ, ಯೋಗ–ಎಂಬಿವು ಉಪಕರಣಗಳು, ಶೋಕನಿವೃತ್ತಿಯು ಫಲ.

2. ಮೂಲದಲ್ಲಿ 'ನಾಚಿಕೇತಃ' ಎಂಬ ಮಾತಿರುತ್ತದೆ, ನಚಿಕೇತನೆಂದೇ ಆದಕ್ಕೆ ಅರ್ಥ.

3. ಮೊದಲು ಅವಿದ್ಯಾಕಾಮಗಳು ಹೋಗಿ ಆಮೇಲೆ ಕರ್ಮಮಯವಾದ ಸಂಸಾರ ದಿಂದ ಮುಕ್ತನಾದನು ಎಂದರ್ಥ

4. ಯಾವ ಆತ್ಮನನ್ನು ಪಡೆಯಬೇಕಾಗಿದೆಯೋ ಆ ಆತ್ಮನೇ ತಾನೆಂದು ತಿಳಿಯ ಬೇಕೆಂದು ಭಾವ. ೧-೨-೨೪ ರ ಭಾಷ್ಯವನ್ನು ನೋಡಿರಿ.

5. ಏವಮ್ ವಿತ್ ಎಂಬ ಮಾತುಗಳು ಬೇರೆಬೇರೆಯಿವೆ. ಇವೆರಡಕ್ಕೂ ಸಂಬಂಧ ವನ್ನು ಮಾಡಿಕೊಂಡು ಅರ್ಥಮಾಡಬೇಕು ಎಂದು ಅಭಿಪ್ರಾಯ.

6. ಶಾಸ್ತ್ರದಲ್ಲಿ ವಿಧಿಸಿರುವ ಕ್ರಮವನ್ನು ಮೀರಿ ಪಾಠಪ್ರವಚನಗಳನ್ನು ಮಾಡಿರಬಹು ದಾದ್ದರಿಂದ ಆದ ದೋಷವನ್ನು ಎಂದರ್ಥ. ಈ ವಿದ್ಯೆಯನ್ನು ಗುರುಶಿಷ್ಯಭಾವದಿಂದಲೇ ಹೇಳಬೇಕು, ಕಲಿಯಬೇಕು–ಎಂದಭಿಪ್ರಾಯ.

ಯನ್ನು ಸ್ವೀಕರಿಸುವದು, ಹೇಳಿಕೊಡುವದು, ಎಂಬೀ ಕಾರಣದಿಂದ ಆಗಬಹುದಾದ ದೋಷವನ್ನು ಶಾಂತಿಗೊಳಿಸುವದಕ್ಕಾಗಿ ಈ ಶಾಂತಿಯನ್ನು[1] ಹೇಳಲಾಗುತ್ತದೆ :—

**ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ**
**ಕರವಾವಹೈ । ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾ-**
**ವಹೈ । ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥ ೧೯ ॥**

೧೯. ನಮ್ಮಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ! ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ ! (ನಾವಿಬ್ಬರೂ) ಜೊತೆಯಲ್ಲಿ ವೀರ್ಯವನ್ನುಂಟು ಮಾಡುವಂತಾಗಲಿ ! ನಾವು ಅಧ್ಯಯನಮಾಡಿದ್ದು ತೇಜಸ್ವಿಯಾಗಲಿ ! (ಒಬ್ಬರನ್ನೊಬ್ಬರು) ದ್ವೇಷಮಾಡದೆ ಇರುವಂತಾಗಲಿ ! ಓಂ ಶಾಂತಿ, ಶಾಂತಿ, ಶಾಂತಿ !

(ಭಾಷ್ಯ)

೧೮೭. ಸಹ ನೌ ಆವಾಮ್ ಅವತು ಪಾಲಯತು ವಿದ್ಯಾಸ್ವರೂಪಪ್ರಕಾಶನೇನ । ಕಃ ? ಸ ಏವ ಪರಮೇಶ್ವರಃ ಉಪನಿಷತ್ಪ್ರಕಾಶಿತಃ । ಕಿಂ ಚ ಸಹ ನೌ ಭುನಕ್ತು ತತ್ಫಲಪ್ರಕಾಶನೇನ ನೌ ಪಾಲಯತು । ಸಹೈವ ಆವಾಂ ವಿದ್ಯಾಕೃತಂ ವೀರ್ಯಂ ಸಾಮರ್ಥ್ಯಂ ಕರವಾವಹೈ ನಿಷ್ಪಾದಯಾವಹೈ । ಕಿಂ ಚ ತೇಜಸ್ವಿನೌ ತೇಜಸ್ವಿನೋಃ ಆವಯೋಃ ಯದಧೀತಂ ತತ್ ಸ್ವಧೀತಮಸ್ತು । ಅಥವಾ ತೇಜಸ್ವಿ ನೌ ಆವಾಭ್ಯಾಂ ಯತ್ ಅಧೀತಂ ತತ್ ಅತೀವ ತೇಜಸ್ವಿ ವೀರ್ಯವತ್ ಅಸ್ತು ಇತ್ಯರ್ಥಃ । ಮಾ ವಿದ್ವಿಷಾವಹೈ ಶಿಷ್ಯಾಚಾರ್ಯೌ ಅನ್ಯೋನ್ಯಂ ಪ್ರಮಾದಕೃತಾನ್ಯಾಯಾಧ್ಯಯನಾಧ್ಯಾಪನದೋಷನಿಮಿತ್ತಂ ದ್ವೇಷಂ ಮಾ ಕರವಾವಹೈ ಇತ್ಯರ್ಥಃ । ಶಾನ್ತಿಃ ಶಾನ್ತಿಃ ಶಾನ್ತಿಃ ಇತಿ ತ್ರಿರ್ವಚನಂ ಸರ್ವದೋಷೋಪಶಮನಾರ್ಥಮ್ ॥

(ಭಾಷ್ಯಾರ್ಥ)

ನಮ್ಮಿಬ್ಬರನ್ನೂ ಜೊತೆಯಲ್ಲಿಯೇ ವಿದ್ಯಾಸ್ವರೂಪವನ್ನು ತೋರಿಸಿಕೊಟ್ಟು ಕಾಪಾಡಲಿ ಪಾಲಿಸಲಿ ![2] ಯಾರು ? ಎಂದರೆ ಉಪನಿಷತ್ತಿನಲ್ಲಿ ತಿಳಿಸಿರುವ ಆ ಪರ

---

1. ಕೆಲವು ಪುಸ್ತಕಗಳಲ್ಲಿ ಈ ಶಾಂತಿಯು "ಇತಿ ದ್ವಿತೀಯಾಧ್ಯಾಯಃ" ಎಂಬ ಮಾತುಗಳಾದಮೇಲೆ ಇರುತ್ತದೆ. ಕೆಲವು ಪುಸ್ತಕಗಳಲ್ಲಿ "ಸಹನಾವಿತಿ ಶಾನ್ತಿಃ" ಎಂದಿಷ್ಟೇ ಇದೆ. ಈ ಶಾಂತಿಯೂ ಭಾಷ್ಯವೂ ಮೂಲದಲ್ಲಿ ಹೇಗಿದ್ದವೆಂಬುದನ್ನು ನಿಶ್ಚಯಿಸುವದಕ್ಕೆ ಇನ್ನೂ ಕೆಲವು ಹಸ್ತಪ್ರತಿಗಳನ್ನು ಹೋಲಿಸುವದು ಅವಶ್ಯವಾಗಿದೆ. ತೈ. ಭಾ. ೨-೧ ನೋಡಿರಿ.

2. ಈಶ್ವರನ ಅನುಗ್ರಹದಿಂದಲೇ ವಿದ್ಯೆಯೂ ಆದರ ಫಲವೂ ದೊರಕುವವು ; ಆದ್ದರಿಂದ ಈಶ್ವರಭಕ್ತಿಯು ಅವಶ್ಯವಾದ ಸಾಧನವು ಎಂದು ಭಾವ.

ಮೇಶ್ವರನೇ. ಮತ್ತು ಆ (ವಿದ್ಯೆಯ) ಫಲವನ್ನು ತೋರಿಸಿಕೊಟ್ಟು ನಮ್ಮಿಬ್ಬರನ್ನೂ ಜೊತೆಯಲ್ಲಿಯೇ ಪೋಷಿಸಲಿ ಪಾಲಿಸಲಿ! ವಿದ್ಯೆಯಿಂದಾದ ವೀರ್ಯವನ್ನು ಎಂದರೆ ಸಾಮರ್ಥ್ಯವನ್ನು ನಾವಿಬ್ಬರೂ ಜೊತೆಯಲ್ಲಿಯೇ ಉಂಟುಮಾಡುವವರಾಗೋಣ, ಏರ್ಪಡಿಸುವವರಾಗೋಣ! ಮತ್ತು [ತೇಜಸ್ವಿನೌ = ತೇಜಸ್ವಿನೋಃ] ತೇಜಸ್ವಿಗಳಾದ ನಮ್ಮಿಬ್ಬರ ಅಧ್ಯಯನವಿದೆಯಲ್ಲ, ಅದು ಸರಿಯಾದ ಅಧ್ಯಯನವಾಗಲಿ! ಅಥವಾ [1] [ನೌ = ಆವಾಭ್ಯಾಮ್] ನಮ್ಮಿಬ್ಬರಿಂದ ಅಧ್ಯಯನವಾದದ್ದು ಯಾವದಿದೆಯೋ ಅದು ಬಹಳವಾಗಿ ತೇಜಸ್ವಿಯಾಗಲಿ ಎಂದರೆ ವೀರ್ಯವುಳ್ಳದ್ದಾಗಲಿ! ಎಂದರ್ಥ (ಎಂದಾದರೂ ವ್ಯಾಖ್ಯಾನಮಾಡಬಹುದು). ಶಿಷ್ಯಾಚಾರ್ಯರಾದ (ನಾ)ವಿಬ್ಬರೂ ಒಬ್ಬರನ್ನೊಬ್ಬರು ದ್ವೇಷಮಾಡದೆ ಇರುವಂತಾಗಲಿ! ಎಂದರೆ ಪ್ರಮಾದದಿಂದ ಅನ್ಯಾಯವಾಗಿ ಅಧ್ಯಯನಮಾಡಿದ ಅಧ್ಯಯನಮಾಡಿಸಿದ ದೋಷದ ಕಾರಣದಿಂದ (ಒಬ್ಬರನ್ನೊಬ್ಬರು) ದ್ವೇಷವನ್ನು ಮಾಡದೆ ಇರುವಂತಾಗಲಿ! ಎಂದರ್ಥ. "ಶಾಂತಿಃ ಶಾಂತಿಃ ಶಾಂತಿಃ" ಎಂದು ಮೂರುಸಲ ಹೇಳಿರುವದು ಎಲ್ಲಾ ದೋಷಗಳೂ [2] ಪರಿಹಾರವಾಗುವದಕ್ಕೆ. [3]

ಓಂ ತತ್ ಸತ್

1. ತೇಜಸ್ವಿ ನೌ ಅಧೀತಮ್ ಅಸ್ತು–ಎಂದು ಈ ವ್ಯಾಖ್ಯಾನದಲ್ಲಿ ಪದಚ್ಛೇದ.

2. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ–ಎಂಬ ಮೂರು ದೋಷಗಳೂ.

3. "ಇತ್ಯೋಮಿತಿ" ಎಂಬ ಆ॥ ಪಾಠದಲ್ಲಿ ಓಂ ಎಂಬುದು ಮಂಗಲವನ್ನೂ ಇತಿ ಎಂಬುದು ಭಾಷ್ಯದ ಪರಿಸಮಾಪ್ತಿಯನ್ನೂ ಸೂಚಿಸುತ್ತದೆ.

# ಉಪನಿಷತ್ತಿನ ಸಾರ

---

## ಒಂದನೆಯ ಅಧ್ಯಾಯ—ಒಂದನೆಯ ವಲ್ಲಿ

೧–೯. ವಾಜಶ್ರವಸನೆಂಬಾತನು ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡಬೇಕಾದ ವಿಶ್ವ ಜಿತ್ತು ಎಂಬ ಯಾಗವನ್ನು ಮಾಡಿ ಯೋಗ್ಯವಲ್ಲದ ಬರಡು ಹಸುಗಳನ್ನು ದಕ್ಷಿಣೆಗೆಂದು ಒಯ್ಯುತ್ತಿರಲು ಅವನ ಮಗನಾದ ನಚಿಕೇತನೆಂಬ ಹುಡುಗನು "ಅಯ್ಯೋ! ಇಂಥ ದಾನ ವನ್ನು ಕೊಟ್ಟರೆ ನಮ್ಮ ತಂದೆಗೆ ದುರ್ಗತಿಯುಂಟಾಗುವವಲ್ಲ!" ಎಂದು ಯೋಚಿಸಿ "ಅಪ್ಪ, ನನ್ನನ್ನು ಯಾರಿಗೆ ದಕ್ಷಿಣೆಯಾಗಿ ಕೊಡುತ್ತೀಯೆ?" ಎಂದು ತಂದೆಯನ್ನು ಕೇಳಿದನು. "ನನ್ನನ್ನು ಯಾರಿಗೆ ಕೊಡುತ್ತೀಯ?" ಎಂದು ಮತ್ತೆ ಮತ್ತೆ ಮಗನು ತನ್ನನ್ನು ನಿರ್ಬಂಧಿಸು ವದನ್ನು ಕಂಡು ಸಿಟ್ಟುಗೊಂಡ ತಂದೆಯು "ನಿನ್ನನ್ನು ಯಮುನಿಗೆ ಕೊಟ್ಟಿದ್ದೇನೆ" ಎಂದನು. ತಂದೆಯು ಯಜ್ಞಭೂಮಿಯಲ್ಲಿ ಆಡಿದ ಮಾತು ಸುಳ್ಳಾಗಬಾರದೆಂದು ತಿಳಿದ ನಚಿಕೇತನು "ಅಯ್ಯೋ! ಏನೋ ಹೇಳಿಬಿಟ್ಟೆನಲ್ಲ!" ಎಂದು ಪೇಚಾಡುತ್ತಿದ್ದ ಅವನನ್ನು ಕುರಿತು "ನಿನ್ನ ವಚನದಂತೆ ನಡೆದುಕೊ; ಇದರಿಂದ ನಿನಗೆ ಒಳ್ಳೆಯದಾಗಬಹುದು. ಮಗನ ಮೋಹ ದಿಂದ ಆಡಿದ ಮಾತನ್ನು ಸುಳ್ಳುಮಾಡದಿರು" ಎಂದು ಒಪ್ಪಿಸಿ ತಂದೆಯ ಅನುಜ್ಞೆಯನ್ನು ಹೊಂದಿ ಯಮಲೋಕಕ್ಕೆ ಹೋದನು. ಯಮನು ಈ ವೇಳೆಗೆ ಮನೆಯಲ್ಲಿಲ್ಲದೆ ಬೇರೆ ಎಲ್ಲಿಗೋ ಹೋಗಿದ್ದನು; ನಚಿಕೇತನು ಬಂದು ಮೂರುದಿನಗಳಾದ ಮೇಲೆ ತಿರುಗಿಬಂದನು. ತನ್ನ ಮನೆಯ ಮುಂದೆ ಮೂರು ದಿನ ಉಪವಾಸವಿದ್ದ ವಟುವಿಗೆ ಅತಿಥಿಸತ್ಕಾರವಿಲ್ಲದೆ ತಾನು ಅನಾದರಮಾಡಿದ ದೋಷದ ಪರಿಹಾರಕ್ಕೆಂದು ಯಮನು "ಮೂರು ವರಗಳನ್ನು ಬೇಡಿಕೊ, ಕೊಡುತ್ತೇನೆ" ಎಂದು ಹೇಳಿದನು.

೧೦–೧೯. ಆಗ ನಚಿಕೇತನು "ನಾನು ಹಿಂತಿರುಗಿ ಹೋದರೆ ನನ್ನ ತಂದೆಯು ನನ್ನ ವಿಷಯದಲ್ಲಿ ಪ್ರಸನ್ನನಾಗಿರಬೇಕು. ಇದು ಮೊದಲನೆಯ ವರವು. ವಿರಾಟ್ಪುರುಷನನ್ನು ಪಡೆಯುವದಕ್ಕೆ ಸಾಧನವಾದ ಅಗ್ನಿವಿದ್ಯೆಯನ್ನು ನನಗೆ ತಿಳಿಸು. ಇದು ಎರಡನೆಯ ವರವು" ಎಂದು ಕೇಳಿಕೊಂಡನು. ಯಮನು ಈ ಎರಡು ವರಗಳನ್ನೂ ಕೊಟ್ಟು "ಕರ್ಮೋಪಾಸನೆಗಳ ಫಲವಾದ ವಿರಾಟ್ಪ್ರಾಪ್ತಿಯನ್ನು ಕೊಡುವ ಈ ಅಗ್ನಿವಿದ್ಯೆಯಲ್ಲಿ ಉಪಯೋಗಿಸುವ ಅಗ್ನಿಗೆ ನಚಿಕೇತನೆಂಬ ನಿನ್ನ ಹೆಸರೇ ಬರಲಿ!" ಎಂದು ಹೆಚ್ಚಿಗೆಯ ವರವನ್ನು ತಾನಾಗಿಯೇ ಕೊಟ್ಟನು. ಯಾವನು ಈ ನಾಚಿಕೇತಾಗ್ನಿಯನ್ನು ಉಪಾಸನೆಮಾಡುವನೋ ಅವನು ಬದುಕಿ ರುವಾಗಲೇ ಅಧರ್ಮ, ಅಜ್ಞಾನ— ಮುಂತಾದವುಗಳಿಂದ ಬಿಡುಗಡೆಯನ್ನು ಹೊಂದಿ ಸತ್ತಮೇಲೆ ವಿರಾಡಾತ್ಮನಾಗಿ ದುಃಖವರ್ಜಿತನಾಗುವನು. ಈ ಉಪಾಸನಾಕ್ರಮವನ್ನು ಹೇಳಿಕೊಟ್ಟದ್ದೇ ಯಮನು ಕೊಟ್ಟ ಎರಡನೆಯ ವರವು.

೨೦-೨೯ ಆಮೇಲೆ "ದೇಹಾಂತರವನ್ನು ಹೊಂದುವ, ಶರೀರೇಂದ್ರಿಯಾದಿಗಳಿಗಿಂತ ಕೀರ ಬೇರೆಯಾಗಿರುವ ಆತ್ಮನೊಬ್ಬನು ಇದಾನೆಂದು ಕೆಲವರೂ ಇಲ್ಲವೆಂದು ಕೆಲವರೂ ಹೇಳುತ್ತಿರುವರು ಪ್ರತ್ಯಕ್ಷಾನುಮಾನಗಳಿಗೆ ನಿಲುಕದ ಈ ಆತ್ಮತತ್ತ್ವವನ್ನು ನನಗೆ ಹೇಳಿಕೊಡು" ಎಂದು ನಚಿಕೇತನು ಮೂರನೆಯ ವರವನ್ನು ಬೇಡಿಕೊಂಡನು. ನಚಿಕೇತನು ಜ್ಞಾನಕ್ಕೆ ತಕ್ಕವನೋ ಅಲ್ಲವೋ ಎಂದು ಪರೀಕ್ಷಿಸುವದಕ್ಕಾಗಿ ಯಮನು "ನಚಿಕೇತನೆ, ಇದನ್ನು ತಿಳಿಯುವದು ದೇವತೆಗಳಿಗೂ ಕಷ್ಟವಾಗಿರುವದು. ಇದಲ್ಲದೆ ಈ ಜ್ಞಾನದಿಂದ ನಿನಗೇನಾಗಬೇಕು? ಆಯುಸ್ಸು, ಪ್ರಜಾಸಂತತಿ, ಪಶುವಿತ್ತಕ್ಷೇತ್ರಾದಿಗಳು, ಸಾಮ್ರಾಜ್ಯ--ಇಂಥ ವರಗಳನ್ನು ಬೇಡಿಕೊ. ನಿನಗೆ ಬೇಕಾದ ಅನುಕೂಲ್ಯಗಳನ್ನೆಲ್ಲ ಕಲ್ಪಿಸಿಕೊಡುತ್ತೇನೆ" ಎಂದನು. ಆದರೆ ನಚಿಕೇತನು ಇಂದ್ರಿಯಗಳನ್ನು ಸವೆಯಿಸುವ ಆ ಭೋಗಗಳು ಯಾವವನ್ನೂ ಒಲ್ಲದೆ ತನಗೆ ಆತ್ಮತತ್ತ್ವವನ್ನೇ ತಿಳಿಸಿಕೊಡಬೇಕೆಂದು ಪಟ್ಟುಹಿಡಿದು ಕೇಳಿಕೊಂಡನು.

## ಒಂದನೆಯ ಅಧ್ಯಾಯ—ಎರಡನೆಯ ವಲ್ಲಿ

೧-೬ ನಚಿಕೇತನ ಉತ್ತಮವಾದ ಯೋಗ್ಯತೆಯನ್ನು ಕಂಡ ಯಮನು ಇವನಿಗೆ ಆತ್ಮವಿದ್ಯೆಯನ್ನು ಉಪದೇಶಿಸಿದನು. ಅವನು ಮೊದಲು ನಚಿಕೇತನ ವೈರಾಗ್ಯವನ್ನು ಮೆಚ್ಚಿ ಹೊಗಳಿದ್ದು ಹೇಗೆಂದರೆ—" ನಚಿಕೇತನೆ, ಪ್ರಿಯವಾದದ್ದು, ಹಿತವಾದದ್ದು-ಎಂದು ಎರಡು ಬಗೆಯ ಸಾಧನಗಳು ಮನುಷ್ಯನಿಗೆ ದೊರೆಯಬಹುದಾಗಿವೆ. ಅವುಗಳಲ್ಲಿ ಹಿತವನ್ನು ಆರಿಸಿಕೊಂಡರೆ ಉತ್ತಮ ಫಲವಾಗುವದು, ಪ್ರಿಯವಾದದ್ದನ್ನು ಆರಿಸಿಕೊಂಡವರಿಗೆ ಪರಮಪುರುಷಾರ್ಥವು ದೂರವಾಗುತ್ತದೆ ಆದ್ದರಿಂದ ವಿವೇಕಿಯಾದವನು ಹಿತವನ್ನೇ ಆರಿಸಿಕೊಳ್ಳಬೇಕು ನೀನು ಮಿಕ್ಕ ಯಾವ ಭೋಗಗಳನ್ನೂ ಒಲ್ಲದೆ ಆತ್ಮತತ್ತ್ವವನ್ನೇ ಕೇಳಿಕೊಂಡದ್ದು ನೀನು ವಿವೇಕಿಯೆಂಬುದನ್ನು ತೋರಿಸುತ್ತದೆ.

೭-೧೩. "ಈ ಆತ್ಮತತ್ತ್ವವು ಎಷ್ಟೋ ಜನರಿಗೆ ಕಿವಿಗೇ ಬೀಳುವದಿಲ್ಲ; ಕೆಲವರಿಗೆ ಕಿವಿಗೆ ಬಿದ್ದರೂ ಅದು ತಿಳಿಯುವದೇ ಇಲ್ಲ ಇದನ್ನು ತಿಳಿಸಿಕೊಡುವ ಗುರುವೂ ತಿಳಿಯುವ ಶಿಷ್ಯನೂ ಅದ್ಭುತಪ್ರಜ್ಞರಾಗಿರಬೇಕು. ಸಂಪ್ರದಾಯವನ್ನು ಬಲ್ಲ ಆಚಾರ್ಯನು ಹೇಳಿದ ಮಾತಿನಿಂದ ಆತ್ಮತತ್ತ್ವವು ತಿಳಿದೀತೇ ಹೊರತು ಬರಿಯ ತರ್ಕಕ್ಕೆ ಎಂದಿಗೂ ಗೋಚರವಾಗದು ಈ ಸೂಕ್ಷ್ಮತತ್ತ್ವವನ್ನು ತಿಳಿಯುವದಕ್ಕೆಂದು ನೀನು ಬ್ರಹ್ಮಪದವಿಯನ್ನು ಕೂಡ ಕಡೆಗಣಿಸಿದೆಯಲ್ಲ! ಇದು ನಿನ್ನ ಉತ್ತಮ ಯೋಗ್ಯತೆಯನ್ನು ತೋರಿಸುತ್ತದೆ ಪ್ರಾಣಿಗಳ ಹೃದಯದಲ್ಲಿಯೇ ಇದ್ದರೂ ಈ ತತ್ತ್ವವು ಅಧ್ಯಾತ್ಮಯೋಗವನ್ನು ಬಲ್ಲವರಿಗೆ ಮಾತ್ರ ಗೊತ್ತಾಗುವದು. ಶ್ರವಣಮನನಗಳಿಂದ ಇದನ್ನು ವಿವೇಚನೆಮಾಡಿ ತಿಳಿದುಕೊಂಡವರಿಗೆ ಪರಮಾನಂದವೇ ಪ್ರಾಪ್ತಿಯಾಗುತ್ತದೆ ಇದನ್ನು ನೀನು ಬಯಸಿದ್ದು ನಿನಗೆ ಬ್ರಹ್ಮಪ್ರಾಪ್ತಿಯಾಗುವದೆಂಬುದಕ್ಕೆ ಸೂಚನೆಯಾಗಿದೆ"

೧೪-೧೭ ಹೀಗೆಂದು ತನ್ನಲ್ಲಿ ಪ್ರಸನ್ನನಾಗಿ ನುಡಿದ ಯಮನನ್ನು ನಚಿಕೇತನು "ಹಾಗಾದರೆ ನಾನು ಕೇಳಿರುವಂತೆ ಧರ್ಮಾಧರ್ಮಗಳನ್ನೂ ಕ್ರಿಯಾಕಾರಕಫಲಗಳನ್ನೂ ಕಾಲತ್ರಯವನ್ನೂ ಮೀರಿರುವ ಈ ಆತ್ಮತತ್ತ್ವವನ್ನು ಹೇಳು"/ ಎಂದು ಮತ್ತೆ ಬೇಡಿಕೊಂಡನು. ಆಗ

ಯಮನು ಹೇಳುತ್ತಾನೆ. “ನಚಿಕೇತನೆ, ವೇದಪ್ರತಿಪಾದ್ಯವಾಗಿ ಬ್ರಹ್ಮಚರ್ಯಾದಿಸಾಧನಗಳಿಂದ ಪಡೆಯಬೇಕಾಗಿರುವ ಈ ಆತ್ಮನಿಗೆ ಓಂಕಾರವು ವಾಚಕವೂ ಪ್ರತೀಕವೂ ಆಗಿರುವದು. ಓಂಕಾರವು ಪರಾಪರಬ್ರಹ್ಮಗಳೆರಡಕ್ಕೂ ಪ್ರತೀಕವಾಗಿರುವದರಿಂದ ಇದನ್ನು ಬ್ರಹ್ಮವೆಂದು ಉಪಾಸನೆಮಾಡಿದರೆ ಆ ಎರಡನ್ನೂ ಪಡೆಯಬಹುದು

೧೮-೨೨. “ಈ ಓಂಕಾರದ ಮೂಲಕವಾಗಿ ತಿಳಿಯುವ ಬ್ರಹ್ಮದ ಸಾಕ್ಷಾತ್ಸ್ವರೂಪವನ್ನು ಹೇಳುವೆನು ಕೇಳು. ಇದಕ್ಕೆ ಹುಟ್ಟುವದು, ಬೆಳೆಯುವದು ಮುಂತಾದ ವಿಕಾರಗಳಿಲ್ಲ. ಶರೀರದಲ್ಲಿಯೇ ಇರುತ್ತಿದ್ದರೂ ಶರೀರದ ವಿಕಾರಗಳು ಯಾವವೂ ಇದಕ್ಕಿಲ್ಲವಾಗಿ ಇದು ಧರ್ಮಾಧರ್ಮಾದಿಗಳನ್ನು ಮೀರಿರುವದು ಎಲ್ಲಾ ನಾಮರೂಪಗಳೂ ಇದಕ್ಕೆ ಉಪಾಧಿಯಾಗಿರುತ್ತವೆ, ಇದು ಅಣುವಿಗಿಂತ ಅಣು, ಮಹತ್ತಿಗಿಂತ ಮಹತ್ತು ವಿಜ್ಞಾನಸ್ವರೂಪದಲಿರುವ ಇದಕ್ಕೆ ಯಾವ ವಿಕಾರವೂ ನಿಜವಾಗಿರುವದಿಲ್ಲ. ವಿಶೇಷಜ್ಞಾನದ ಅಂತಃಕರಣದಲ್ಲಿದ್ದುಕೊಂಡು ನಾನಾಚಲನೆಗಳನ್ನು ಪಡೆಯುವಂತೆ ತೋರಿಕೊಳ್ಳುತ್ತಿರುವದು. ನಿಶ್ಚಯವಾಗಿ ಇದಕ್ಕೆ ಶರೀರವೇ ಇಲ್ಲದ್ದರಿಂದ ಸರ್ವವ್ಯಾಪಿಯೂ ಕೂಟಸ್ಥಜ್ಞಾನರೂಪವೂ ಆಗಿರುತ್ತದೆ. ಇದೇ ನಾನೆಂದು ಅರಿತುಕೊಂಡವನಿಗೆ ಶೋಕವು ಇಲ್ಲವಾಗುತ್ತದೆ

೨೩-೨೫ “ನಿಷ್ಕಾಮನಾಗಿ ಆತ್ಮನನ್ನೇ ಬಯಸುವದೇ ಆತ್ಮಜ್ಞಾನಕ್ಕೆ ಮುಖ್ಯ ಸಾಧನವು ಕೆಟ್ಟ ನಡತೆಯನ್ನು ಬಿಟ್ಟು ಮನಸ್ಸಮಾಧಾನವನ್ನು ಹೊಂದಿ ಗುರುವಿನ ಮೂಲಕ ತಿಳಿದುಕೊಳ್ಳುವವನಿಗೆ ಬ್ರಹ್ಮದ ಯಾಥಾತ್ಮ್ಯವು ತಿಳಿಯುವದು ಯಾವ ಧರ್ಮಕ್ಕೂ ನಿಲುಕದೆ ನಿತ್ಯವಾಗಿರುವ ಈ ಬ್ರಹ್ಮತತ್ತ್ವವು ಇಂಥ ಅಧಿಕಾರಿಗೊಬ್ಬನಿಗೇ ತಿಳಿಯುವದು.

## ಒಂದನೆಯ ಅಧ್ಯಾಯ—ಮೂರನೆಯ ವಲ್ಲಿ

೧-೨. “ಈ ಶರೀರದಲ್ಲಿ ಇಬ್ಬರು ಆತ್ಮರಿರುವರು. ಇವರಲ್ಲಿ ಒಬ್ಬನು ನಾವುಗಳು ಕಲ್ಪಿಸಿಕೊಂಡಿರುವ ಸಂಸಾರಿಯು, ಇನ್ನೊಬ್ಬನು ಪರಮಾರ್ಥವಾಗಿರುವ ಅಸಂಸಾರಿಯು. ಜ್ಞಾನಿಗಳೂ ಪಂಚಾಗ್ನಿವಿದ್ಯೆ, ನಾಚಿಕೇತಾಗ್ನಿವಿದ್ಯೆ—ಇವುಗಳನ್ನು ಬಲ್ಲವರೂ ಅಸಂಸಾರಿಯಾದ ಬ್ರಹ್ಮವನ್ನು ಹೊಂದುವರು.

೩-೯. “ಶರೀರನೆಂಬುದೊಂದು ರಥವು, ಆತ್ಮನೇ ರಥಿ, ಬುದ್ಧಿಯು ಸಾರಥಿ; ಮನಸ್ಸು ಕಡಿವಾಣವು, ಇಂದ್ರಿಯಗಳು ಕುದುರೆಗಳು, ಶಬ್ದಾದಿವಿಷಯಗಳು ಆ ಕುದುರೆಗಳು ನಡೆಯುವ ರಸ್ತೆಗಳು. ಶರೀರೇಂದ್ರಿಯಮನಸ್ಸುಗಳಿಂದೊಡಗೂಡಿರುವ ಜೀವನು ಈ ರಥದಲ್ಲಿ ಪ್ರಯಾಣಮಾಡುತ್ತಾ ಸಂಸಾರವನ್ನೂ ಮೋಕ್ಷವನ್ನೂ ಪಡೆಯುತ್ತಿರುವನು. ಬುದ್ಧಿಯೆಂಬ ಸಾರಥಿಯು ಅವಿವೇಕಿಯಾಗಿದ್ದರೆ ಕುದುರೆಗಳನ್ನು ಮನಬಂದ ದಾರಿಯಲ್ಲಿ ಕೈಬಿಡುತ್ತಾನೆ; ರಥಿಕನಾದ ಜೀವನು ಆಗ ಸಂಸಾರದಲ್ಲಿ ತೊಳಲಬೇಕಾಗುವದು. ಆದರೆ ಆ ಸಾರಥಿಯು ವಿವೇಕಿಯಾಗಿದ್ದರೆ ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಂಡು ಮತ್ತೆ ಸಂಸಾರಕ್ಕೆ ಹಿಂತಿರುಗುವ ಸಂಭವವಿಲ್ಲದ ವಿಷ್ಣುಪದವಿಯನ್ನೇ ಮುಟ್ಟಿಸುತ್ತಾನೆ.

೧೦-೧೧. “ಈ ಪರಮಾತ್ಮಸ್ಥಾನವನ್ನು ವಿವೇಕದಿಂದ ಸೇರುವ ಬಗೆ ಹೇಗೆಂದರೆ ಇಂದ್ರಿಯ, ವಿಷಯ, ಮನಸ್ಸು, ಬುದ್ಧಿ, ಮಹತ್ತು, ಅವ್ಯಾಕೃತ-ಇವು ಒಂದಕ್ಕಿಂತ ಒಂದು

ಸೂಕ್ಷ್ಮವಾಗಿರುವವು. ಇವುಗಳೆಲ್ಲವೂ ಆತ್ಮನಲ್ಲಿ ಕಲ್ಪಿತವಾಗಿರುವದರಿಂದ ಇವೆಲ್ಲವನ್ನೂ ತುಂಬಿಕೊಂಡಿರುವ ಆತ್ಮನೇ ಕೊನೆಯ ತತ್ತ್ವ. ಈ ಆತ್ಮತತ್ತ್ವವನ್ನು ಮೇಲೆ ಹೇಳಿದಂತೆ ಸ್ಥೂಲಸೂಕ್ಷ್ಮತಾರತಮ್ಯದಿಂದ ಅರಿತುಕೊಂಡರೆ ಇನ್ನೇನೂ ಅರಿಯಬೇಕಾದದ್ದಿರುವದಿಲ್ಲ ವಾದಕಾರಣ ಅದೇ ಕೊನೆಯ ಗತಿಯಾಗಿರುತ್ತದೆ

೧೨-೧೫. " ಈ ಆತ್ಮನು ಎಲ್ಲರಲ್ಲಿಯೂ ಇರುತ್ತಿದ್ದರೂ ಸ್ಥೂಲಬುದ್ಧಿಗಳಿಗೆ ಗೊತ್ತಾಗುವದಿಲ್ಲ. ಸೂಕ್ಷ್ಮವಾಗಿ ನೋಡುವವರಿಗೆ ಮಾತ್ರ ಕಾಣುತ್ತಾನೆ. ಇಂದ್ರಿಯಗಳನ್ನು ಮನಸ್ಸಿನಲ್ಲಿ ಲಯಗೊಳಿಸಿ, ಆ ಮನಸ್ಸನ್ನು ಬುದ್ಧಿಯಲ್ಲಿ ಲಯಿಸಿಕೊಂಡು, ಆ ಬುದ್ಧಿಯನ್ನು ಹಿರಣ್ಯಗರ್ಭನ ಬುದ್ಧಿಯಲ್ಲಿಟ್ಟು ಅತ್ಯಂತವಾಗಿ ನಿರ್ಮಲಗೊಳಿಸಿಕೊಂಡು ಕೊನೆಗೆ ಬುದ್ಧಿಯಲ್ಲಿ ಆಗುವ ಎಲ್ಲಾ ಅರಿವುಗಳಿಗೂ ಸಾಕ್ಷಿಯಾದ ಕೂಟಸ್ಥನಾದ ಆತ್ಮನಲ್ಲಿ ಆ ಬುದ್ಧಿಯನ್ನೂ ಲಯಮಾಡಿಕೊಳ್ಳಬೇಕು. ಇದನ್ನು ಅರಿಯುವ ದಾರಿಯು ಕ್ಷೌರಕತ್ತಿಯ ಅಲುಗಿನ ಮೇಲೆ ನಡೆಯುವಷ್ಟು ಎಚ್ಚರಿಕೆಯಿಂದ ಹೋಗತಕ್ಕದ್ದಾದ್ದರಿಂದ ವಿವೇಕದಿಂದಲೂ ಸದ್ಗುರುವಿನ ಉಪದೇಶದಿಂದಲೂ ಇದನ್ನು ಅರಿತುಕೊಳ್ಳಬೇಕು. ಈ ಆತ್ಮನು ಬಲು ಸೂಕ್ಷ್ಮವಾಗಿರುವನು ಈ ಆತ್ಮತತ್ತ್ವಕ್ಕೆ ಶಬ್ದವಿಲ್ಲ, ಸ್ಪರ್ಶವಿಲ್ಲ, ರೂಪವಿಲ್ಲ, ರಸವಿಲ್ಲ, ಗಂಧವಿಲ್ಲ, ಆದಿಯಿಲ್ಲ, ಅಂತ್ಯವಿಲ್ಲ; ಇದು ಎಲ್ಲಕ್ಕೂ ವ್ಯಾಪಕವಾಗಿ ಅಲುಗಾಡದೆ, ಸವೆಯದೆ, ಒಂದೇ ರೂಪದಲ್ಲಿರುವದು "

೧೬-೧೭. ನಚಿಕೇತನಿಗೆ ಯಮನು ಹೇಳಿರುವ ಈ ಉಪಾಖ್ಯಾನವನ್ನು ಯೋಗ್ಯರಿಂದ ಕೇಳಿ ಯೋಗ್ಯರಿಗೆ ಉಪದೇಶಮಾಡಿದವನಿಗೆ ಉತ್ತಮಗತಿಯಾಗುತ್ತದೆ ಬ್ರಹ್ಮಸಭೆಯಲ್ಲಾಗಲಿ, ಶ್ರಾದ್ಧಕಾಲದಲ್ಲಿ ಭೋಜನಮಾಡುತ್ತಿರುವ ಬ್ರಾಹ್ಮಣರೆದುರಿಗೇ ಆಗಲಿ ಇದನ್ನು ಶ್ರವಣಮಾಡಿಸಿದರೆ ಅನಂತಫಲವುಂಟು.

## ಎರಡನೆಯ ಅಧ್ಯಾಯ—ಒಂದನೆಯ ವಲ್ಲಿ

೧-೨. " ಇಂದ್ರಿಯಗಳಿಗೆ. ಸ್ವಭಾವದಿಂದ ಹೊರನೋಟವೇ ಇರುತ್ತದೆ. ಆದ್ದರಿಂದ ಇಂದ್ರಿಯಗಳಿಗೆ ವಶನಾದವನು ವಿಷಯಗಳನ್ನು ಕಂಡಾನೇ ಹೊರತು ಒಳಗಿನ ಆತ್ಮನನ್ನು ನೋಡಲಾರನು. ಇಂದ್ರಿಯಗಳಿಂದಾಗುವ ವಿಷಯಸುಖವು ಅನಿತ್ಯವೆಂಬುದನ್ನು ತಿಳಿದುಕೊಂಡವನು ಆ ಇಂದ್ರಿಯಗಳನ್ನು ಬಿಗಿಹಿಡಿದು ಒಳಗಿನ ಆತ್ಮನನ್ನೇ ನೋಡುವನು.

೩-೧೦ " ಇಂದ್ರಿಯಗಳಿಂದ ವಿಷಯಗಳನ್ನು ತಿಳಿಯುವಾಗ ನಮಗೆ ಉಂಟಾಗುವಂತೆ ತೋರುವ ಅರಿವೇ ನಮ್ಮ ಆತ್ಮನು. ಕರ್ಮಫಲವನ್ನು ಅನುಭವಿಸುವಂತಿರುವ ನಮ್ಮ ಆತ್ಮನೂ ಕರ್ಮೋಪಾಸನೆಗಳಿಗೆ ಗುರಿಯಾಗಿರುವ ಸಮಸ್ತಜಗತ್ತಿನ ಸೃಷ್ಟಿಕರ್ತನಾದ ಈಶ್ವರನೂ ಬೇರೆಯಲ್ಲ. ಯಾವ ಸಂಸಾರವೂ ಇಲ್ಲದ ಒಬ್ಬ ಆತ್ಮನೇ ಈ ಎರಡು ಬಗೆಯಲ್ಲಿಯೂ ತೋರಿಕೊಳ್ಳುತ್ತಿರುವನು.

೧೧-೧೫. " ನಮ್ಮ ಆತ್ಮನು ಹೃದಯವೇ ಮುಂತಾದ ಅಳತೆಗೆ ಕಟ್ಟುಬಿದ್ದಿರುವಂತೆ ಅವಿದ್ಯೆಯ ದೃಷ್ಟಿಯಿಂದ ಕಾಣುತ್ತಿದ್ದರೂ ಸರಿಯಾಗಿ ನೋಡಿದರೆ ಇವನೇ ಅನಂತವಾದ ಬ್ರಹ್ಮವಾಗಿರುವನು. ಇವನಲ್ಲಿ ಭೇದವನ್ನು ಕಂಡಾತನಿಗೆ ಸಂಸಾರವೂ ಅಭೇದವನ್ನು ಕಂಡಾತನಿಗೆ ಬ್ರಹ್ಮಸಾಯುಜ್ಯವೂ ದೊರೆಯುವವು.

## ಎರಡನೆಯ ಅಧ್ಯಾಯ—ಎರಡನೆಯ ವಲ್ಲಿ

೧-೨. " ಈ ನಮ್ಮ ಶರೀರದಲ್ಲಿರುವ ಆತ್ಮನೇ ಬ್ರಹ್ಮವಾದ್ದರಿಂದ ಇವನ ಸ್ವರೂಪ ವನ್ನು ಅರಿತರೆ ಸಂಸಾರದ ಕಟ್ಟು ಕಳಚಿಕೊಳ್ಳುವದು. ಮುಂದಕ್ಕೆಂದಿಗೂ ಸಂಸಾರದಲ್ಲಿ ಕಾಲಿಡದೆ ಇರುವನು. ಎಲ್ಲಾ ಶರೀರಗಳಲ್ಲಿ ಈ ಒಬ್ಬ ಆತ್ಮನೇ ಇರುವನೆಂದು ತಿಳಿಯಬೇಕು.

೩-೭. " ಇಂದ್ರಿಯಗಳ ಕಾರ್ಯವೂ ಪ್ರಾಣವೃತ್ತಿಗಳೂ ಈ ಆತ್ಮನಿಗಾಗಿಯೇ ನಡೆಯು ತ್ತಿರುವವು. ಈ ಆತ್ಮನೇ ಕಾರ್ಯಕರಣಗಳಿಗೆಲ್ಲ ಬಲವನ್ನು ಕೊಟ್ಟಿರುವವನು ; ಇವನಿಂದಲೇ ಪ್ರೇರಿತವಾಗಿ ಅವು ಒಂದರೊಡನೊಂದು ಸೇರಿಕೊಂಡು ಕೆಲಸಮಾಡುತ್ತಿರುವವು. ಹೀಗೆ ನಾನಾವಿಧದಿಂದ ಸಿದ್ಧವಾಗಿರುವ ಆತ್ಮನನ್ನು ಬ್ರಹ್ಮವೆಂದು ಅರಿಯಬೇಕು, ಇಲ್ಲದಿದ್ದರೆ ಸ್ಥಾವರಜಂಗಮರೂಪವಾದ ನಾನಾಶರೀರಗಳನ್ನು ಪಡೆಯುತ್ತಿರುವದೇ ಗತಿಯಾಗುವದು

೮-೧೧. " ಇಂದ್ರಿಯಾದಿಗಳು ತಮ್ಮ ಕೆಲಸವನ್ನು ಮಾಡದೆ ಇರುವ ಕನಸಿನಲ್ಲಿಯೂ ಈ ಆತ್ಮನು ಬೇರೆ ಬೇರೆ ವಸ್ತುಗಳನ್ನು ಬೇಕಾದಂತೆ ನಿರ್ಮಿಸಿಕೊಂಡು ಇರುವನು. ಇವನೇ ಬ್ರಹ್ಮವು. ಸಮಸ್ತ ಲೋಕಗಳೂ ಇವನನ್ನೇ ಆಶ್ರಯಿಸಿಕೊಂಡಿರುವವು ; ಇವನನ್ನು ಮೀರಿ ಯಾವದೂ ಇರಲಾರದು ಬೆಂಕಿಯು ತಾನು ಸುಡುವ ಕಟ್ಟಿಗೆಯೇ ಮುಂತಾದವುಗಳನ್ನು ಹೊಕ್ಕು ಆಯಾ ಆಕಾರಗಳನ್ನು ಹೊಂದುವಂತೆಯೂ, ವಾಯುವು ಕೊಳಲು ಮುಂತಾದವುಗಳನ್ನು ಹೊಕ್ಕು ಬೇರೆ ಬೇರೆ ಸ್ವಭಾವವನ್ನು ಹೊಂದುವಂತೆಯೂ ಕಂಡರೂ ಅವೆರಡೂ ತಮ್ಮ ತಮ್ಮ ರೂಪದಿಂದ ಶುದ್ಧವಾಗಿ ಬೇರೆ ಇದ್ದುಕೊಂಡೇ ಇರುವಂತೆ ಆತ್ಮನು ಎಲ್ಲಾ ಶರೀರಗಳಲ್ಲಿಯೂ ಬೇರೆಬೇರೆಯಾಗಿ ಭೋಕ್ತೃವಾಗಿ ಕಾಣುತ್ತಿದ್ದರೂ ನಿಜವಾಗಿ ತಾನು ಆ ಶರೀರಗಳಿಗಿಂತ ಬೇರೆಯಾಗಿಯೇ ತನ್ನ ಶುದ್ಧವಾದ ರೂಪದಲ್ಲಿ ಇರುತ್ತಿರುವನು. ಸೂರ್ಯನು ಎಲ್ಲಾ ಪದಾ ರ್ಥಗಳನ್ನೂ ಬೆಳಗುತ್ತಿದ್ದರೂ ಆಯಾ ವಸ್ತುಗಳನ್ನು ನೋಡಿದ ಪುಣ್ಯಾಪುಣ್ಯಗಳಿಗೆ ಹೊರಚ್ಚಾ ಗಿರುವಂತೆಯೇ ಈ ಆತ್ಮನು ಎಲ್ಲರ ಅಂತರಾತ್ಮನಾಗಿರುತ್ತಿದ್ದರೂ ಅವಿದ್ಯೆಯಿಂದ ಜೀವರು ಕಲ್ಪಿಸಿಕೊಳ್ಳುತ್ತಿರುವ ಸಂಸಾರದೋಷಗಳಿಗೆ ಹೊರಚ್ಚಾಗಿಯೇ ಇರುವನು.

೧೨-೧೩. " ಹೀಗೆ ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ ಆತ್ಮನು ಕಾರ್ಯಕಾರಣಸಂಘಾತ ಗಳಿಗೆಲ್ಲ ಚೇತನನಾಗಿ ಅವುಗಳನ್ನು ಆಯಾ ಕರ್ಮಗಳಲ್ಲಿ ಪ್ರೇರಿಸುತ್ತಾ ಫಲದಾತೃವಾಗಿರು ತ್ತಿದ್ದರೂ ತಾನು ಯಾವ ವಿಕಾರವೂ ಇಲ್ಲದೆ ತನ್ನ ನಿತ್ಯಶುದ್ಧಸ್ವರೂಪದಲ್ಲಿಯೇ ಇರುವನೆಂದು ಯಾರು ಗುರುವಿನ ಉಪದೇಶವನ್ನು ಹೊಂದಿ ಅರಿತುಕೊಳ್ಳುವರೋ ಅವರಿಗೆ ಮಾತ್ರ ಶಾಶ್ವತ ಸುಖವಾದ ಮೋಕ್ಷವು ದಕ್ಕುವದು.

೧೪-೧೫. " ಈ ಆತ್ಮವಸ್ತುವು ನಮ್ಮಂಥ ಅಜ್ಞರಿಗೂ ತೋರೀತೆ ?_ಎಂದು ಸಂದೇಹ ಪಡಲು ಕಾರಣವಿಲ್ಲ, ಏಕೆಂದರೆ ಅದು ಸ್ವಪ್ರಕಾಶವಾದ ನಮ್ಮ ಸ್ವರೂಪವೇ ಆಗಿರುತ್ತದೆ.

## ಎರಡನೆಯ ಅಧ್ಯಾಯ—ಮೂರನೆಯ ವಲ್ಲಿ

೧-೪. " ಅನಾದಿಯಾಗಿ ಅನಂತವಾಗಿರುವಂತೆ ತೋರುತ್ತಿರುವ ಈ ಸಂಸಾರವೆಂಬ ವೃಕ್ಷಕ್ಕೆ ಬೇರಿನಂತೆ ಆಧಾರವಾಗಿರುವದೇ ಬ್ರಹ್ಮವು. ಅದರ ಕಟ್ಟಲೆಯಿಂದಲೋ ಎಂಬರೀತಿ ಸೂರ್ಯ, ಚಂದ್ರ, ಅಗ್ನಿ, ವಾಯು_ಮೊದಲಾದವರು ವ್ಯವಸ್ಥೆಯಿಂದ ಕೆಲಸ ಮಾಡುತ್ತಿರುವರು.

೫. “ಸರಿಯಾಗಿ ವಿಚಾರಮಾಡಿದರೆ ಈ ಲೋಕದಲ್ಲಿಯೇ ನಮ್ಮ ಅಂತಃಕರಣದಲ್ಲಿಯೆ ಆತ್ಮನ ನಿಜವು ಸ್ಫುಟವಾಗಿ ತೋರುವದು; ಲೋಕಾಂತರದಲ್ಲಿ ಇಷ್ಟು ಸ್ಪಷ್ಟವಾಗಿ ತೋ ಲಾರದು. ಬ್ರಹ್ಮಲೋಕದಲ್ಲಿ ಚೆನ್ನಾಗಿ ವಿಂಗಡವಾಗಿ ತಿಳಿಯಬರುವದೆಂದು ಶಾಸ್ತ್ರದ ಹೇಳಿದೆ, ನಿಜ; ಆದರೆ ಆ ಲೋಕವನ್ನು ಪಡೆಯುವದಕ್ಕೆ ಉತ್ಕೃಷ್ಟವಾದ ಕರ್ಮೋಪಾಸ ಗಳು ಬೇಕಾಗುವದರಿಂದ ಅದು ಸಿಕ್ಕುವದು ಬಲು ಕಷ್ಟ. ಆದ್ದರಿಂದ ಈ ಲೋಕದಲ್ಲಿಯೆ ಆತ್ಮತತ್ತ್ವವನ್ನು ತಿಳಿದುಕೊಳ್ಳಬೇಕು.

೬-೧೧. “ಇಂದ್ರಿಯಾದಿಗಳಲ್ಲಿ ಜ್ಞಾನವುಉಂಟಾಗಲಿ ಹೋಗಲಿ, ಆತ್ಮನು ತನ್ನ ಸ್ವರೂ ದಿಂದಲೇ ಇರುವನೆಂತಲೂ ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ_ಮುಂತಾದವುಗ ನ್ನೆಲ್ಲ ಮೀರಿ ಯಾವ ಸಂಸಾರಧರ್ಮವೂ ಇಲ್ಲದವನಾಗಿರುವನೆಂತಲೂ ಅರಿತುಕೊಂಡಾತನ ಮೋಕ್ಷವನ್ನು ಹೊಂದುವನು. ಈ ಆತ್ಮನನ್ನು ಇಂದ್ರಿಯಗಳಿಂದ ನೋಡುವದಕ್ಕೆ ಆಗುವದಿಲ್ಲ ಮನಸ್ಸಿನಲ್ಲಿಯೇ ವಿಚಾರಮಾಡಿ ಅರಿತುಕೊಳ್ಳಬೇಕು. ಇಂದ್ರಿಯಾದಿಗಳ ವ್ಯಾಪಾರವಿಲ್ಲದಂ ಅವುಗಳನ್ನು ನಿಲ್ಲಿಸಿಕೊಳ್ಳುವ ಅವಸ್ಥೆಗೆ ಯೋಗವೆಂದು ಹೆಸರು, ಆ ಅವಸ್ಥೆಯಲ್ಲಿ ಆತ್ಮನ ತನ್ನ ಸ್ವರೂಪದಲ್ಲಿಯೇ ಇರುವನು. ಆದ್ದರಿಂದ ಅಂಥ ಯೋಗವನ್ನು ಅಭ್ಯಾಸಮಾಡುವದ ಆತ್ಮಜ್ಞಾನಕ್ಕೆ ಸಾಧಕವಾಗಿರುವದು.

೧೨-೧೬. “ಆತ್ಮನು ಇಂದ್ರಿಯಗಳಿಗಾಗಲಿ ಮನಸ್ಸಿಗಾಗಲಿ ಗೋಚರವಾಗುವವನಲ್ಲವ ದರೂ ಸಮಸ್ತಜಗತ್ತಿಗೂ ಆಧಾರವಾಗಿರುವದರಿಂದ ಅವನು ಇದಾನೆಂಬುದೇ ಸರಿಯಾ ತಿಳಿವಳಿಕೆ. ಅವನು ಇರುವದರಿಂದಲೇ ಈ ಜಗತ್ತೆಲ್ಲ ‘ಇದೆ’ ಎಂಬ ಅರಿವಿಗೆ ಗೋಚರವ ಗುತ್ತದೆ. ಆದರೆ ‘ಇದೆ’ ಎಂಬುದೂ ಒಂದು ಉಪಾಧಿಯಿಂದ ತಿಳಿದ ಸ್ವರೂಪವು; ಆದ್ದ ರಿಂದ ಯಾವ ಉಪಾಧಿಯೂ ಇಲ್ಲದಿರುವ ಆತ್ಮನನ್ನು ಇರುವನೆಂದಾಗಲಿ ಇಲ್ಲವೆಂದಾಗ ಹೇಳುವದಕ್ಕಿಲ್ಲ. ಇರುವಿಕೆಯೇ ಮುಂತಾದ ಯಾವ ವಿಶೇಷವೂ ಆತ್ಮನಲ್ಲಿಲ್ಲವೆಂಬುದೆ ಸರಿಯಾದ ತಿಳಿವು. ನಮ್ಮ ಬುದ್ಧಿಯಲ್ಲಿ ಗಂಟುಹಾಕಿಕೊಂಡಿರುವ ತಪ್ಪು ತಿಳಿವುಗಳೆಲ್ಲ ಹೋದರೆ ಆ ತಪ್ಪು ತಿಳಿವಿನಿಂದ ಆಗಿರುವ ಕಾಮಗಳೆಲ್ಲ ತೊಲಗುವವು; ಕಾಮಗಳೆಲ್ಲ ಹೋದರೆ ಕಾಮದಿಂದಾಗಿರುವ ಜನನಮರಣಸಂಸಾರವೂ ಹೋಗಿ ನಾಶವಿಲ್ಲದ ಬ್ರಹ್ಮ ಸ್ವರೂಪವೇ ಪ್ರಾಪ್ತವಾಗುವದು. ಈ ಸ್ವರೂಪವನ್ನು ಇಲ್ಲಿಯೇ ಕಂಡುಕೊಳ್ಳಬಹುದು ಆದರೆ ಬ್ರಹ್ಮೋಪಾಸನೆಯನ್ನು ಮಾಡುವವರು ಉಪಾಸನೆಯ ಬಲದಿಂದ ಸುಷುಮ್ನಾನಾಡಿಯ ಮಾರ್ಗವಾಗಿ ಬ್ರಹ್ಮಲೋಕಕ್ಕೆ ಹೋಗಿ ಬಹುಕಾಲವಿರುವ ಅಪೇಕ್ಷಿಕವಾದ ಅಮೃತತ್ವವನ್ನು ಪಡೆಯುವರು, ಅಲ್ಲಿಯೂ ಜ್ಞಾನವುಂಟಾದರೆ ಮಾತ್ರ ಮುಖ್ಯವಾದ ಅಮೃತತ್ವವೂ ದೊರಕು ತ್ತದೆ. ಆದ್ದರಿಂದ ಇಲ್ಲಿಯೇ ಜ್ಞಾನದಿಂದ ಮುಕ್ತರಾಗಲು ಯತ್ನಿಸಬೇಕು.

೧೭-೧೮. ಒಟ್ಟು ಸಾರಾಂಶವೇನೆಂದರೆ, ಜನರ ಹೃದಯದಲ್ಲಿರುವ ಆತ್ಮನ ಸ್ವರೂಪವು ಈಗ ಸಂಸಾರಿಯಾದ ಸಣ್ಣ ಆತ್ಮನೆಂದು ತೋರುತ್ತಿದ್ದರೂ ಚೆನ್ನಾಗಿ ಅನಾತ್ಮಗಳಿಂದ ಬಿಡಿಸಿ ತಿಳಿದುಕೊಂಡರೆ ಅದೇ ಆತ್ಮನೇ ನಿಜವಾಗಿ ನಿತ್ಯಶುದ್ಧವಾಗಿ ಯಾವ ಸಂಸಾರಧರ್ಮವೂ ಇಲ್ಲದಿರುವ ಬ್ರಹ್ಮವೆಂದು ಗೊತ್ತಾಗುತ್ತದೆ. ಮೃತ್ಯುವು ಉಪದೇಶಿಸಿದ ಈ ಬ್ರಹ್ಮವಿದ್ಯೆಯನ್ನೂ ಯೋಗಮಾರ್ಗವನ್ನೂ ಅರಿತುಕೊಂಡು ನಚಿಕೇತನು ಬ್ರಹ್ಮವನ್ನು ಪಡೆದು ಪರಿಶುದ್ಧವಾದ ಸಂಸಾರವರ್ಜಿತವಾದ ಬ್ರಹ್ಮವಾದನು. ಇದರಂತೆ ಯಾರುಯಾರು ಈ ವಿದ್ಯೆಯನ್ನು ತಿಳಿದು ಕೊಳ್ಳುವರೋ ಅವರೆಲ್ಲ ಅಂಥ ಬ್ರಹ್ಮಸ್ವರೂಪವನ್ನೇ ಪಡೆದುಕೊಂಡು ಮುಕ್ತರಾಗುವರು.

# ಮನ್ತ್ರಗಳ ಅನುಕ್ರಮಣಿಕೆ

# ಶಬ್ದಾನುಕ್ರಮಣಿಕೆ

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯದಲ್ಲಿ ಯಾವ ಭಾಗದಲ್ಲಿ ಶಬ್ದವು ಬಂದಿದೆ ಎಂಬುದನ್ನು ಸೂಚಿಸುವವು.

**೩೭. ಆತ್ಮಾ—**
ತಾನು, ಜೀವನ ನಿಜವಾದ ಸ್ವರೂಪವಾಗಿರುವ ಪರಮಾತ್ಮ, ೩೨, ೩೩, ೩೫, ೩೭, ೫೬, ೫೭, ೫೮, ೫೯, ೬೧, ೬೩, ೬೪, ೭೧, ೭೨, ೭೩, ೭೪, ೭೫, ೭೬, ೭೭, ೭೮, ೭೯, ೮೦, ೮೧, ೮೨, ೮೩, ೮೫, ೮೭, ೮೮, ೧೦೨, ೧೦೬, ೧೧೪, ೧೧೬, ೧೧೭, ೧೨೩, ೧೨೯, ೧೩೧, ೧೩೨, ೧೩೬, ೧೩೭, ೧೩೮, ೧೩೯, ೧೪೪, ೧೪೮, ೧೪೯, ೧೫೦, ೧೫೧, ೧೬೨, ೧೬೪, ೧೬೫, ೧೬೯, ೧೭೫, ೧೭೬, ೧೭೭, ೧೭೮.

**೩೮. ಆತ್ಮೈಕತ್ವಮ್—**
ಆತ್ಮನು ಒಬ್ಬನೇ ಎಂಬುದು, ೧೨೯.

**೩೯. ಆತ್ಮೈಕತ್ವವಿಜ್ಞಾನಮ್—**
ಆತ್ಮನು ಒಬ್ಬನೇ ಎಂಬ ಅರಿವು, ೫೭, ೧೪೩

**೪೦. ಆತ್ಯನ್ತಿಕನಿಶ್ಶ್ರೇಯಸಮ್-**
ಪುನರಾವೃತ್ತಿಯಿಲ್ಲದ ಮುಕ್ತಿ, ೩೨.

**೪೧. ಆಪೇಕ್ಷಿಕಂ ನಿತ್ಯಮ್—**
ಒಂದಕ್ಕೆ ಹೋಲಿಸಿದರೆ ನಿತ್ಯವಾದ, ೬೧.

**೪೨. ಆಲಮ್ಬನಮ್—**
ಯಾವದನ್ನು ಬ್ರಹ್ಮವೆಂದು ಧ್ಯಾನಿಸಬೇಕೋ ಅಂಥ ಓಂಕಾರವೇ ಮುಂತಾದಪ್ಪು, ೬೯.

**೪೩. ಆಸುರಃ ಪಕ್ಷಃ—**
ಆತ್ಮನು ಇಲ್ಲವೆಂಬ, ದೇಹಾಭಿಮಾನಿಗಳಾದವರಿಗೆ ಮೆಚ್ಚಾದ, ಪಕ್ಷ, ೧೭೬.

**೪೪. ಉತ್ಕೃಷ್ಟಬ್ರಹ್ಮವಿದ್ಯಾ—**
ಹೆಚ್ಚಿನ ಬ್ರಹ್ಮದ, ಪರಬ್ರಹ್ಮದ, ವಿದ್ಯೆ, ೧೮೦.

**೪೫. ಉಪನಿಷತ್—**
ಬ್ರಹ್ಮಜ್ಞಾನ, ೨, ೩; ಅಗ್ನಿವಿದ್ಯೆ, ವಿರಾಡುಪಾಸನೆ, ೪; ಪರಾಪರ ಬ್ರಹ್ಮಜ್ಞಾನವನ್ನು ತಿಳಿಸುವ ಗ್ರಂಥ ೫.

**೪೬. ಉಪಾಧಿಃ—**
ಆತ್ಮನಲ್ಲಿಲ್ಲದ ಧರ್ಮವನ್ನು ಇರುವಂತೆ ತೋರಿಸುವದಕ್ಕೆ ಕಾರಣವಾಗಿರುವ ದೇಹಾದಿಗಳು, ೭೬, ೮೬, ೮೮, ೧೨೨, ೧೨೫, ೧೨೮, ೧೪೯, ೧೭೭.

**೪೭. ಏಕತ್ವಮ್—**
ಆತ್ಮನು ಒಬ್ಬನೇ ಆಗಿರುವದು, ೧೨೯.

**೪೮. ಏಕತ್ವವಿಜ್ಞಾನಮ್—**
ಆತ್ಮನು ಒಬ್ಬನೇ ಎಂಬುದನ್ನು ತಿಳಿದುಕೊಳ್ಳುವದು, ೧೨೩.

**೪೯. ಏಕದೇಶವಿಜ್ಞಾನಮ್—**
ಒಂದಂಶವಾದ ಅರಿವು, ಬಿಡಿಯರಿವು, ೭೬.

**೫೦. ಏಕರಸಮ್—**
ಒಂದೇ ಜಾತಿಯ, ಮತ್ತೊಂದರ ಬೆರಕೆಯಿಲ್ಲದ ಆತ್ಮ, ೧೨೩, ೧೨೯, ೧೪೯.

**೫೧. ಏಕಾಗ್ರತಾ—**
ಮನಸ್ಸನ್ನು ಒಕ್ಕಡೆಗೆ ನಿಲ್ಲುವಂತೆ ತಿದ್ದಿದ ವೃತ್ತಿ, ೧೦೧.

**೫೨. ಏಷಣಾ—**
ಮಕ್ಕಳು, ಕರ್ಮ, ಲೋಕ_ಇವುಗಳ ಬಯಕೆ, ೧೧೨, ೧೩೧, ೧೫೧.

**೫೩. ಓಂಶಬ್ದವಾಚ್ಯಮ್ —**
ಓಂ ಎಂಬ ಶಬ್ದದಿಂದ ಹೇಳಲ್ಪಡುವ ಬ್ರಹ್ಮ, ೬೭.

**೫೪. ಕಾರ್ಯಕರಣಾನಿ—**
ದೇಹೇಂದ್ರಿಯಗಳು, ೧೧೮, ೧೨೨, ೧೩೬.

೭೪. **ಧರ್ಮಃ**—
ಆತ್ಮ, ೩೫, ೩೭, ೧೨೭.

೭೫. **ನಾಮರೂಪಕರ್ಮತ್ರಯಮ್**
ನಾಮ, ರೂಪ, ಕರ್ಮ ಎಂಬ ಮೂರರ ರೂಪದಲ್ಲಿ ತೋರಿಕೊಳ್ಳುವ ಜಗತ್ತು, ೧೦೩.

೭೬. **ನಿತ್ಯವಿಜ್ಞಪ್ತಿಸ್ವರೂಪಮ್**—
ಯಾವಾಗಲೂ ಇರುವ ಅರಿವಿನ ಸ್ವರೂಪವಾದ ಬ್ರಹ್ಮ, ೧೦೬.

೭೭. **ನಿತ್ಯವಿಜ್ಞಾನಘನಸ್ವಭಾವಮ್**—
ನಿತ್ಯವಾದ ಅರಿವಿನ ಗಟ್ಟಿಯ ಸ್ವರೂಪವಾದ ಬ್ರಹ್ಮ, ೧೨೨.

೭೮. **ನಿರನ್ವಯಂ ಪ್ರವಿಲೀಯತೇ**
ಕಾರಣಸಹಿತವಾಗಿ ನಾಶವಾಗುತ್ತದೆ ಎಂಬ ನಾಸ್ತಿಕರ ಮತ, ೧೯೫.

೭೯. **ನಿರುಪಾಧಿಕಮ್**—
ಉಪಾಧಿಯಿಲ್ಲದ ಬರಿಯ ಆತ್ಮ ೧೭೬, ೧೭೭.

೮೦. **ನಿಶ್ಶ್ರೇಯಸಮ್**—
ಎಲ್ಲಕ್ಕೂ ಹೆಚ್ಚಿನ ಹಿತ, ಮುಕ್ತಿ, ೩೭, ೪೭.

೮೧. **ನಿವೃತ್ತಿಃ**—
ಕರ್ಮಗಳನ್ನು ಬಿಡುವದು, ಜ್ಞಾನಮಾರ್ಗ, ೮೯.

೮೨. **ಪಞ್ಚಾಗ್ನಯಃ**—
ಛಾಂದೋಗ್ಯದಲ್ಲಿ ಹೇಳಿರುವ ಪಂಚಾಗ್ನಿವಿದ್ಯೆಯನ್ನು ಬಲ್ಲವರು, ೮೪.

೮೩. **ಪರಂ ಬ್ರಹ್ಮ**—
ವೇದಾಂತದಲ್ಲಿ ತಿಳಿದುಕೊಳ್ಳಬೇಕೆಂದು ಹೇಳಿರುವ ಬ್ರಹ್ಮ, ೧, ೮೪, ೮೫, ೧೫೪, ೧೫೭.

೮೪. **ಪರಃ ಪುರುಷಾರ್ಥಃ**—
ಪುರುಷನು ಬಯಸುವ ಮಹಾಫಲಗಳಲ್ಲಿ ಮುಖ್ಯವಾದ ಮೋಕ್ಷ, ೩೩, ೪೪.

೮೫. **ಪರಮಾತ್ಮಾ**—
ಆತ್ಮನೆಂದು ನಾವು ತಿಳಿದುಕೊಂಡಿರುವವುಗಳೆಲ್ಲಕ್ಕೂ ಆತ್ಮನು, ೯೫.

೮೬. **ಪರಮಾರ್ಥಸತ್ಯಮ್**—
ನಿಜವಾಗಿಯೂ ಸತ್ಯವಾಗಿರುವದು, ಬ್ರಹ್ಮ, ೧೫೫..

೮೭. **ಪರಾರ್ಥಃ**—
ಮತ್ತೊಬ್ಬನ ಪ್ರಯೋಜನಕ್ಕಾಗಿರುವ ಅಧೀನದ ವಸ್ತು, ೧೩೮.

೮೮ **ಪಾಷಣ್ಡಾಃ**—
ಅಥವಾ 'ಪಾಖಣ್ಡಾಃ'; ಅವೈದಿಕ ಮತದವನು, ೧೫೪.

೮೯. **ಪುರುಷಃ**—
ಮನುಷ್ಯ, ೧೮, ೪೭; ಎಲ್ಲವನ್ನೂ ತುಂಬಿಕೊಂಡಿರುವ ಪರಮಾತ್ಮ ೯೮, ೧೦೦, ೧೨೫, ೧೨೬.

೯೦. **ಪುರುಷಾರ್ಥಃ**—
ಪುರುಷನು ಬಯಸುವದು, ೪೪, ೪೭.

೯೧. **ಪ್ರತೀಕಮ್** --
ಉಪಾಸನೆಗೆಂದು ಇಟ್ಟುಕೊಳ್ಳುವ ಗುರುತಿನ ವಸ್ತು; ಉದಾಹರಣೆಗೆ ಓಂಕಾರವು ಬ್ರಹ್ಮಕ್ಕೆ ಪ್ರತೀಕವು, ೬೮.

೯೨. **ಪ್ರತ್ಯಗಾತ್ಮಾ**—
ಒಳಗಿನ ತಿರುಳಾಗಿರುವದು, ಆತ್ಮ, ೭೮, ೯೬, ೯೭, ೯೯, ೧೦೦, ೧೦೮.

೯೩. **ಪ್ರತ್ಯವಾಯಃ**—
ಕರ್ಮವನ್ನು ಬಿಟ್ಟದ್ದರಿಂದ ಆಗುವ ದೋಷ, ೧೭.

**೧೧೨. ಬ್ರಹ್ಮಾದಯಃ—**
ಬ್ರಹ್ಮನೇ ಮೊದಲಾದ ಜೀವರು, ೧೫೦

**೧೧೩. ಬ್ರಹ್ಮಾದಿಸ್ತಮ್ಬಪರ್ಯನ್ತಾನಿ—**
"ಬ್ರಹ್ಮಾದಿಸ್ಥಾವರಾನ್ತಾನಿ". ಬ್ರಹ್ಮನಿಂದ ಹಿಡಿದು ಸ್ಥಾವರ ಪ್ರಾಣಿಯವರೆಗಿನವು, ೭೪, ೧೦೦, ೧೨೨.

**೧೧೪. ಭಗವಾನ್—**
ಸೂಕ್ಷ್ಮವಿಚಾರಗಳನ್ನು ಬಲ್ಲ ಪೂಜ್ಯನು ೧, ೬೫.

**೧೧೫. ಭೂತಸೂಕ್ಷ್ಮಮ್—**
ಭೂತಗಳ ಸೂಕ್ಷ್ಮರೂಪ, ೯೭.

**೧೧೬. ಭೋಕ್ತಾ—**
ಶರೀರ, ಇಂದ್ರಿಯಗಳು, ಮನಸ್ಸು—ಇವುಗಳಿಂದ ವಿಷಯಗಳನ್ನು ಅನುಭವಿಸುವ ಆತ್ಮ, ೮೮.

**೧೧೭. ಮನಃ—**
ಸಂಕಲ್ಪವಿಕಲ್ಪಗಳನ್ನು ಮಾಡುವ ಅಂತಃಕರಣವೃತ್ತಿ ; ಅಂತಃಕರಣವೆಂಬ ಅರ್ಥದಲ್ಲಿಯೂ ಈ ಶಬ್ದದ ಪ್ರಯೋಗವಾಗುತ್ತದೆ, ೮೭, ೮೮, ೮೯, ೧೨೩.

**೧೧೮. ಮನ್ದಬ್ರಹ್ಮವಿದಃ—**
ಬ್ರಹ್ಮವನ್ನು ಚೆನ್ನಾಗಿ ಅರಿಯದವರು, ಅಪರಬ್ರಹ್ಮವನ್ನು ಉಪಾಸನೆ ಮಾಡುವವರು, ೧೮೦.

**೧೧೯. ಮಹಾನ್ ಆತ್ಮಾ —**
ಅವ್ಯಕ್ತದಿಂದಾಗಿರುವ ಚಿದ್ರೂಪಜಡರೂಪಗಳ ಒಟ್ಟು, ಹಿರಣ್ಯಗರ್ಭನ ಬುದ್ಧಿ, ೯೭, ೧೦೨, ೧೬೬.

**೧೨೦. ಮಾಯಾ—**
ಕಣ್ಣುಕಟ್ಟಿನಿಂದ ತೋರುವ ವಸ್ತು, ೧೫೪, ೧೫೫ ; ಪರಮೇಶ್ವರನ ಮಾಯಾಶಕ್ತಿ, ೧೦೦ ; ಅವಿದ್ಯಾರೂಪದಿಂದ ತೋರಿಕೊಳ್ಳುವ ಮಾಯೆ, ೧೦೦.

**೧೨೧. ಮಿಥ್ಯಾಜ್ಞಾನವಿಜೃಮ್ಭಿತಮ್—**
ತಪ್ಪುತಿಳಿವಳಿಕೆಯಿಂದ ತೋರುವ ಭೇದ, ೧೦೩.

**೧೨೨. ಮೃತ್ಯುಃ—**
ಯಮ, ೨೪, ೨೫, ೨೬, ೪೧, ೪೫, ೧೮೫ ; ಅವಿದ್ಯಾಕಾಮಕರ್ಮಗಳು ೧೦೬, ೧೧೨, ೧೭೮; ಮರಣ, ೧೨೨, ೧೩೩.

**೧೨೩. ಮೃತ್ಯುಪಾಶಃ—**
ಅಧರ್ಮ, ಅಜ್ಞಾನ, ರಾಗ, ದ್ವೇಷ—ಮುಂತಾದವು, ೩೦ , ಜನನಮರಣಗಳು, ೧೮೨.

**೧೨೪. ಯೋಗಃ—**
ಆತ್ಮನನ್ನು ತಿಳಿಯುವದಕ್ಕೆ ಬೇಕಾದ ಸಾಧನ, ೬೩, ಇಂದ್ರಿಯಗಳನ್ನು ಸ್ಥಿರವಾಗಿ ಹಿಡಿದಿಟ್ಟುಕೊಳ್ಳುವದು, ೧೭೨

**೧೨೫. ಯೋಗಕ್ಷೇಮೌ—**
ಬೇಕಾದದ್ದನ್ನು ಸಂಪಾದಿಸಿಕೊಳ್ಳುವದು, ಅದನ್ನು ಕಾಪಾಡಿಕೊಳ್ಳುವದು, ೪೯.

**೧೨೬. ಲಿಙ್ಗಮ್—**
ಗುರುತು, ಆತ್ಮನನ್ನರಿತುಕೊಳ್ಳುವದಕ್ಕೆ ಬೇಕಾದದ್ದು, ೨೦, ೧೩೪.

**೧೨೭. ವಾಸುದೇವಾಖ್ಯಃ—**
ಪರಮಾತ್ಮನು, ೯೫.

**೧೨೮. ವಿಜ್ಞಾನಕ್ರಿಯಾಶಕ್ತಿದ್ವಯಮ್—**
ಅರಿಯುವ ಶಕ್ತಿ, ಕೆಲಸಮಾಡುವ ಶಕ್ತಿ-ಎಂಬ ಎರಡು ಹಿರಣ್ಯಗರ್ಭನ ಶಕ್ತಿಗಳು

**೧೨೯. ವಿಜ್ಞಾನಸ್ವಭಾವಃ—**
ಅರಿವಿನ ಸ್ವರೂಪವೇ ಆಗಿರುವ ಆತ್ಮನು ೧೧೪.

**೧೩೦. ವಿಜ್ಞಾನೈಕರಸಮ್—**
ಅರಿವೆಂಬ ಒಂದೇ ಜಾತಿಯ ಬ್ರಹ್ಮ,೧೨೨;

# ಅಧ್ಯಾತ್ಮಪ್ರಕಾಶ ಕಾರ್ಯಾಲಯ

## ಹೊಳೆನರಸೀಪುರ.

(ಸ್ಥಾಪಿತವಾದದ್ದು ೧೯೨೦)

ಅಧ್ಯಾತ್ಮವಿದ್ಯೆಯಲ್ಲಿ ಜನರಿಗೆ ಹೆಚ್ಚಿನ
ಆದರವನ್ನುಂಟುಮಾಡಬೇಕೆಂಬ **ಉದ್ದೇಶವುಳ್ಳ** ಈ ಸಂಸ್ಥೆಯು

೧ ಕನ್ನಡ, ಸಂಸ್ಕೃತ, ಇಂಗ್ಲಿಷು ಭಾಷೆಗಳಲ್ಲಿ **ಅನೇಕಗ್ರಂಥಗಳನ್ನು ಪ್ರಕಟಿಸಿರುತ್ತದೆ.** ಇವುಗಳಲ್ಲಿ ಭಾಷ್ಯ, ಟಿಪ್ಪಣಿ, ಪರಿಶಿಷ್ಟ- ಮುಂತಾದವುಗಳೊಡನೆ ಹೊರಕ್ಕೆ ಬಂದಿರುವ ಉಪನಿಷತ್ತುಗಳು, ಭಗವದ್ಗೀತೆ, ಬ್ರಹ್ಮಸೂತ್ರ- ಇವೂ ಸೇರಿವೆ.

**ಈಗ ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲೆಗೆ ಸೇರಿದಂತೆ ಶ್ರೀಶಂಕರಾಚಾರ್ಯರವರ ಸಂಪೂರ್ಣ ಗ್ರಂಥರತ್ನಗಳನ್ನು ಸಮೂಲವಾಗಿ ಟಿಪ್ಪಣಿ ಮುಂತಾದ ಸೌಕರ್ಯಗಳೊಡನೆ ಕನ್ನಡಿಸಿ ಒಂದೊಂದಾಗಿ ಬೆಳಕಿಗೆ ಹಿಡಿಯುತ್ತಲಿದೆ.**

೨. ಅಧ್ಯಾತ್ಮಸಂಬಂಧವಾದ **ಗ್ರಂಥಕಾಲಕ್ಷೇಪ, ಉಪನ್ಯಾಸಗಳು, ಪುರಾಣಶ್ರವಣ, ಅನುಷ್ಠಾನ, ಉತ್ಸವಗಳು-** ಇವುಗಳನ್ನು ಏರ್ಪಡಿಸುತ್ತಿದೆ. **ಪ್ರತಿದಿನವೂ** ಗ್ರಂಥಕಾಲಕ್ಷೇಪವಾಗುತ್ತಿರುತ್ತದೆ. ಪುರಾಣಶ್ರವಣವಾಗುತ್ತಿರುತ್ತದೆ. **ಪ್ರತಿ ಭಾನುವಾರವೂ** ಉಪನ್ಯಾಸಗಳು ಆಗುತ್ತಿರುವವು; **ಪ್ರತಿವರ್ಷವೂ** ಒಂದೆರಡು ಅನುಷ್ಠಾನಗಳನ್ನು ಏರ್ಪಡಿಸಲಾಗುತ್ತಿದೆ, ಶಂಕರಸಪ್ತಾಹವೆಂಬ ತತ್ತ್ವಪ್ರಚಾರಣೆಯ ಉತ್ಸವವು ಈಗ ಹದಿನೈದು ವರ್ಷಗಳಿಂದ **ವರ್ಷಕ್ಕೊಂದುಸಲ** ಕರ್ಣಾಟಕದ ಬೇರೆಬೇರೆಯ ಸ್ಥಳಗಳಲ್ಲಿ ನಡೆಯುತ್ತಿದೆ. ಹಲವು ವಿದ್ವಾಂಸರುಗಳೂ ವೈದಿಕಶಿಖಾಮಣಿಗಳೂ ಈ ಕಾರ್ಯಗಳಲ್ಲಿ ಭಾಗವನ್ನು ವಹಿಸುತ್ತಿರುವರು.

೩ ಜನರ ಉಪಯೋಗಕ್ಕೆ ಒಂದು **ಅಧ್ಯಾತ್ಮಪುಸ್ತಕಭಂಡಾರವನ್ನೂ** ಒಂದು **ವಾಚನಾಲಯವನ್ನೂ** ಇಟ್ಟುಕೊಂಡಿದೆ.

ಪುಸ್ತಕಭಂಡಾರದಲ್ಲಿ ಕನ್ನಡ, ಸಂಸ್ಕೃತ, ಇಂಗ್ಲಿಷು, ಹಿಂದಿ- ಮುಂತಾದ ಭಾಷೆಗಳ ಅಧ್ಯಾತ್ಮಗ್ರಂಥಗಳು ಇರುತ್ತವೆ. ಕಾರ್ಯಾಲಯದಲ್ಲಿ ಬಂದು ಇವುಗಳನ್ನು ಓದುವವರಿಗೆ ಸೌಕರ್ಯವನ್ನು ಕಲ್ಪಿಸುವೆವು

೪. **ಅಧ್ಯಾತ್ಮವಿದ್ಯಾನಿಲಯವೊಂದನ್ನು** ಸ್ಥಾಪಿಸಿದೆ. ಇಲ್ಲಿ ಐದುವರ್ಷಗಳ ಪಾಠಕ್ರಮವನ್ನು ಏರ್ಪಡಿಸಿದೆ. ವೇದಾಂತದ **ಸಿದ್ಧಾಂತತ್ರಯಗಳಲ್ಲಿಯೂ** ಪ್ರಪಂಚದ ಬೇರೆಬೇರೆಯ **ಮತಾಚಾರ್ಯರುಗಳ ಜೀವನಚರಿತ್ರೆ, ಉಪದೇಶಗಳು** ಮತ್ತು ಪರಮಾರ್ಥಸಾಧನಕ್ರಮ-. ಇವುಗಳ ವಿಷಯದಲ್ಲಿಯೂ **ಶಿಕ್ಷಣವನ್ನು** ಕೊಡಿಸಲಾಗುವದು.

ಯೋಗ್ಯರಾದ ವಿದ್ಯಾರ್ಥಿಗಳಿಗೆ ಊಟಕ್ಕೂ ವಸತಿಗೂ ಏರ್ಪಾಡುಮಾಡುವ ಸಂಕಲ್ಪವಿದೆ

೫. **ಕಾರ್ಯಾಲಯದ ಕಟ್ಟಡವು** ಸಿದ್ಧವಾಗಬೇಕಾಗಿದೆ. ಈಗ ಒಂದು ಕುಟೀರವನ್ನು ಕಟ್ಟಿಸಿದೆ; ಒಂದು ಬಾವಿಯನ್ನೂ ತೋಡಿಸಿದೆ.

ಸಂಭಾಗಣಕ್ಕೆ ಕಪ್ಪಿಣದ ತೊಲೆಗಳನ್ನು ತರಿಸಿಟ್ಟಿದೆ. ಉದಾರಮಹಾಶಯರುಗಳ ಕೆಲವರು ಸಹಾಯದ ವಾಗ್ದಾನಮಾಡಿರುತ್ತಾರೆ. ಸಂಸ್ಕೃತಪಾಠಶಾಲೆ, ವಿದ್ಯಾರ್ಥಿಗಳಿಗೆ

ಸ್ತ್ರೀಶಿಕ್ಷಣಬೋಧೆಯ ತರಗತಿಗಳು—ಮುಂತಾದ ಕಾರ್ಯಗಳಿಗೆ ಕಟ್ಟಡವು ಬೇಗನೆ ನಿರ್ಮಾಣವಾಗುವದು ಅವಶ್ಯಕವಾಗಿರುತ್ತದೆ.

೬. ಅಧ್ಯಾತ್ಮಪ್ರಕಾಶವೆಂಬ ಮಾಸಪತ್ರಿಕೆಯು ಹದಿನೈದು ವರ್ಷಗಳಿಂದ ನಡೆದು ಮುದ್ರಣಾಲಯದ ಸೌಕರ್ಯವಿಲ್ಲದೆ ಸದ್ಯಕ್ಕೆ ನಿಂತಿರುತ್ತದೆ. ಇದನ್ನು ಸಮಯವರಿತು ಮತ್ತೆ ಉಜ್ಜೀವನಗೊಳಿಸಬೇಕಾಗಿದೆ.

೭. ಅಧ್ಯಾತ್ಮವಿಚಾರದ ಧರ್ಮಾರ್ಥವಾಙ್ಮಯದ ಕರಪತ್ರಗಳು ಹಲವನ್ನು ಜನರಲ್ಲಿ ಹಂಚಲಾಗಿದೆ.

೮. ಇಲ್ಲಿ ನಡೆಯುವ ಕೆಲಸವು ಧರ್ಮಾರ್ಥವಾಗಿರುತ್ತದೆ; ಬಂದ ಹಣವೆಲ್ಲ ಧಾರ್ಮಿಕಕಾರ್ಯಕ್ಕೇ ವಿನಿಯೋಗವಾಗುತ್ತಿದೆ.

## ಜನರು ಮಾಡಬಹುದಾದ ಸಹಾಯ

(ಅ) **ಪುಸ್ತಕಪ್ರಕಟನೆಗೆ:** ೨೫೦ ರೂ. ಅಥವಾ ಹೆಚ್ಚಾಗಿ ಕೊಟ್ಟವರನ್ನು **ಆಶ್ರಯದಾತ**ರೆಂದೂ ೧೦೦ ರೂ. ಅಥವಾ ಹೆಚ್ಚಾಗಿ ಕೊಟ್ಟವರನ್ನು ಮಹಾಪೋಷಕರೆಂದೂ ೫೦ ರೂ. ಅಥವಾ ಹೆಚ್ಚಿಗೆ ಕೊಟ್ಟವರನ್ನು ಪೋಷಕರೆಂದೂ ಕರೆಯುವೆವು ಪೋಷಕರೂ ಮಹಾಪೋಷಕರೂ ಇಷ್ಟಪಟ್ಟರೆ ತಾವು ಕೊಡುವಷ್ಟು ಹಣದ ಬೆಲೆಯ ಗ್ರಂಥಗಳನ್ನು ಕಾರ್ಯಾಲಯದಿಂದ ಪಡೆದುಕೊಳ್ಳಬಹುದು ಆಶ್ರಯದಾತರಿಗೆ ನಮ್ಮ ಗ್ರಂಥಗಳನ್ನೆಲ್ಲ ಕಾಣಿಕೆಯಾಗಿ ಸಮರ್ಪಿಸುವೆವು.

(ಆ) **ಕಟ್ಟಡಕ್ಕೆ:** ೫೦೦೦ ರೂ ಕೊಟ್ಟವರನ್ನು ಮಹಾಶ್ರಯದಾತರೆಂದೂ ೩೦೦೦ ರೂ. ಕೊಟ್ಟವರನ್ನು ಆಶ್ರಯದಾತರೆಂದೂ ೧೫೦೦ ರೂ ಕೊಟ್ಟವರನ್ನು ಮಹಾಪೋಷಕರೆಂದೂ ೬೫೦ ರೂ ಗಳನ್ನು ಕೊಟ್ಟವರನ್ನು ಪೋಷಕರೆಂದೂ ೧೦೦ ರೂ ಕೊಟ್ಟವರನ್ನು ಪ್ರೋತ್ಸಾಹಕರೆಂದೂ ಸಂಭಾವಿಸಲಾಗುವುದು ಸಹಾಯದ್ರವ್ಯವನ್ನು ಒಂದು ರಿಜಿಸ್ಟರಿನಲ್ಲಿ ಕ್ರಮವಾಗಿ ಬರೆದಿಟ್ಟಿರುತ್ತದೆ

## ಕೃ ತ ಜ್ಞ ತಾ ಪ್ರ ದ ರ್ಶ ನ

ಮುಂದೆ ತೋರಿಸಿರುವ ಆಶ್ರಯದಾತರುಗಳು ಮತ್ತು ಪೋಷಕರ ಪಟ್ಟಿಯಲ್ಲಿ ಮುಖ್ಯವಾಗಿ ಕಾರ್ಯಾಲಯದ ಪ್ರಕಟನೆಗಳಿಗೆ ಅಥವಾ ಪತ್ರಿಕೆಗೆ ಪ್ರೋತ್ಸಾಹವನ್ನು ಕೊಟ್ಟವರು, ಪುಸ್ತಕಭಂಡಾರಕ್ಕೆ ಪುಸ್ತಕಗಳನ್ನು ಕೊಟ್ಟವರು, ಕಾರ್ಯಾಲಯಕ್ಕೆ ನೆಲಗಟ್ಟನ್ನು ದಾನಮಾಡಿರುವವರು— ಇವರ ಹೆಸರನ್ನು ಪಟ್ಟಿಗೆ ಸೇರಿಸಿರುತ್ತದೆ ಕಾರ್ಯಾಲಯದ ಕಟ್ಟಡಕ್ಕೆ ಧನಸಹಾಯಮಾಡಿರುವವರ ಹೆಸರನ್ನು ಬೇರೆಯಾಗಿ ಸಿದ್ಧವಾಗುವ ಪಟ್ಟಿಯಲ್ಲಿ ಪ್ರಕಟಿಸಲಾಗುವದು.

ಕಟ್ಟಡ, ವಿದ್ಯಾಲಯ, ಪುಸ್ತಕಪ್ರಕಟನೆ, ಪುಸ್ತಕಭಂಡಾರ, ಮಾಸಪತ್ರಿಕೆ, ಧರ್ಮಾರ್ಥವಾಙ್ಮಯ— ಇವುಗಳಲ್ಲಿ ಯಾವದೊಂದಕ್ಕೆ ಕಳುಹಿಸುವ ಸಹಾಯಧನವನ್ನೂ ಅದು ಎಷ್ಟೇ ಅಲ್ಪವಾಗಿದ್ದರೂ ಮಾಸಪತ್ರಿಕೆಯಲ್ಲಿ ಪ್ರಕಟಿಸಿ ಒಂದು ರಿಜಿಸ್ಟರಿನಲ್ಲಿ ಬರೆದಿಟ್ಟಿರುತ್ತದೆ. ಕಾರ್ಯಾಲಯಕ್ಕೆ ಹಣವನ್ನು ಕಳುಹಿಸುವವರು ತಮ್ಮ ಸಹಾಯವನ್ನು ಯಾವ ಭಾಗಕ್ಕೆ ಉಪಯೋಗಿಸಬೇಕೆಂಬುದನ್ನು ದಯವಿಟ್ಟು ತಿಳಿಸಬೇಕಾಗಿ ಕೋರಿದೆ ಅನಿರ್ದಿಷ್ಟವಾಗಿ ಬರುವ ಹಣವನ್ನು ಕಾರ್ಯಾಲಯದ ಅಧ್ಯಕ್ಷರು ಸೂಕ್ತವೆಂದು ತೋರುವ ನಿಧಿಗೆ ಉಪಯೋಗಿಸುವರು.

## ಕಾರ್ಯಾಲಯದ ಆಶ್ರಯದಾತರುಗಳು*

೧. ರಾಜಧರ್ಮಪ್ರಸಕ್ತ ಎ.ಆರ್. ನಾಗೇಶ್ವರ ಅಯ್ಯರ್‌ರವರು, ಬಿ.ಎ.,ಬಿ.ಎಲ್., ಹೈಕೋರ್ಟು ಜಡ್ಜ್, ಬೆಂಗಳೂರು ಸಿಟಿ.

೨. ಶ್ರೀಯುತ ಬಿ ನಂಜುಂಡಯ್ಯನವರು ಬಿ.ಎ.,ಬಿ.ಎಲ್., ಅಡ್ವೋಕೇಟ್, ಬೆಂಗಳೂರು ಸಿಟಿ.

೩. ,, ಸಿ. ಎನ್. ನರಸಿಂಹಯ್ಯನವರು, ಪ್ಲೀಡರ್, ಹೊಳೆನರಸೀಪುರ.

೪. ,, ಗರಡಿ ರಾಜಪ್ಪನವರು, ಬೆಂಗಳೂರು.

೫. ,, ಅರಕಲಗೂಡು ಶ್ರೀಕಂಠಯ್ಯನವರು, ಪ್ಲೀಡರ್, ಹೊಳೆನರಸೀಪುರ.

೬. ,, ವೈ. ಎಸ್ ಹಿರಿಯಣ್ಣಯ್ಯನವರು, ಗೌ॥ ಕಂಟ್ರಾಕ್ಟರು.

೭. ,, ಸಿ.ಎಸ್. ಸೂರ್ಯನಾರಣಪ್ಪನವರು, ಸರ್ವೆಯರ್, ಬೆಂಗಳೂರು.

೮. ,, ಎಚ್. ವಿ ರಂಗರಾವ್, ಜಮೀನುದಾರರು, ಹೊಳಲುಕೆರೆ.

೯. ದಿವಂಗತ ಆರ್. ಎಸ್ ಶ್ರೀನಿವಾಸಯ್ಯನವರು, ಪ್ಲೀಡರ್, ಹೊಳೆನರಸೀಪುರ.

## ಮಹಾಪೋಷಕರುಗಳು

೧. ಶ್ರೀಯುತ ಆರ್. ರಾಮಸ್ವಾಮಯ್ಯನವರು, ಪ್ಲೀಡರ್, ಹೊಳೆನರಸೀಪುರ.

೨. ,, ಕೆ. ಶ್ರೀಕಂಠಯ್ಯನವರು, ಸ್ಟಾಟಿಸ್ಟಿಕಲ್ ಆಫೀಸರ್, ಬಂಗಾಳ ನಾಗಪುರ ರೈಲ್ವೆ, ಕಲಕತ್ತ.

೩. ,, ಕೆ. ನಾರಾಯಣಸ್ವಾಮಿ, ಬಿ ಇ., ಅ॥ ಇಂಜನಿಯರ್.

೪. ,, ಜಿ. ಕೃಷ್ಣಸ್ವಾಮಿ, ಮ್ಯಾನೇಜಿಂಗ್ ಏಜೆಂಟ್, ಸಿಲ್ಕ್ ಫಿಲೇಚರ್ಸ್

## ಪೋಷಕರುಗಳು

೧. ವೇ॥ ಬ್ರ॥ ಶ್ರೀ ಎಸ್. ವಿಠಲಶಾಸ್ತ್ರಿಗಳು, ವೇದಾಂತಶಿರೋಮಣಿ, ವೇದಾಂತವಿಶಾರದ, ವಿದ್ಯಾವಾಚಸ್ಪತಿ, ಮೈಸೂರು.

೨. ವೇ॥ ಡಿ. ನಂಜುಂಡಶಾಸ್ತ್ರಿಗಳು, ದೊಡ್ಡಹೆಜ್ಜಾಜಿ, ದೊಡ್ಡಬಳ್ಳಾಪುರ ತಾ॥

೩. ಶ್ರೀಯುತ ಗುರುಮೂರ್ತಪ್ಪನವರು, ನಾಟಕಮಂಡಲಿ.

೪ ,, ಎಸ್ ವಿ ವೆಂಕಟಸುಬ್ಬಯ್ಯನವರು, ರಾ॥ ಕನ್ನಡ ಪಂಡಿತರು, ಹರಪನಹಳ್ಳಿ, ಬಳ್ಳಾರಿ.

೫. ,, ಓಂಕಾರಪ್ಪ ವೀರಭದ್ರಪ್ಪ, ಅರಳಿಕಟ್ಟಿ, ಇಲಕಲ್ಲ, ಬಿಜಾಪುರ.

೬. ,, ಶ್ರೀಗುರುಶಂಕರಾಚಾರ್ಯ ಆಶ್ರಮ, ಮಾಟಲದಿಣ್ಣೆ, ರಾಯಚೂರು ಜಿಲ್ಲಾ, ಹೈದರಾಬಾದ್ ದಖನ್.

೭. ,, ಎಸ್. ವಿ ಗಣಪತಿ, ಎ.ಎಮ್.ಐ.ಇ.ಇ., ಕನ್ಸಲ್ಟಿಂಗ್ ಇಂಜನಿಯರ್, ಮದರಾಸು.

೮ ,, ಧರ್ಮಪಾಲಯ್ಯನವರ., ಮಂಗಳೂರು.

೯ ,, ಬಿ. ಹೆಚ್. ಮುನಿಸ್ವಾಮಿರಾವ್, ಬೆಂಗಳೂರು.

೧೦. ,, ಕೃಷ್ಣಗೌಡ ಹನುಮಂತಗೌಡ ಆದಪ್ಪಗೌಡರ, ಹುಲಕೋಟಿ.

೧೧ ಶ್ರೀಮತಿ ಸರೋಜಮ್ಮನವರು, ಹೊಳೆನರಸೀಪುರ.

---

* [illegible] ಅರಳಿ [illegible]ಗಳಾಗಿದ್ದ ಕೈಲಾಸವಾಸಿ ಮಾಗಾನಹಳ್ಳಿ [illegible] ಸಂಸ್ಥೆಗೆ ಬೀಜಭೂತವಾಗಿ ಕೊಟ್ಟಮೊದಲು ಆಶ್ರಯಧನ [illegible]

## ಪ್ರಸ್ಥಾನತ್ರಯ ವಿವರಣೆ

| ಪುಸ್ತಕ | ಬೆಲೆ | ಅಂಚೆ |
|---|---|---|
| | ರೂ. ಆ. ಪೈ. | ರೂ. ಆ. ಪೈ. |
| ೧೮. ಕೇನೋಪನ್ಯಾಸಮಂಜರಿ | ೦-೬-೦ | ೦-೧-೩ |
| ೧೯. ಮುಂಡಕೋಪನ್ಯಾಸಮಂಜರಿ | ೦-೧೦-೦ | ೦-೧-೩ |
| ೨೦. ಕೇನೋಪನ್ಯಾಸ ಮತ್ತು ಮುಂಡಕೋಪನ್ಯಾಸಮಂಜರಿ | ೧-೦-೦ | ೦-೧-೬ |
| ೨೧. ವೇದಾಂತದರ್ಶನ (ಬ್ರಹ್ಮಸೂತ್ರದ ಪರಿಚಯ) | ೦-೫-೦ | ೦-೦-೯ |
| **ಪ್ರಕರಣಗಳು** | | |
| ೨೨. ಉಪದೇಶಸಾಹಸ್ರಿ ಗದ್ಯಭಾಗ (ಸಾಧಾರಣ) | ೧-೦-೦ | ೦-೧-೯ |
| ೨೩. ಉಪದೇಶಸಾಹಸ್ರಿ ಗದ್ಯ (ಅರ್ಥಕ್ಯಾಲಿಕೊ) | ೧-೪-೦ | ೦-೨-೩ |
| ೨೪. ಉಪದೇಶಸಾಹಸ್ರಿ ಪದ್ಯ (ಅರ್ಥಕ್ಯಾಲಿಕೊ) | ೧-೮-೦ | ೦-೨-೯ |
| ೨೫. ಉಪದೇಶಸಾಹಸ್ರಿ ಪದ್ಯ (ಪೂರಕ್ಯಾಲಿಕೊ) | ೨-೦-೦ | ೦-೬-೦ |
| ೨೬. ಪರಮಾರ್ಥಚಿಂತಾಮಣಿ (ಅರ್ಧಕ್ಯಾಲಿಕೊ) | ೩-೪-೦ | ೦-೬-೦ |
| ೨೭. ಪರಮಾರ್ಥಚಿಂತಾಮಣಿ (ಪೂರಕ್ಯಾಲಿಕೊ) | ೪-೪-೦ | ೦-೬-೦ |
| ೨೮. ಉಪನಿಷತ್ತುಗಳ ಮೊದಲನೆಯ ಪರಿಚಯ | ೦-೬-೦ | ೦-೧-೩ |
| ೨೯. ಶಂಕರಸಿದ್ಧಾಂತ (ಸಾಧಾರಣ) | ೦-೮-೦ | ೦-೧-೩ |
| ೩೦. ಶಂಕರಸಿದ್ಧಾಂತ (ದಪ್ಪರಟ್ಟು) | ೦-೧೦-೦ | ೦-೧-೯ |
| ೩೧. ವೇದಾಂತಬಾಲಬೋಧೆ (ಪ್ರಾತಃಸ್ಮರಣಸ್ತೋತ್ರವಿವರಣ) | ೦-೫-೦ | ೦-೦-೯ |
| ೩೨. ವೇದಾಂತಪ್ರವೇಶಿಕೆ (ಅದ್ವೈತಪಂಚರತ್ನದ ವಿವರಣ) | ೦-೬-೦ | ೦-೦-೯ |
| ೩೩. ಲಕ್ಷ್ಮೀನರಸಿಂಹಪಂಚರತ್ನ (ಅರ್ಥವಿವರಣಸಹಿತ) | ೦-೪-೦ | ೦-೦-೯ |
| ೩೪. ಮೋಹಮುದ್ಗರ (ಭಜಗೋವಿಂದಸ್ತೋತ್ರ) | ೦-೧-೬ | ೦-೦-೯ |
| ೩೫. ಸವಾರ್ತಿಕಪಂಚೀಕರಣ (ಸಾರ್ಥ) | ೦-೬-೦ | ೦-೦-೯ |
| ೩೬. ಆತ್ಮಬೋಧೆ (ಭಾವಾರ್ಥ, ಟಿಪ್ಪಣಿ, ಪರಿಶಿಷ್ಟ) | ೦-೩-೦ | ೦-೦-೯ |
| ೩೭. ದೃಗ್ದೃಶ್ಯವಿವೇಕ (ಅರ್ಥವಿವರಣೆಗಳೊಡನೆ) | ೦-೩-೦ | ೦-೦-೯ |
| ೩೮. ವಾಕ್ಯವೃತ್ತಿ (ಮೂಲ. ಅರ್ಥ, ಟಿಪ್ಪಣಿ, ಪರಿಶಿಷ್ಟಸಹಿತ) | ೦-೪-೦ | ೦-೦-೯ |
| ೩೯. ಸ್ವಾತ್ಮಪ್ರಕಾಶಿಕೆ ( ,, ,, ) | ೦-೩-೦ | ೦-೦-೯ |
| ೪೦. ಶಂಕರಮಹಾಮನನ | ೦-೨-೬ | ೦-೦-೯ |
| ೪೧. ವೇದಾಂತಡಿಂಡಿಮ (ಭಾವಾರ್ಥಸಹಿತ) | ೦-೪-೦ | ೦-೦-೯ |
| ೪೨. ಅಪರೋಕ್ಷಾನುಭೂತಿ (ಭಾವಾರ್ಥ, ವಿವರಣಸಹಿತ) | ೦-೧೨-೦ | ೦-೧-೯ |
| ೪೩. ಅಪರೋಕ್ಷಾನುಭೂತಿ (ದಪ್ಪರಟ್ಟು) | ೦-೧೫-೦ | ೦-೨-೩ |
| ೪೪. ಆತ್ಮವಿದ್ಯಾವಿಲಾಸ (ಭಾವಾರ್ಥಸಹಿತ) | ೦-೪-೬ | ೦-೦-೯ |
| ೪೫. ಶ್ರೀರಾಮಹೃದಯ (ಅರ್ಥ- ಸಾರಸಹಿತ) | ೦-೧-೬ | ೦-೦-೯ |
| ೪೬. ಅಧ್ಯಾತ್ಮ ವೆಂದರೇನು ? | ೦-೧-೬ | ೦-೦-೯ |
| ೪೭. ವೇದಾಂತವಿಚಾರದ ಇತಿಹಾಸ | ೧-೧೨-೦ | ೦-೨-೯ |

ಪುಸ್ತಕಕ್ಕೆ ಮೊಬಲಗು ಕಳುಹಿಸುವವರು ಮರೆಯದೆ ಅಂಚೆಯಹಾಸಲನ್ನೂ ಸೇರಿಸಿ ಕಳುಹಿಸಬೇಕು.

**ಮ್ಯಾನೇಜರ್, ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.**

# ಅಚ್ಚಿಗೆ ಸಿದ್ಧವಾಗಿರುವ ಪುಸ್ತಕಗಳು.

## ಕನ್ನಡ

೧. **ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ** ಇದರ ಎರಡನೆಯ ಸಂಪುಟ.

೨. **ನೈಷ್ಕರ್ಮ್ಯಸಿದ್ಧಿ:** ಅನುವಾದ, ಟಿಪ್ಪಣಿ, ಕನ್ನಡ ಸಾರ –ಮುಂತಾದವುಗಳೊಡನೆ

೩. **ಉಪದೇಶಸಾಹಸ್ರಿ** (ಪದ್ಯಭಾಗ):- ೧೪ನೆಯ ಪ್ರಕರಣದಿಂದ ೧೭ನೆಯ ಪ್ರಕರಣ ಪೂರ

೪. **ವಿವೇಕಚೂಡಾಮಣಿ:** ಅನುವಾದ, ಟಿಪ್ಪಣಿ, ಸಾರ, ಮುಂತಾದವುಗಳೊಡನೆ.

೫. **ಭಗವದ್ಗೀತಾರ್ಥಸರ್ವಸ್ವ:** ಗೀತೆಯ ನಾನಾವಿಚಾರಗಳ ಚರ್ಚೆಯನ್ನೊಳಗೊಂಡದ್ದು.

೬. **ನಾರದಭಕ್ತಿಸೂತ್ರ:** ಮೂಲ, ಭಾವಾರ್ಥ, ಸಂಕ್ಷಿಪ್ತ ಟಿಪ್ಪಣಿಗಳೊಡನೆ.

೭ **ತೈತ್ತಿರೀಯೋಪನಿಷತ್ತು:** ಭಾಷ್ಯ, ವಾರ್ತಿಕ, ಟಿಪ್ಪಣಿ, ಸಾರ-ಮುಂತಾದವುಗಳೊಡನೆ

೮ **ಐತರೇಯೋಪನಿಷತ್ತು:** ತೈತ್ತಿರೀಯದಂತೆ.

## ಸಂಸ್ಕೃತ

೧ **ಸುಗಮಾ:** ಅಧ್ಯಾಸಭಾಷ್ಯದ ಹೊಸ ಸಂಸ್ಕೃತವ್ಯಾಖ್ಯಾನ.

೨. **ಮಾಂಡೂಕ್ಯರಹಸ್ಯವಿವೃತಿಃ:** ಉಪನಿಷತ್ತಿನ ಮತ್ತು ಆಗಮಪ್ರಕರಣದ ವ್ಯಾಖ್ಯಾನ.

೩. **ಕ್ಲೇಶಾಪಹಾರಿಣೀ:** ನೈಷ್ಕರ್ಮ್ಯಸಿದ್ಧಿಯ ವ್ಯಾಖ್ಯಾನ.

೪. **ವೇದಾಂತಬಾಲಬೋಧಿನೀ:** ಶ್ರೀ ಶಂಕರಾಚಾರ್ಯಕೃತ ಪ್ರಾತಃಸ್ಮರಣಸ್ತೋತ್ರದ ವ್ಯಾಖ್ಯಾನ

೫. **ಸಭಾಷ್ಯಾ ಕೇನೋಪನಿಷತ್:** ಈಶಾವಾಸ್ಯದಂತೆ ಟಿಪ್ಪಣ್ಯಾದಿಗಳೊಡನೆ.

## ಇಂಗ್ಲಿಷ್

**Knowledge and Ignorance** : ಅಧ್ಯಾಸಭಾಷ್ಯದ ಇಂಗ್ಲಿಷ್ ಅನುವಾದ, ಟಿಪ್ಪಣಿ ಮುಂತಾದವುಗಳೊಡನೆ

ಹಲವು ಕನ್ನಡ, ಸಂಸ್ಕೃತ, ಇಂಗ್ಲಿಷು ಪುಸ್ತಕಗಳು ಅಚ್ಚಿಗೆ ಸಿದ್ಧವಾಗುತ್ತಿವೆ.

ಭಕ್ತಿಚಂದ್ರಿಕೆ, ರಾಜಯೋಗ, ಕರ್ಮಯೋಗ, ವೈತಥ್ಯಪ್ರಕರಣ, ಅದ್ವೈತಪ್ರಕರಣ ಮುಂತಾದ ಗ್ರಂಥಗಳ ಎರಡನೆಯ ಮುದ್ರಣವು ಆಗಬೇಕಾಗಿದೆ.

---

**ಹೆಚ್ಚು ತಿಳಿವಳಿಕೆ ಸಿಕ್ಕುವ ವಿಳಾಸ:—**

**ಮ್ಯಾನೇಜರ್, ಅಧ್ಯಾತ್ಮಪ್ರಕಾಶ ಕಾರ್ಯಾಲಯ,**

**ಹೊಳೆನರಸೀಪುರ**